ಸಂ. 3–4

# ಅನಿಕೇತನ

(ಯೆಹೂದೀ ಸಾಹಿತ್ಯ ವಿಶೇಷಾಂಕ)

---

ಯೆಹೂದ್ಯರ ದಾರ್ಶನಿಕತೆ ○ ಹೀಬ್ರೂ ಭಾಷೆಯಲ್ಲಿ ಆಧುನಿಕ ಯೆಹೂದೀ ಸಾಹಿತ್ಯ ○ ಯಿಡ್ಡಿಷ್ ಭಾಷೆಯಲ್ಲಿ ಆಧುನಿಕ ಯೆಹೂದೀ ಸಾಹಿತ್ಯ ○ ಹೀಬ್ರೂ–ಯಿಡ್ಡಿಷೇತರ ಭಾಷೆಗಳಲ್ಲಿ ಯೆಹೂದೀ ಸಾಹಿತ್ಯ ○ ಪ್ರಮುಖ ಯೆಹೂದೀ ಸಾಹಿತಿಗಳು ○ ಕವಿತೆ ○ ಸಣ್ಣಕತೆ

---



ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು

ಸಂ. 3–4
ಜನವರಿ 1991 – ಮಾರ್ಚ್ 1991
ರಿಜಿಸ್ಟ್ರೇಶನ್ ನಂಬರ್ 45646/88

# ಅನಿಕೇತನ

ಅನುವಾದ ಸಾಹಿತ್ಯಕ್ಕೆ ಮೀಸಲಾದ ತ್ರೈಮಾಸಿಕ

(ಯೆಹೂದೀ ಸಾಹಿತ್ಯ ವಿಶೇಷಾಂಕ)

ದೇಜಗೌ

ಸಂಪಾದಕರು :

ಬಿ. ವೈ. ಲಲಿತಾಂಬ
ಡಾ॥ ಆರ್ವಿಯಸ್. ಸುಂದರಂ
ಡಾ॥ ಎಚ್. ಎಸ್. ವೆಂಕಟೇಶಮೂರ್ತಿ



ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು

ಅನಿಕೇತನ :
ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ
ಸಂ. 3-4. ಜನವರಿ 1991 – ಮಾರ್ಚ್ 1991

ನಿರ್ವಾಹಕರು :
ರಿಜಿಸ್ಟ್ರಾರ್
ಕರ್ನಾಟಕ ಸಾಹಿತ್ಯ ಅಕಾಡೆಮಿ
ನಂ. 14/7-ಅ, ನೃಪತುಂಗ ರಸ್ತೆ, ಬೆಂಗಳೂರು–560 002

ವಾರ್ಷಿಕ ಚಂದಾ : ರೂ. 10
ಆಜೀವ ಚಂದಾ : ರೂ. 100

ಮುದ್ರಕರು :
ರಶ್ಮಿ ಮುದ್ರಣ
ಸುಧಾಮನಗರ, ಬೆಂಗಳೂರು–560 027

# ಪರಿವಿಡಿ

# ಯೆಹೂದ್ಯರ ದಾರ್ಶನಿಕತೆ

ಬಿ. ಎಸ್. ವೆಂಕಟಲಕ್ಷ್ಮಿ

ಹಲವಾರು ರಾಷ್ಟ್ರಗಳಲ್ಲಿ ಚೆದುರಿದ್ದು ಅನೇಕ ಜನರೊಂದಿಗೆ ಬೆರೆತಿದ್ದರೂ ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡ ವಿಶಿಷ್ಟ ಜನರೆಂದರೆ ಯೆಹೂದ್ಯರು. ಸುಮಾರು 2000 ವರ್ಷಗಳ ಕಾಲ ತಮ್ಮದೇ ಆದ ನೆಲೆ ಎಂಬುದನ್ನೇ ಕಾಣದಿದ್ದಂಥ ಜನ. 1948ರಲ್ಲಿ ಇಸ್ರೇಲ್‌ನ್ನು ಇವರ ತೌರೆಂದು ಘೋಷಿಸಲಾದರೂ ಇವರ ವಾಸ ವಿವಿಧ ದೇಶಗಳಲ್ಲಿ. 1961ರ ಹೊತ್ತಿಗೆ ಜಗತ್ತಿನಲ್ಲಿದ್ದ 12,926,180 ಯೆಹೂದ್ಯರಲ್ಲಿ ಅರ್ಧದಷ್ಟು ಜನ ವಾಸವಾಗಿದ್ದುದು ಸಂಯುಕ್ತ ಸಂಸ್ಥಾನ ಮತ್ತು ಕೆನಡಾಗಳಲ್ಲಿ. ಆಗ ಸುಮಾರು 2,000,000 ಜನರು ಮಾತ್ರ ಇಸ್ರೇಲ್‌ನಲ್ಲಿ ತಳವೂರಿದ್ದರಷ್ಟೆ.

ಯೆಹೂದ್ಯ ಸಮುದಾಯವನ್ನು ಒಟ್ಟಾಗಿ ಬಿಗಿದಿರುವ ತಂತು ಅವರ ಧರ್ಮ ಶ್ರದ್ಧೆ. ತಾವಿರುವ ಸ್ಥಳಗಳಲ್ಲಿನ ಪದ್ಧತಿಗಳನ್ನು ಎಷ್ಟೇ ಅಳವಡಿಸಿಕೊಂಡಿರಲಿ, ಅಲ್ಲಿನ ಭಾಷೆಗಳನ್ನೇ ಆಡಿರಲಿ, ತಮ್ಮದೇ ಆದ ಕೊಡುಗೆಗಳನ್ನು ನೀಡಿರಲಿ, ವಿಶ್ವದ ನಾನಾ ಎಡೆಗಳಲ್ಲಿ ವಾಸವಾಗಿರುವ ಇನ್ನಿತರ ಯೆಹೂದ್ಯರೊಂದಿಗೆ ಇವರು ಹಂಚಿಕೊಂಡಿರುವುದು ಏಕ ರೀತಿಯ ನಂಬಿಕೆಗಳು. ಇತ್ತೀಚಿನವರೆಗೆ ಇವರು ಬೇರೆ ಪಂಗಡಗಳೊಂದಿಗೆ ವಿವಾಹ ಸಂಬಂಧವನ್ನು ಏರ್ಪಡಿಸಿಕೊಳ್ಳದಿರುವಷ್ಟು ಕಟ್ಟುನಿಟ್ಟು ಸನಾತನಿಗಳು.

ಯೆಹೂದ್ಯರ ಇತಿಹಾಸ 4,000 ವರ್ಷಗಳಷ್ಟು ಹಿಂದಿನದು. ಯೆಹೂದ್ಯರ ಪಿತೃ ಎಂಬುದಾಗಿ ಭಾವಿಸಲ್ಪಟ್ಟ ಏಬ್ರಹಾಂ, ಕೆನಾನ್ ಎಂಬ ಪ್ರದೇಶದಲ್ಲಿ (ಈಗಿನ ಇಸ್ರೇಲ್) ವಾಸಮಾಡಲಾರಂಭಿಸಿದ ಕಾಲದಿಂದ. ಏಬ್ರಹಾಂ, ಅವನ ಮಗ ಐಸಾಕ್, ಮೊಮ್ಮಗ ಜಾಕೋಬ್ ಇವರ ಜೀವನ ವಿವರಗಳಿರುವುದು ಹಳೆಯ ಒಡಂಬಡಿಕೆಯಲ್ಲಿ. ಇವರು ಹಿಬ್ರೂ ಪಿತೃಗಳು. ಜಾಕೋಬ್‌ನ ಹೆಸರನ್ನು ಇಸ್ರೇಲ್ ಎಂಬುದಾಗಿ ಬದಲಾಯಿಸಿದ ನಂತರ ಪ್ರಾಚೀನ ಯೆಹೂದ್ಯರನ್ನು ಇಸ್ರೇಲಿಯರು ಅಥವಾ ಹೀಬ್ರೂಗಳೆಂದು ಕರೆಯಲಾಯಿತು. ಬೈಬಲ್‌ನ ಅನ್ವಯ ಯೆಹೂದ್ಯ ಸಮುದಾಯ ಕ್ಷಾಮವನ್ನು ತಪ್ಪಿಸಿಕೊಳ್ಳಲು ಈಜಿಪ್ಟ್‌ಗೆ ತೆರಳಿ ಅಲ್ಲಿ ಅನೇಕ ವರ್ಷಗಳ ಗುಲಾಮಗಿರಿಯ ನಂತರ ಮೋಸಸ್ ಹಾಗೂ ಅವನ ಸೋದರ ಅರೋನ್‌ನ ನೆರವಿನಿಂದ

ಸ್ವತಂತ್ರರಾದರು. ನಲವತ್ತು ವರ್ಷಗಳ ಕಾಲ ಈಜಿಪ್ಟ್ ಮತ್ತು ಪ್ಯಾಲಸ್ಟೈನ್ ಮಧ್ಯದಲ್ಲಿನ ಸಿನಾಯ್‌ನ ದಟ್ಟಡವಿಗಳಲ್ಲಿ ಅಲೆದಾಡಿದರು. ಅವರ ಮುಖಂಡ ಮೋಸಸ್‌ನ ಮುಖಾಂತರ ಈ ಸಂದರ್ಭದಲ್ಲಿ ಭಗವಂತನು ಅವರಿಗೆ 'ಹತ್ತು ಕಟ್ಟಳೆಗಳನ್ನು' (ಟೆನ್ ಕಮಾಂಡ್‌ಮೆಂಟ್ಸ್) ನೀಡಿದನೆಂದು ಪ್ರತೀತಿ. ಈ ಕಟ್ಟಳೆಗಳೇ ಯೆಹೂದ್ಯರ ಧರ್ಮವಾದ 'ಜುಯೇಯಿನಿಂ'ನ ಮೂಲಾಧಾರ. ದೈವಭಕ್ತಿ, ಮಾತಾಪಿತರು ಹಾಗೂ ಹಿರಿಯರಿಗೆ ಮನ್ನಣೆ, ಆಗಂತುಕರನ್ನೂ ಒಳಗೊಂಡಂತೆ ನೆರೆಯವರೊಂದಿಗೆ ಸೌಹಾರ್ದಯುತ ಸಂಬಂಧ, ಪ್ರಾಣಿದಯೆ, ಶಾಂತಿಪಾಲನೆ ಇವರ ಧರ್ಮದ ಉದಾತ್ತ ಧ್ಯೇಯಗಳು. ವ್ಯಕ್ತಿ ಸ್ವಾತಂತ್ರ್ಯವೂ ಇವರ ಧರ್ಮದ ಪ್ರಮುಖ ಗುರಿ. ಇವರ ಧಾರ್ಮಿಕ ಶ್ರದ್ಧೆಯ ಮೂಲದಿಂದ ಹುಟ್ಟಿಕೊಂಡ ವಿಶ್ವದ ಎರಡು ಪ್ರಮುಖ ಧರ್ಮಗಳು – ಕ್ರೈಸ್ತ ಧರ್ಮ ಹಾಗೂ ಇಸ್ಲಾಂ ಧರ್ಮ.

ಆಧುನಿಕ ಕಾಲದಲ್ಲಿ ಯೆಹೂದ್ಯರ ಧಾರ್ಮಿಕ ಶ್ರದ್ಧೆಗೆ ಹಲವಾರು ಕವಲುಗಳು. ಜರ್ಮನಿಯಲ್ಲಿ 1840ರಲ್ಲಿ ಇದರ ಸುಧಾರಣೆ ಆರಂಭವಾಗಿ ಸಂಯುಕ್ತ ಸಂಸ್ಥಾನ ಮತ್ತು ಕೆನಡಾಗೆ ವ್ಯಾಪಿಸಿತು. ಸುಮಾರು 100 ವರ್ಷಗಳಿಗಿಂತಲೂ ಹಿಂದೆ ಯೆಹೂದ್ಯರು ಪ್ಯಾಲಸ್ಟೈನ್‌ನಲ್ಲಿ ತಮ್ಮ ನೆಲೆಯನ್ನು ಪುನರ್ನಿರ್ಮಿಸುವ ಕಾರ್ಯವನ್ನು ಆರಂಭಿಸಿದಾಗ ಹುಟ್ಟಿಕೊಂಡದ್ದು ಜಿಯೋನಿಯನ್ ಚಳವಳಿ. 1948ರ ಹೊತ್ತಿಗೆ ನೂತನ ಇಸ್ರೇಲ್‌ನ ಉಗಮ. 1962ರ ಹೊತ್ತಿಗೆ ಸುಮಾರು ಎರಡು ಮಿಲಿಯ ಯೆಹೂದ್ಯರಿಗೆ ಅಲ್ಲಿ ನೆಲೆ.

*

ಅಲ್ಪಸಂಖ್ಯಾತರೆನ್ನಿಸಿದರೂ ವಿಶ್ವದ ಪ್ರಮುಖ ಜನಾಂಗಗಳಲ್ಲಿ ಒಬ್ಬರೆನ್ನಿಸಿದ ಯೆಹೂದ್ಯರನ್ನು ಕುರಿತು ಅಭಿವ್ಯಕ್ತಿಗೊಂಡಿರುವ ಅಭಿಪ್ರಾಯಗಳು ಅನೇಕ. ಅವರನ್ನು ಕುರಿತಂಥ ತಾತ್ವಿಕ ಚಿಂತನೆಗಳು ಇಲ್ಲವೆ ಇವರ ಜೀವಿತದ ಒಂದು ನಿರ್ದಿಷ್ಟ ಅವಧಿಗೆ ಸಂಬಂಧಿಸಿದ ಅಧ್ಯಯನಗಳು ಮಹತ್ತ್ವಪೂರ್ಣವೆನ್ನಿಸಿವೆ. ಆದರೆ ಕೆಲವೊಮ್ಮೆ ಇವು ವೈಯಕ್ತಿಕವೆಂಬುದಾಗಿಯೂ ಅನ್ನಿಸದಿರದು. ಯೆಹೂದಿ ತತ್ತ್ವಶಾಸ್ತ್ರ ಹಾಗೂ ಬೌದ್ಧಿಕತೆಯನ್ನು ಕುರಿತ ಚಟುವಟಿಕೆಗಳ ಕೇಂದ್ರಗಳೆನ್ನಿಸಿರುವ ಸಂಯುಕ್ತ ಸಂಸ್ಥಾನ ಮತ್ತು ಇಸ್ರೇಲ್ ಹಾಗೂ ಫ್ರಾನ್ಸ್ ಮತ್ತು ಇಂಗ್ಲೆಂಡ್ ಮೊದಲಾದ ಸ್ಥಳಗಳಿಗೆ ಇವು ಹೆಚ್ಚು ಅನ್ವಯವಾಗುತ್ತದೆ. ಯೆಹೂದ್ಯರ ಚಿಂತನೆಗಳಿಗೆ ಸಂಬಂಧಿಸಿದಂತೆ ಯಾವುದೇ ನಿಖರ ನಿರ್ಧಾರಕ್ಕೆ ಬರುವುದು ಅವಸರದ ನಿರ್ಣಯವೆನ್ನಿಸಿದರೂ, ಈ ಸಂಬಂಧ ಹೊರಹೊಮ್ಮಿರುವ ಹಲವಾರು ಆಲೋಚನೆಗಳು, ಸ್ಥಾಪಿತಗೊಂಡ ಸಿದ್ಧಾಂತಗಳು ಇವುಗಳೆಡೆಗೆ ನೋಟ ಹರಿಸುವುದರಿಂದಾಗಿ ಈ ಜನಾಂಗವನ್ನು ಅರ್ಥಮಾಡಿಕೊಳ್ಳಲು ಸ್ವಲ್ಪವಾದರೂ ಸಾಧ್ಯವೆನ್ನಿಸುತ್ತದೆ.

ಯೆಹೂದ್ಯರನ್ನು ಕುರಿತಂತೆ ಕೂಲಂಕಶವಾಗಿ ಅಧ್ಯಯನ ಮಾಡಿರುವವರು ಹಲವಾರು ದಾರ್ಶನಿಕರು. ಮಧ್ಯಯುಗದ ಹಯಾಯೆ ಬಾಲ್ಕಿಯಿಂದ ಹಿಡಿದು

ಸಮಕಾಲೀನದ ಡಕಾಸ್ಟಾ, ಸ್ಪೈನೋಜಾ, ಮೆಂಡಲ್‌ಸನ್, ಸಾಮ್ಯುಯಲ್ ಹಿಲ್ಕ್‌ರ ವರೆಗೆ ಅನೇಕ ಜನರು ತಮ್ಮ ಚಿಂತನೆಗಳ ಹಿನ್ನೆಲೆಯಲ್ಲಿ ಅನೇಕ ನಿರ್ಣಯಗಳಿಗೆ ಬಂದರು. ಮಧ್ಯ ಏಶಿಯಾದಲ್ಲಿ 9ನೇ ಶತಮಾನದಲ್ಲಿ ಜೀವಿಸಿದ್ದ ಬಾಲ್ಕಿ, ಬೈಬಲ್‌ನಲ್ಲಿ ಉಲ್ಲೇಖಗೊಂಡಿರುವ ಆರಾಧ್ಯ ದೈವವನ್ನೇ ಟೀಕಿಸಿ, ಪ್ರಚಲಿತ ಪಿಡುಗುಗಳ ಹಿನ್ನೆಲೆಯಲ್ಲಿ ಆತನ ಸರ್ವವ್ಯಾಪಕತೆಯೇ ನ್ಯಾಯಯುತವಾದದ್ದಲ್ಲ ಎಂಬ ಅಭಿಪ್ರಾಯವನ್ನು ಸೂಚಿಸಿದರೆ, ಸಾದಿಯಾ ಜಗತ್ತಿನ ಶಾಶ್ವತತೆಯನ್ನು ಕೇವಲ ನಿರಾಕರಿಸಿದ್ದು ಮಾತ್ರವಲ್ಲ, ಭಗವಂತನ ಅಸ್ತಿತ್ವವನ್ನು ಜಗತ್ತಿನ ಸೃಷ್ಟಿ ಅವಲಂಬಿಸಿದೆ ಎಂಬುದನ್ನು ಸಾಬೀತುಪಡಿಸಬೇಕೆಂದು ಒತ್ತಾಯಿಸಿದ. ಒಂಬತ್ತು ಹಾಗೂ ಹತ್ತನೇ ಶತಮಾನಗಳಲ್ಲಿ ಇಸ್ಲಾಮಿ ನಾಗರಿಕತೆಯಲ್ಲಿ ಯೆಹೂದ್ಯರು ಮೆಲುಗೈ ಪಡೆದಾಗ ವ್ಯವಸ್ಥಿತ ರೀತಿಯಲ್ಲಿ ಅವರ ವೇದಾಂತ ಹಾಗೂ ತತ್ತ್ವಗಳು ಸ್ಪಷ್ಟವಾಗಿ ಕಾಣಿಸಿಕೊಂಡವು. ಆಧ್ಯಾತ್ಮಿಕತೆಯ ಈ ಮರುಹುಟ್ಟುವಿಕೆ ಹಾಗೂ ಯೆಹೂದಿ ಹಣಕಾಸು ವ್ಯವಹಾರಸ್ಥರ ಉಗಮ ಇವುಗಳ ಮಧ್ಯೆ ಸಂಬಂಧವೇರ್ಪಟ್ಟಿದ್ದು, ಆಶ್ಚರ್ಯವೇನಿಲ್ಲ. ಈ ವ್ಯವಹಾರಸ್ಥರು ಕಲಿಕೆಯನ್ನು ಪುರಸ್ಕರಿಸಿದರಲ್ಲದೆ, ಇಸ್ಲಾಮಿ ರಾಜ್ಯದ ಆಡಳಿತಗಾರರು, ಮುಸ್ಲಿಮರು ಹಾಗೂ ಕ್ರೈಸ್ತ ಬುದ್ಧಿಜೀವಿಗಳೊಂದಿಗೆ ಸಮಾನ ರೀತಿಯ ಸ್ನೇಹ ಭಾವವನ್ನು ಹೊಂದಿದ್ದರು. ಈ ಶತಮಾನಗಳಲ್ಲಿ ಇಸ್ಲಾಂ ಧರ್ಮದಲ್ಲಾದ ವಿಕಸನ ಗ್ರೀಕರ ವೈಜ್ಞಾನಿಕ ಹಾಗೂ ತಾತ್ವಿಕತೆಯನ್ನು ಅದರ ಹಿಂದಿನ ಸಂಪರ್ಕದಿಂದ ಬೇರ್ಪಡಿಸಿ ಮತ್ತೊಂದು ಭಾಷೆ ಹಾಗೂ ಸಂಸ್ಕೃತಿಯೊಂದಿಗೆ ಒಳಗೊಳ್ಳುವ ಸಾಧ್ಯತೆಯನ್ನು ಅದಕ್ಕೆ ಕಲ್ಪಿಸಿತು. ಆಧ್ಯಾತ್ಮಿಕತೆಯು ಧಾರ್ಮಿಕ ಕಟ್ಟಳೆಗಳಿಗೆ ಹೊಂದಿಕೊಳ್ಳುತ್ತದೆಯೇ ಎಂಬುದು ಅಂದಿನ ಪ್ರಮುಖ ಚಿಂತಕರನ್ನು ಕಾಡಿದ್ದ ವಿಚಾರ.

ಈ ಶತಮಾನಗಳಲ್ಲಿ ಯೆಹೂದ್ಯರ ಆಧ್ಯಾತ್ಮಿಕ ಮತ್ತು ತಾತ್ವಿಕ ಚಿಂತನೆ ಇಸ್ಲಾಂ ಧರ್ಮ ಹಾಗೂ ತತ್ತ್ವಗಳಲ್ಲಾದ ಬದಲಾವಣೆಗಳ ಮೇಲೂ ತನ್ನ ಪ್ರಭಾವ ಬೀರಿ ಸೀಮಿತ ರೀತಿಯಲ್ಲಿ ಮಾತ್ರ ತನ್ನದೇ ಆದ ಬಗೆಯಲ್ಲಿ ಮುಂದುವರಿಯಿತು. ಯೆಹೂದಿ ದಾರ್ಶನಿಕರು ತಮ್ಮ ಜನಾಂಗದವರಿಂದಲೇ ಬರೆಯಲ್ಪಟ್ಟ ಗ್ರಂಥಗಳಿಗೆ ಮುಸ್ಲಿಮರಿಂದ ರಚಿತವಾದ ಪುಸ್ತಕಗಳಿಗೆ ನೀಡಿದ್ದಕ್ಕಿಂತಲೂ ಹೆಚ್ಚಿನ ಮಾನ್ಯತೆಯನ್ನೇನೂ ನೀಡಲಿಲ್ಲ. ಹಲವಾರು ಸಂದರ್ಭಗಳಲ್ಲಿ ಯೆಹೂದ್ಯ ವಿರಚಿತ ಗ್ರಂಥಗಳು ಯೆಹೂದ್ಯೇತರ ಪೂರ್ವಿಕರ ಆಲೋಚನೆಗಳಿಗೆ ನೀಡಿದ ಉತ್ತರ ಅಥವಾ ಪ್ರತಿಕ್ರಿಯೆಯ ರೂಪದಲ್ಲಿ ಮಾತ್ರ ಇರುತ್ತಿದ್ದವು. ಈ ಗ್ರಂಥಗಳಲ್ಲಿ ಬಳಕೆಯಾದ ಪ್ರಮುಖ ಭಾಷೆ ಅರೆಬ್ಬಿ.

ಇಸ್ಲಾಂ ವಿಶ್ವವಿದ್ಯಾನಿಲಯಗಳಲ್ಲಿ ತತ್ತ್ವಶಾಸ್ತ್ರದ ಕ್ರಮಬದ್ಧ ಬೋಧನೆಯೇ ಅಪರೂಪವಾಗಿದ್ದರೆ, ಶಾಲೆಗಳಲ್ಲಂತೂ ಅದು ಕಾಣದಾಗಿತ್ತು. ಯೆಹೂದ್ಯ ದಾರ್ಶನಿಕರಲ್ಲಿ ಅನೇಕರು ವೈದ್ಯಕೀಯವನ್ನು ಜೀವನೋಪಾಯ ಮಾರ್ಗವನ್ನಾಗಿ

ಹೊಂದಿದ್ದು, ಕೆಲವರು ಮಾತ್ರ ಧಾರ್ಮಿಕ ಕಟ್ಟಳೆಗಳನ್ನು ಕುರಿತ ಬೋಧಕರಾಗಿದ್ದು ಸಮುದಾಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು.

ಯೆಹೂದ್ಯರನ್ನು ಕುರಿತು ಆಲೋಚಿಸಿದಂಥ ಪ್ರಮುಖ ಚಿಂತಕರಲ್ಲಿ ಮುಂಚೂಣಿಯಲ್ಲಿರುವಾತ ಸಾದಿಯಾ. ಮಾನವರ ಬುದ್ಧಿಗೆ ಎಟುಕುವಂಥ ಧಾರ್ಮಿಕ ಕಟ್ಟಳೆಗಳನ್ನು 'ಪ್ರಜ್ಞಾಪೂರ್ವಕ' ಅಥವಾ 'ವಿವೇಚನಾಯುತ' ಎಂಬುದಾಗಿ ಈತ ವ್ಯಾಖ್ಯಾನಿಸಿದ. ಇವನ ಅನ್ವಯ ತನಗೆ ನೀಡಲಾದ ಪ್ರಯೋಜನಗಳಿಗಾಗಿ ಮಾನವ ಸೃಷ್ಟಿಕರ್ತನ ಬಗ್ಗೆ ಹೊಂದಿರಬೇಕಾದ ಕರ್ತವ್ಯವೂ ಇವರಲ್ಲಿ ಅಡಕವಾಗಿದೆ. 'ಸಬ್ಬತು' ಅಥವಾ ವಿಶ್ರಾಂತಿ ದಿನದಂದು ಕೆಲಸ ಮಾಡದಿರುವುದು ಮುಂತಾದ ಕಟ್ಟಳೆಗಳು ಈ ಶ್ರೇಣಿಗೆ ಒಳಪಡುವುದಿಲ್ಲ ಎಂಬುದಾಗಿ ಈತನು ಭಾವಿಸಿದ್ದ. ಆದರೆ 'ಕರೈಟ್ಸ್' ಎಂಬ, 8ನೇ ಶತಮಾನದ ಅನನ್‌ಬೆನ್ ಡೇವಿಡ್ ಎಂಬುವನ ಮುಖಂಡತ್ವದ ಬಣ ಈ ವಾದವನ್ನು ಟೀಕಿಸಿ ಯಾವುದೇ ಮೌಖಿಕ ಕಟ್ಟಳೆಯನ್ನು ನಿರಾಕರಿಸಿತಲ್ಲದೆ, ಬೈಬಲ್‌ನ್ನು ಮಾತ್ರ ತನ್ನ ಮಾರ್ಗದರ್ಶಿಯೆಂದು ಘೋಷಿಸಿತು. ನೈಜ ತಾತ್ವಿಕ ಭಾವನೆಗಳನ್ನು ಹೊಂದಿದುಥದ್ದು ಎಂದು ಬಗೆಯಲಾಗಿದ್ದ 'ಮುಟಾಜಿಲೈಟ್'ರ ಧೋರಣೆಗಳನ್ನು ಮಾತ್ರ ಇದು ಒಪ್ಪಿಕೊಂಡಿತು. ಅಸ್ತಿತ್ವದಲ್ಲಿರುವುದೆಲ್ಲವೂ ಅವಿಚ್ಛಿನ್ನವಲ್ಲದ ಭಾಗಗಳೆಲ್ಲವನ್ನೂ ಒಳಗೊಂಡಿದೆ ಎಂಬುದನ್ನು ಎತ್ತಿಹಿಡಿದ 'ಮುಟಾಜಿಲೈಟರು' ಇದು ಅಣುರೇಣು ತೃಣ ಕಾಷ್ಠಗಳೆಲ್ಲವಕ್ಕೂ ಅನ್ವಯಿಸುತ್ತದೆ ಎಂದರು.

ಒಂಬತ್ತು ಮತ್ತು ಹತ್ತನೇ ಶತಮಾನಗಳಲ್ಲಿ ಇರಾಕ್‌ನಿಂದ ಹೊರಗಿದ್ದ ಯೆಹೂದ್ಯರು ಆಧ್ಯಾತ್ಮಿಕ ಅಧ್ಯಯನಗಳನ್ನು ಈಜಿಪ್ಟ್ ಹಾಗೂ ಮಾಘರೆಬ್‌ನಲ್ಲಿ ಮುಂದುವರಿಸಿದರು. ಇಂಥವರಲ್ಲಿ ಮುಖ್ಯನಾದವನು ಐಸಾಕ್ ಬೆನ್ ಸಾಲೊಮೊನ್ ಇಸ್ರೇಲಿ (ಹತ್ತನೇ ಶತಮಾನದ ಉತ್ತರಾರ್ಧದಲ್ಲಿ ಈತ 100ಕ್ಕಿಂತಲೂ ಹೆಚ್ಚು ವಯಸ್ಸಾದ ನಂತರ ನಿಧನ ಹೊಂದಿದ). ಹೆಸರಾಂತ ವೈದ್ಯನಾದ ಈತ ಪ್ರಚುರಪಡಿಸಿದ ತಾತ್ತ್ವಿಕ ಚಿಂತನೆಗಳು, ಅಂದಿನ ನಿಷ್ಠಾವಂತ ಅರಿಸ್ಟೊಟೇಲಿಯನ್ನರಿಗೆ ಪಥ್ಯವಾಗದೆ ಇದ್ದಂಥವು. ಇವನ ಅನ್ವಯ ಸೃಷ್ಟಿಕರ್ತ ತನ್ನ ಇಚ್ಛಾನುಶಕ್ತಿಗೆ ಅನುಗುಣವಾಗಿ ಸೃಷ್ಟಿಸುತ್ತಾನೆ. ಇಚ್ಛೆ ಹಾಗೂ ಶಕ್ತಿಯನ್ನು ಕುರಿತಂಥ ಈ ತಿಳಿವಳಿಕೆ ಪ್ಲೊಟಿನಸ್ ಹಾಗೂ ಅರಬ್ಬಿ ಗ್ರಂಥಗಳನ್ನು ಆಧರಿಸಿದ್ದು. ಇದಲ್ಲದೆ ಶಕ್ತಿ ಮತ್ತು ಇಚ್ಛೆ ಎಂಬ ವಿಶೇಷಣಗಳು ಕ್ರೈಸ್ತ ಗ್ರಂಥಗಳಲ್ಲಿನ ಸೃಷ್ಟಿಕರ್ತನ ಗುಣವಿಶೇಷಗಳಲ್ಲಿ ಸೇರಲ್ಪಟ್ಟಿವೆ ಎಂಬುದನ್ನೂ ಗಮನಿಸಬಹುದು. ಈತನ ತಾತ್ತ್ವಿಕತೆಯನ್ನು ಕುರಿತು ಹೇಳಬೇಕೆಂದರೆ ಭವಿಷ್ಯ ನುಡಿಯುವಿಕೆ, ಊಹಾಶಕ್ತಿಯ ಮೇಲೆ ಬುದ್ಧಿಶಕ್ತಿಯು ಎಸಗಬಹುದಾದ ಪ್ರಭಾವವನ್ನು ಅವಲಂಬಿಸಿದೆ.

ಈತನ ನಂತರ ಕಾಣಿಸಿಕೊಳ್ಳುವ ದಾರ್ಶನಿಕ ಇಬನ್ ಗಾಬಿರೋಲ್. ಹನ್ನೊಂದನೆಯ ಶತಮಾನದ ಜನಪ್ರಿಯ ಹೀಬ್ರೂ ಕವಿಯಾದ ಈತ, ಸ್ಪೈನ್‌ನ

ಪ್ರಾಚೀನ ಯೆಹೂದ್ಯ ದಾರ್ಶನಿಕನಿದ್ದಿರಬಹುದು. ಈತನ ಪ್ರಮುಖ ಗ್ರಂಥ 'ಬದುಕಿನ ಮೂಲ' (ಅಥವಾ ಬದುಕಿನ ಕಾರಂಜಿ) ಅರೇಬ್ಬಿ ಭಾಷೆಯಲ್ಲಿದ್ದು 12ನೇ ಶತಮಾನದಲ್ಲಿ ಇದನ್ನು ಲ್ಯಾಟಿನ್ ಭಾಷೆಯಲ್ಲಿ 'ಫಾನ್ಸ್ ವಿಟೇ' ಎಂಬ ಶೀರ್ಷಿಕೆಯಲ್ಲಿ ಸಂಗ್ರಹಿಸಿದಲಾಗಿದೆ. ಇದು ಯೆಹೂದ್ಯರ ತತ್ತ್ವಗಳನ್ನು ಪ್ರಸಾರಿಸುತ್ತದೆಯಲ್ಲದೆ, ತಾತ್ತ್ವಿಕ ಚಿಂತನೆಗಳನ್ನು ಬೋಧಿಸಲು ಗುರುಶಿಷ್ಯರ ಸಂವಾದವನ್ನು ಬಳಸಿಕೊಳ್ಳುತ್ತದೆ. ಮಧ್ಯಯುಗದಲ್ಲಿ ಇದರಲ್ಲಿರುವ ಅನೇಕ ದ್ವಂದ್ವಗಳಿಗಾಗಿ ಇದನ್ನು ಟೀಕಿಸಲಾಯಿತು. ಈತನ ಚಿಂತನೆಯಲ್ಲಿ ಎದ್ದುಕಾಣುವಂಥದ್ದು ದೈವಿಕ ಸತ್ತ್ವದಿಂದ ಹುಟ್ಟಿದುದೆ ದೈವೇಚ್ಛೆ. ಇವನ ನಂತರ ಜೂಡಾ ಹಲೇವಿ. ಸ್ಪೈನ್ ದೇಶಕ್ಕೆ ಸೇರಿದ್ದ ಹೀಬ್ರೂ ಕವಿಯಾಗಿದ್ದು, ಇವನ ಚಿಂತನೆಗಳೆಲ್ಲವೂ ಯೆಹೂದ್ಯರ ಇತಿಹಾಸದಿಂದ ಆಯ್ದಂಥವು. ಇವನ ಗ್ರಂಥವನ್ನು ಸಾಮಾನ್ಯವಾಗಿ 'ಕುಜಾರಿ' ಎಂದು ಕರೆಯಲಾಗಿದ್ದು ಇವನ ದೃಷ್ಟಿಕೋನವನ್ನು ಅರಬ್ಬಿ ಭಾಷೆಯ ಸಂವಾದದಲ್ಲಿ ದಾಖಲಾಗಿಸಲಾಗಿದೆ. ಈತ ತನ್ನ ಚಿಂತನೆಗಳಿಗೆ ಪೂರಕವಾಗಿ ಕಥೆಯೊಂದನ್ನು ನಿರೂಪಿಸುತ್ತಾನೆ. ಯಾವುದೇ ಪಂಥಕ್ಕೂ ಸೇರದಿದ್ದಂಥ ದೊರೆಯೊಬ್ಬನಿಗೆ ಕನಸಿನಲ್ಲಿ ಕಾಣಿಸಿಕೊಂಡ ದೇವತೆಯೊಬ್ಬ "ಸೃಷ್ಟಿಕರ್ತನಿಗೆ ನಿನ್ನ ಉದ್ದೇಶಗಳು ಪ್ರಿಯವಾದರೂ, ನಿನ್ನ ಕೆಲಸಗಳು ಪ್ರಿಯವಲ್ಲ" ಎಂಬುದಾಗಿ ಹೇಳಿದಾಗ, ದೈವವನ್ನು ಸಂಪ್ರೀತಗೊಳಿಸುವ ಸರಿಯಾದ ಮಾರ್ಗವನ್ನು ಕಂಡುಕೊಳ್ಳುವ ಸಲುವಾಗಿ ಆ ದೊರೆ ಒಬ್ಬ ದಾರ್ಶನಿಕ, ಒಬ್ಬ ಕ್ರೈಸ್ತಮತೀಯ, ಒಬ್ಬ ಮುಸ್ಲಿಂನ ಅನುಯಾಯಿಯಾಗಿ, ಜನಪ್ರತಿನಿಧಿಯಾಗಿ ರಾಜ್ಯಕ್ಕೆ ಹಿಂತಿರುಗಲು ಹಿಂಜರಿದು ಯೆಹೂದ್ಯ ವಿದ್ವಾಂಸನೊಬ್ಬನಿಂದ ಯೆಹೂದ್ಯನಾಗಿ ಮತಾಂತರಗೊಳ್ಳುತ್ತಾನೆ. ದೊರೆ ಕಂಡ ಈ ಕನಸು ಕಣ್ತೆರೆಸುವಂಥದ್ದು. ಇದನ್ನು ಆಧರಿಸಿ ಹಲೇವಿಯು ಹೇಳುವುದೇನೆಂದರೆ ತನ್ನಾನೇ ದೊರೆತ ಪ್ರಜ್ಞಾಪೂರ್ವಕತೆಯು ಮಾನವನನ್ನು ನಿಜವಾದ ಧರ್ಮದ ಅರೆಸಾಟದಲ್ಲಿ ತೊಡಗುವಂತೆ ಪ್ರೇರೇಪಿಸುವುದಿಲ್ಲ : ಒಬ್ಬಾತನಿಗೆ ಭವಿಷ್ಯವನ್ನು ಕಾಣುವ ಶಕ್ತಿಯೂ ಇರಬೇಕು.

ಹಲೇವಿಯ ಸಮಕಾಲೀನರಾಗಿ ಸ್ಪೈನ್‌ನಲ್ಲಿ ಹಲವಾರು ಚಿಂತಕರು ಕಾಣಿಸಿಕೊಂಡರು. ಅವರೆಂದರೆ ಬಾಹ್ಯ, ಬರ್ ಹಿಯ್ಯ. ಇಬನ್ ಎಜ್ರಾ, ಅಬುಲ್ ಬರಾಕತ್ ಅಲ್ ಬಾಗ್‌ದಾದಿ, ಇಬನ್ ಕಮೂನ, ಇಬನ್ ದಾವ್‌ದ್, ಮೈಮನೈಡ್ಸ್. ಇವರಲ್ಲಿ ಬಾಹ್ಯ 'ಹೃದಯದ ಕಟ್ಟಳೆಗಳು' (ಕಮಾಂಡ್‌ಮೆಂಟ್ಸ್ ಆಫ್ ದಿ ಹಾರ್ಟ್) ಎಂಬ ಗ್ರಂಥವನ್ನು ರಚಿಸಿದರೆ ಗಣಿತಜ್ಞನೂ ಆಗಿದ್ದ ಬರ್‌ಹಿಯ್ಯ. ಹೀಬ್ರೂ ಭಾಷೆಯಲ್ಲಿ ತಾತ್ತ್ವಿಕ ಚಿಂತನೆಗಳನ್ನು ಕುರಿತಂತೆ ವೈಜ್ಞಾನಿಕ ಬರವಣಿಗೆಯನ್ನು ನೀಡಿದ. ಕ್ರೈಸ್ತ ಧರ್ಮ ಪ್ರಚಲಿತವಾಗಿದ್ದ ಐರೋಪ್ಯ ದೇಶಗಳಲ್ಲಿ ವಿಸ್ತೃತವಾಗಿ ಪ್ರವಾಸ ಮಾಡಿದ ಇಬನ್ ಎಜ್ರಾ, ಗ್ರೀಕ್ ದಾರ್ಶನಿಕರ ಆಲೋಚನೆಯಲ್ಲುಂಟಾದ ವಿಕೇಂದ್ರೀ

ಕರಣಕ್ಕೆ ಸಂಬಂಧಿಸಿದಂತೆ ವ್ಯಾಖ್ಯಾನಗಳನ್ನು ನೀಡಿದ. ಅಬುಲ್ ಬರಕತ್ ಅಲ್ ಬಾಗ್ದಾದಿ, ಯೆಹೂದ್ಯ ಚಿಂತಕರನ್ನು ಅರ್ಥೈಸುವ ರೀತಿಯಲ್ಲಿ ಇರುವ ಅಸ್ಪಷ್ಟತೆಯನ್ನು ಬಯಲಿಗೆಳೆದ.

ಇಬನ್ ಕಮ್ಮೂನ, ಇಸ್ಲಾಂ, ಕ್ರೈಸ್ತ ಹಾಗೂ ಜ್ಯುಡೇಯಿಸಂ ಈ ಮೂರು ಧರ್ಮಗಳಿಗೆ ಸಂಬಂಧಿಸಿದಂತೆ ಟಿಪ್ಪಣಿಗಳನ್ನು ನೀಡಿದರೆ, ಇಬನ್ ದೌದ್‌ನು ಅರಿಸ್ಟಾಟಲನು ಸಂಶೋಧಿಸಿದ ತರ್ಕಗಳೆಲ್ಲವೂ 'ತೋರಾ'ದಲ್ಲಿ ಇನ್ನೂ ಸ್ಪಷ್ಟವಾಗಿ ಉಲ್ಲೇಖಿತವಾಗಿವೆ ಎಂಬ ಅಭಿಪ್ರಾಯ ಹೊರಗೆಡಹಿದ.

ಮೈಮೊನೈಡ್ಸ್‌ನು ಅರಿಸ್ಟಾಟಲ್‌ನಂತೆಯೇ ತರ್ಕಬದ್ಧ ಜೀವನ ಮಾನವನು ಏರಬಹುದಾದ ಅತ್ಯುಚ್ಚ ಪರಿಪೂರ್ಣ ಸಾಧ್ಯತೆ ಎಂಬುದಾಗಿ ಘೋಷಿಸಿದ. ಮಧ್ಯ ಯುಗದ ಪೂರ್ವಾರ್ಧದ ಚಿಂತಕರೆಂದರೆ ಗೆರ್‌ಸೊನೈಡ್ಸ್, ಹಸ್‌ದೈ ಕ್ರೆಸ್ಕಾಸ್ ಮುಂತಾದವರು.

ಆಧುನಿಕ ಹಾಗೂ ಸಮಕಾಲೀನ ಅವಧಿಗಳಲ್ಲಿ ಸ್ಪೈನ್ ಮತ್ತು ಪೋರ್ಚುಗಲ್ ದೇಶಗಳಿಂದ ಯೆಹೂದ್ಯರನ್ನು ಉಚ್ಚಾಟನೆಗೊಳಿಸುವುದರ ಪರಿಣಾಮವಾಗಿ ಯೆಹೂದಿ ಚಿಂತನೆಗೆ ಹೊಸದೊಂದು ಕೇಂದ್ರ ಹುಟ್ಟಿಕೊಂಡಿತು. ಹಲವಾರು ಯೆಹೂದ್ಯರು ಪ್ರಭುತ್ವಕ್ಕಿಂತ ಸಹಾನುಭೂತಿ ಸ್ವೈರಣೆಯಿಂದಾಗಿ ಹಾಲೆಂಡ್ ದೇಶವನ್ನು ಕ್ಷೇಮಕರ ಸ್ಥಳವೆಂಬುದಾಗಿ ಭಾವಿಸಿದರು. ಡ ಕಾಸ್ಟ ಮತ್ತು ಸ್ಪೈನೋಜಾ ಇವರುಗಳು (1632-1677) ಯೆಹೂದ್ಯರ ಮಡಿವಂತಿಕೆಯ ವಿರುದ್ಧ ಸಿಡಿದೆದ್ದರು. ಡ ಕಾಸ್ಟಾ ಪೋರ್ಚುಗಲ್‌ನಿಂದ ಅಮ್ಸಟರ್‌ಡಂಗೆ ಬಂದವನಾಗಿದ್ದು ಅವನನ್ನು ಕ್ಯಾಥೊಲಿಕ್‌ನಂತೆ ಬೆಳೆಸಲಾಗಿತ್ತು. ತನ್ನ ಸಮಕಾಲೀನರು 'ಕಟ್ಟಳೆ'ಗಳನ್ನು ವ್ಯಾಖ್ಯಾನಿಸಿದ ರೀತಿ ತೋರಾನ ಗ್ರಂಥಕ್ಕೆ ಅನುಗುಣವಾದ್ದಲ್ಲ ಎಂದು ಘೋಷಿಸಿದ ಅವನು "ಸೋಬರ್ ಅ ಮಾರ್ಟಾಲಿಡೇಡ್ ದ ಅಲ್ಮಾ" (ಆತ್ಮದ ಅಶಾಶ್ವತತ್ವ) ಎಂಬ ವ್ಯಾಖ್ಯಾನವನ್ನು ನಿರೂಪಿಸಿದ. ತನ್ನ ಆತ್ಮಕಥನದಲ್ಲಿ ಅವನು ಇನ್ನೂ ಹೆಚ್ಚು ಕ್ರಾಂತಿಕಾರಿ ಧೋರಣೆಯನ್ನು ತಳೆದ. ಸ್ಪೈನೋಜಾ ಯೆಹೂದ್ಯ ಗ್ರಂಥಗಳ ಮೂಲಕ ತತ್ತ್ವಶಾಸ್ತ್ರಕ್ಕೆ ಆಕರ್ಷಿತನಾದ. 'ಪ್ರಜ್ಞಾಪೂರ್ವಕತೆ'ಯನ್ನು ಕುರಿತ ಅವನ ವಾದ ಮಧ್ಯಕಾಲೀನ ತತ್ತ್ವಗಳನ್ನು ಆಧರಿಸಿತ್ತು.

ಮೆಂಡಲ್‌ಸನ್‌ನಿಂದಾಗಿ ಯೆಹೂದ್ಯ ತತ್ತ್ವಶಾಸ್ತ್ರದ ಜರ್ಮನ್ ಯುಗ ಆರಂಭವಾದಂತಾಯಿತು. ಈ ಸಂದರ್ಭದಲ್ಲಿ ಹಲವಾರು ಗ್ರಂಥಗಳು ಜರ್ಮನ್ ಭಾಷೆಯಲ್ಲಿ ಪ್ರಕಟವಾದವು. ಇವನ ಅನ್ವಯ ಯೆಹೂದ್ಯ ಧರ್ಮದ ಕೆಲಸ ಬುದ್ಧಿಮತ್ತೆಗೆ ಅನುಗುಣವಾದ ಸತ್ಯಗಳನ್ನು ಬೋಧಿಸುವುದಲ್ಲ; ಕ್ರೈಸ್ತನು ಅತ್ಯಂತ ಉನ್ನತ ಪ್ರವಾದಿ; ವಿವಿಧ ಧರ್ಮಗಳ ಮಧ್ಯದಲ್ಲಿರುವ ವ್ಯತ್ಯಾಸಗಳು ಶಾಶ್ವತವಾದವಾಗಿದ್ದು, ಇಡೀ ಭೂಮಂಡಲ ದೈವದ ಬಗೆಗಿನ ತಿಳಿವಳಿಕೆಯಿಂದಾಗಿ ಒಂದಾದಾಗ,

ಯೆಹೂದ್ಯರಿಗೆ ಅವರ ವಿಚಿತ್ರ ಆಚಾರ ವಿಚಾರಗಳನ್ನು ಬಿಟ್ಟುಕೊಡುವಂತೆ ಅನುಮತಿ ನೀಡಬಹುದು. ಆದರೆ ಆ ಕಾಲ ಸನ್ನಿಹಿತವಾಗಿಲ್ಲ.

ಸಾಮ್ಯುಯಲ್ ಓರ್ಕ್, ಸ್ಟೈನ್‌ಹ್ಯಾಂ, ಕೋಹೆನ್, ರೋಸೆನ್ ಏಗ್, ಬುಬರ್ ಇವರೂ ತಮ್ಮದೇ ಆದ ಕೊಡುಗೆಗಳನ್ನು ನೀಡಿದಂಥವರು.

**ಆಧಾರ :**

1. ಎನ್‌ಸೈಕ್ಲೋಪಿಡಿಯಾ ಆಫ್ ನಾಲೆಡ್ಜ್.
2. ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕಾ.

# ಹೀಬ್ರೂ ಭಾಷೆಯಲ್ಲಿ ಆಧುನಿಕ ಯೆಹೂದೀ ಸಾಹಿತ್ಯ

ಡಾ॥ ಎಚ್. ಎಸ್. ವೆಂಕಟೇಶಮೂರ್ತಿ

ಇಪ್ಪತ್ತನೇ ಶತಮಾನದ ಹೀಬ್ರೂ ಭಾಷೆಯ ಸಾಹಿತ್ಯದ ಮೇಲೆ ಪ್ರಾರಂಭದ ಪ್ರಭಾವ, ವಿಶೇಷವಾಗಿ ಹತ್ತೊಂಬತ್ತನೇ ಶತಕದ ಹೀಬ್ರೂ ಸಾಹಿತ್ಯದ್ದು. ಪೂರ್ವ ಯುರೋಪಿನ ಯೆಹೂದಿಗಳು—ಅದರಲ್ಲೂ ಮಧ್ಯಮ ವರ್ಗದವರು—ಹೀಬ್ರೂ ಭಾಷೆಯ ಕೃತಿಗಳನ್ನು ಓದತೊಡಗಿದ್ದಲ್ಲದೆ, ಹೀಬ್ರೂ ಭಾಷೆಯಲ್ಲಿ ಮಾತಾಡುವ ಚಳವಳಿಯಲ್ಲೂ ತೊಡಗಿದ್ದು ಹಿಬ್ರೂ ಓದುಗ ವರ್ಗವನ್ನು ವಿಸ್ತರಿಸಿತು ಎನ್ನಬೇಕು. 1886ರ ಸುಮಾರಿಗೆ ಹೀಬ್ರೂ ಭಾಷೆಯಲ್ಲಿ ದೈನಿಕಗಳು ಕಾಣಿಸಿಕೊಂಡವು. ಮಧ್ಯ ಕಾಲೀನ ಅನುವಾದಗಳೂ ಮತ್ತು ಯುರೋಪಿನ ಭಾಷಾ ಸಾಹಿತ್ಯದಿಂದ, ಯೆಹೂದೀ ಲೇಖಕರು ವಿಶೇಷ ಪ್ರಮಾಣದಲ್ಲಿ ಪ್ರಭಾವಿತರಾಗಿ ಸ್ವೀಕರಣ ನಡೆಸಿದ್ದರ ಪರಿಣಾಮ ವಾಗಿ ಹೀಬ್ರೂ ಭಾಷೆ ಒಂದು ಹೊಸ ಸ್ವರೂಪವನ್ನೇ ಪಡೆಯಿತು. ಈ ಕಾಲದ ಹೀಬ್ರೂ ಭಾಷೆಯ ಪ್ರಮುಖ ಲೇಖಕ 'ಮೊಖೇರ್ ಸೆಫೇರಿಮ್' (Mokher Sefarim). ತನ್ನ ಮೊದಲ ಕಾದಂಬರಿಯನ್ನು ರಚಿಸಿದ ನಂತರ ಬೈಬಲ್‌ನಲ್ಲಿ ಬಳಕೆ ಯಾಗಿದ್ದ ಹಳೆಯ ಹೀಬ್ರೂ ಆಧುನಿಕ ಸಂದರ್ಭಕ್ಕೆ ಹೊಂದಲಾರದೆಂದು ಭಾವಿಸಿದ ಈ ಲೇಖಕ, ಯಿಡ್ಡಿಷ್ ಭಾಷೆಯಲ್ಲಿ ಕೃತಿರಚನೆಗೆ ತೊಡಗಿದ. ಸ್ವಲ್ಪ ಕಾಲದಲ್ಲೇ ಈ ಪ್ರಯೋಗಶೀಲ ಲೇಖಕ ಮತ್ತೆ ಹೀಬ್ರೂ ಭಾಷೆಗೆ ತಿರುಗಿ, ಹೀಬ್ರೂ ಮತ್ತು ಆರ್ಮೇಯಿಕ್ ನುಡಿಗಟ್ಟುಗಳ ಬೆಸುಗೆಯಿಂದ ಹೊಸ ಭಾಷಾಪಾಕವೊಂದನ್ನು ಸಿದ್ಧ ಪಡಿಸಿಕೊಂಡು ಆಧುನಿಕ ವಸ್ತು ಪ್ರಪಂಚದ ಗ್ರಹಿಕೆಗೆ ಹೀಬ್ರೂವನ್ನು ತಕ್ಕ ಭಾಷಾ ಮಾಧ್ಯಮವಾಗಿ ರೂಪಿಸಿದ. ಪಳಗನ್ನಡ ಮತ್ತು ಹೊಸಗನ್ನಡದ ಭಾಷಾರೂಪ ಗಳನ್ನು ಕಣ್ಣೆದುರಿಗೆ ಇಟ್ಟುಕೊಂಡು, ನವೋದಯದ ಆಚಾರ್ಯ ಪುರುಷ ಬಿ.ಎಂ.ಶ್ರೀ ಹೊಸಗನ್ನಡವನ್ನು ಸಾಹಿತ್ಯ ಭಾಷೆಯಾಗಿ ರೂಪಿಸಿದ ಸಂದರ್ಭಕ್ಕೆ ಇದು ಹೋಲುವುದಾದರೂ, ಮೊಖೇರ್‌ನದು 'ಶ್ರೀ'ಗಿಂತ ಬಿಕ್ಕಟ್ಟಿನ ಪ್ರಸಂಗವಾಗಿತ್ತು. ಕಾರಣ ಹೀಬ್ರೂನಲ್ಲಿ ಆಡುಮಾತೆಂಬುದೇ ಇನ್ನೂ ಹದಗೊಂಡಿಲ್ಲದ ಕಾಲದಲ್ಲಿ ಹಳೆಯ ಹೀಬ್ರೂವನ್ನೇ ಸಾಹಿತ್ಯ ಭಾಷೆ ಮತ್ತು ಆಡುಮಾತಾಗಿ ರೂಪಿಸುವ ಸವಾಲನ್ನು ಆವತ್ತಿನ ಹೀಬ್ರೂ ಸಮಾಜ ಎದುರಿಸಬೇಕಾಗಿತ್ತು.

ಮೊಪೇರ್ ಬರೆದ ಸಣ್ಣ ಕತೆಗಳು ಈಪತ್ರಿಗೂ ಹೀಬ್ರೂ ಓದುಗರಿಗೆ ಪ್ರಿಯ ವಾದ ಕೃತಿಗಳು. ಬದುಕನ್ನು ಅದು ಇದ್ದಂತೆ ಈ ಲೇಖಕ ಅಭಿವ್ಯಕ್ತಿಸುತ್ತಾನೆ. ಸಾಂಪ್ರದಾಯಿಕ ಮೌಲ್ಯಗಳ ಕಡೆ ಅವನ ಒಲವು ಇದೆ. ಅದೇ ಕಾರಣವಾಗಿ ಆತ ವಿಸ್ತಾರವಾದ ಓದುಗ ವರ್ಗವನ್ನೂ ಪಡೆದಿದ್ದನೆನ್ನಬಹುದು. 20ನೇ ಶತಮಾನದ ಮಧ್ಯಭಾಗದವರೆಗೂ ಈತ ಹೀಬ್ರೂ ಭಾಷೆಯ ಅತ್ಯಂತ ಜನಪ್ರಿಯ ಲೇಖಕನಾಗಿ ಉಳಿದಿದ್ದ.

ಈ ಶತಮಾನದ ಮಧ್ಯಭಾಗವಲ್ಲಿ ಅನೇಕ ಪ್ರತಿಭಾವಂತ ಹೀಬ್ರೂ ಲೇಖಕರು 'ಪಿತಾಮಹ ಮೆಂದೆಲ್'ನನ್ನು ತಮ್ಮ ಮಾದರಿಯಾಗಿ ಇಟ್ಟುಕೊಂಡು ಕೃತಿರಚನೆಯಲ್ಲಿ ತೊಡಗಿದರು. 'ಆಷರ್ ಗಿನ್ಸ್‌ಬರ್ಗ್' ಇವರಲ್ಲಿ ಒಬ್ಬ. 'ಹಾ–ಶಿಲ್ಲಾ' ಎಂಬ ತನ್ನ ಪತ್ರಿಕೆಯಲ್ಲಿ ಪ್ಯಾಲಿಸ್ಟೇನ್‌ನನ್ನು ಸಾಂಸ್ಕೃತಿಕ ಕೇಂದ್ರವಾಗಿ ಗುರುತಿಸಿ, ಮುಕ್ತ ಯೆಹೂದೀ ರಾಷ್ಟ್ರೀಯತೆಯನ್ನು ಒಂದು ಮೌಲ್ಯವಾಗಿ ರೂಪಿಸುತ್ತಾ ಈತ ಬರೆದ ಹಲವಾರು ಲೇಖನಗಳು ವಿಶೇಷ ಉಲ್ಲೇಖಕ್ಕೆ ಪಾತ್ರವಾಗಿದೆ. 1921ರ ಈಚೆಗೆ ಈತ ತನ್ನ ಕೊನೆಗಾಲದವರೆಗೆ ತನ್ನ ಪತ್ರ ವ್ಯವಹಾರಗಳನ್ನು ಸಂಪಾದಿಸುವ ಕಾರ್ಯ ದಲ್ಲಿ ಮಗ್ನನಾಗಿದ್ದ. ನಿರ್ಣಾಯಕ ಘಟ್ಟವೊಂದರ ಬೆಳೆವಣಿಗೆಯ ದಾಖಲೆಯಾಗಿ ಇದು ಈಗಲೂ ಮುಖ್ಯವೆನಿಸುತ್ತದೆ.

'ಎಚ್. ಎನ್. ಬಿಯಲಿಕ್' ಆಧುನಿಕ ಹೀಬ್ರೂ ಭಾಷೆಯ ಒಬ್ಬ ಮುಖ್ಯ ಕವಿ, ಪ್ರಬಂಧಕಾರ, ಸಂಪಾದಕ, ಮಧ್ಯಕಾಲೀನ ಸಾಹಿತ್ಯದ ಸಂಗ್ರಾಹಕ. ಸ್ವಲ್ಪ ಕಾಲ ಈತ 'ಹಾ–ಶಿಲ್ಲಾ' ಪತ್ರಿಕೆಯ ಸಾಹಿತ್ಯಕ ಸಂಪಾದಕನಾಗಿಯೂ ಸೇವೆಸಲ್ಲಿಸಿದ್ದ. ಜೂಯಿಶ್ ಸಂಪ್ರದಾಯದೊಂದಿಗೆ ಆಧುನಿಕ ಜನಾಂಗದ ಸಂಘರ್ಷ ಮತ್ತು ಅದರಿಂ ದುಂಟಾಗುವ ತೊಡಕುಗಳ ಆಂತರಿಕ ತುಮುಲವನ್ನು ಇವನ ಕೃತಿಗಳು ಅಭಿವ್ಯಕ್ತಿಸು ತ್ತವೆ. 'ಸಾಲ್ ತ್ರನಿಚೊಕ್ಕವಸ್ಕಿ' ಎಂಬ ಇನ್ನೊಬ್ಬ ಮುಖ್ಯ ಲೇಖಕ ಸಂಪ್ರದಾಯದ ಸಂಬಂಧವಲ್ಲಿ ತಲೆ ಕೆಡಿಸಿಕೊಳ್ಳದೆ, ಪ್ರೀತಿ ಮತ್ತು ಸೌಂದರ್ಯವನ್ನು ಕುರಿತು ಮನೋಹರವಾದ ಕೃತಿಗಳನ್ನು ರಚಿಸಿದ್ದಾನೆ. ಕ್ರಿಮಿಯಾ, ಜರ್ಮನಿ, ಪ್ಯಾಲಸ್ಟೇನ್ ಆತ ಜೀವಿಸಿದ್ದ ಸ್ಥಳಗಳು. ಅವುಗಳ ಬಗ್ಗೆ ಅವನು ಮತ್ತೆ ಮತ್ತೆ ಬರೆಯುತ್ತಾನೆ. 'ಐ. ಎಲ್. ಪರ್ಟಿಜ್' ಎಂಬ ಇನ್ನೊಬ್ಬ ಲೇಖಕ ಭಕ್ತಿಭಾವವನ್ನು ಸಾಹಿತ್ಯಕ್ಕೆ ತಂದವನು. ಭಾವನಾತ್ಮಕತೆ ಮತ್ತು ಬದುಕಿನ ಸಹಜ–ಸರಳ–ಆನಂದವನ್ನು ತೆರೆದು ತೋರುವ ಇವನ ಕೃತಿಗಳ ಪ್ರಭಾವ ಮುಂದಿನ ಪೀಳಿಗೆಯ ಲೇಖಕರ ಮೇಲೆ ಹೆಚ್ಚಿನ ಪ್ರಮಾಣವಲ್ಲಿ ಆಯಿತೆನ್ನಬಹುದು. ಜುಡಾಯಿಸಂ ಮತ್ತು ಯೆಹೂದಿಗಳ ಸಹಜ ಪ್ರವೃತ್ತಿಗಳ ನಡುವಿನ ಕರ್ಷಣೆಯನ್ನು ಮನೋವೈಜ್ಞಾನಿಕವಾಗಿ ಶೋಧಿಸುವ ಪ್ರವೃತ್ತಿ ಸಣ್ಣಕತೆಗಾರರನೇಕರಲ್ಲಿ ವಿಶೇಷವಾಗಿ ಕಾಣಿಸಿಕೊಂಡಿದೆ. ಅಂಥ ಲೇಖಕರಲ್ಲಿ ಮುಖ್ಯನಾದವನು, ಹೀಬ್ರೂ ಸಾಹಿತ್ಯ ಐರೋಪ್ಯ ಸಾಹಿತ್ಯದ ಮಟ್ಟಕ್ಕೆ ಬರಬೇಕೆಂಬ ಬಯಕೆಯೊಂದಿಗೆ ಬರೆದ ಲೇಖಕ–ವಿಮರ್ಶಕ 'ಡಿ. ಫ್ರಿಸ್ಕ್‌ಮನ್. ಇವನ ಮೂಲಕ

ಐರೋಪ್ಯ ಸಾಹಿತ್ಯದ ಪ್ರವೃತ್ತಿಗಳು ಹೀಬ್ರೂ ಸಾಹಿತ್ಯಕ್ಕೆ ಆಮದಾದುವು ಎನ್ನಬೇಕು. 1905 ಮತ್ತು 1917ರ ರಷ್ಯನ್ ಕ್ರಾಂತಿಯ ಪರಿಣಾಮವಾಗಿ, ಜ್ಯೂಗಳು ಪಶ್ಚಿಮ ಯುರೋಪ್ ಮತ್ತು ಅಮೆರಿಕಾಕ್ಕೆ ವಲಸೆ ಹೋದಕಾರಣ, ಪೂರ್ವ ಯುರೋಪಿನಲ್ಲಿ ಹೀಬ್ರೂ ಸಾಹಿತ್ಯ ಚಟುವಟಿಕೆ ಸಾಕಷ್ಟು ಕುಂಠಿತವಾಯಿತು. ಹೀಬ್ರೂ ಸಂಸ್ಕೃತಿಯನ್ನು ಸೋವಿಯತ್ ಯೂನಿಯನ್ ನಿಷೇಧಿಸಿತ್ತೆಂಬುದನ್ನೂ ಇಲ್ಲಿ ನೆನೆಯಬಹುದು. ಜ್ಯೂಗಳ ಮೇಲೆ ನಡೆದ ದುರಾಕ್ರಮಣಗಳಿಂದಾಗಿ ಪೂರ್ವ ಯುರೋಪ್ ಮತ್ತು ಜರ್ಮನಿಯಲ್ಲಿ ಕೂಡಾ ಹೀಬ್ರೂ ಸಾಹಿತ್ಯ ಚಟುವಟಿಕೆ ಹೆಚ್ಚು ಕಡಿಮೆ ಸ್ಥಗಿತ ಸ್ಥಿತಿಗೆ ತಲಪಿತು.

## 'ಎಮಿಗ್ರೆ' ಮತ್ತು ಪ್ಯಾಲಿಸ್ಟೇನಿಯನ್ ಸಾಹಿತ್ಯ

ಈ ಪೀಳಿಗೆಯ ಯಹೂದೀ ಲೇಖಕರು 'ಎಮಿಗ್ರೆ ಲೇಖಕ'ರೆಂದೇ ಪ್ರಸಿದ್ಧರು. ನಿರಾಶೆ, ಅರಕ್ಷಿತ ಭಾವ ಈ ಲೇಖಕರ ಸಾಹಿತ್ಯದ ಮುಖ್ಯ ಅಂಶಗಳು. ತಮ್ಮ ಜನ್ಮ ಸ್ಥಳಗಳನ್ನು ಅಗಲಿ, ಪ್ಯಾಲಿಸ್ಟೇನ್‌ಗೆ ಬಂದು ನೆಲೆಸಿದ ಈ ಪೀಳಿಗೆಯ ಬಹುಪಾಲು ಲೇಖಕರು ಕಳೆದಯುಗದ ಹಳಹಳಿಕೆಯಲ್ಲಿ ಬಳಲುತ್ತಾರೆ. 'ವೈ. ಬುರ್ಲಾ' ನಂತಹ ಕೆಲವೇ ಲೇಖಕರು ಅದಕ್ಕೆ ಅಪವಾದ. ಹೊಸ ಪರಿಸರಕ್ಕೆ ಹೊಂದಿಕೊಂಡು ಧನಾತ್ಮಕವಾಗಿ ಬದುಕಿನ ಹೋರಾಟದಲ್ಲಿ ತೊಡಗಿ. ಸಾಹಿತ್ಯ ರಚಿಸತೊಡಗಿದ ಲೇಖಕರಲ್ಲಿ 'ಎ. ಬರಾಷ್', 'ಎಸ್. ವೈ. ಆಗ್ನೆನ್' (ಈ ಕಾಲದ ಸರ್ವಶ್ರೇಷ್ಠ ಗದ್ಯ ಲೇಖಕ. 1966ರಲ್ಲಿ ನೊಬೆಲ್ ಪಾರಿತೋಷಕವನ್ನು ಕೂಡ ಪಡೆದವನು). ಪ್ರಾಚೀನ ಹೀಬ್ರೂ ಗದ್ಯದಿಂದ ಪ್ರಭಾವಿತನಾಗಿ ವಿಶಿಷ್ಟವಾದ ದೇಸೀ ಗದ್ಯ ಶೈಲಿಯೊಂದನ್ನು ರೂಪಿಸಿದ್ದು ಆಗ್ನೆನ್‌ನ ಮಹತ್ವದ ಸಾಧನೆ. 1940ರ ನಂತರ ಈತ ಪ್ಯಾಲಸ್ಟೇನ್‌ನಲ್ಲಿ ಯೆಹೂದಿಗಳ ಬದುಕನ್ನು ಕುರಿತು ಬರೆದ ಕೃತಿಗಳು ಹೊಸ ಲೇಖಕರ ಮೇಲೆ ಗಾಢ ಪ್ರಭಾವ ಬೀರಿವೆ. ಕಾವ್ಯದಲ್ಲಿ 'ಆರ್. ಬ್ಲೊವಸ್ಟಿನ್' ಅತ್ಯಂತ ಮುಖ್ಯನಾದವನು. ತೀವ್ರವಾದ ವೈಯಕ್ತಿಕ ಭಾವಾಭಿವ್ಯಕ್ತಿಯ ಈತನ ಕವಿತೆಗಳು ಗೀತೆಗಳಾಗಿಯೂ ಅತ್ಯಂತ ಜನಪ್ರಿಯ.

'ಯು. ಜೆ. ಗ್ರೀನ್‌ಬರ್ಗ್' ಸ್ವಚ್ಛಂದವನ್ನು ಬಳಕೆಗೆ ತಂದ ಒಬ್ಬ ಪ್ರಭಾವಶಾಲೀ ರಾಜಕೀಯ ಕವಿ. 'ಎ. ಶ್ಲೋನಸ್ಕಿ' 'ಸಂಕೇತ ಸಂಪ್ರದಾಯ'ವನ್ನು ರೂಢಿಗೆ ತಂದ ಮತ್ತೊಬ್ಬ ಗಣನೀಯ ಕವಿ.

## ಇಸ್ರೇಲಿ ಸಾಹಿತ್ಯ

ಜಾಗತಿಕ ಎರಡನೇ ಮಹಾಯುದ್ಧ ಮತ್ತು 1948–49ರ ಅರಬ್–ಇಸ್ರೇಲೀ ಕದನದ ನಂತರದ, ಪ್ಯಾಲಿಸ್ಟೇನ್ ಸಂಜಾತ ಯೆಹೂದೀ ಲೇಖಕರು, ಆಡುಮಾತಿನ ಕಂಪುಳ್ಳ ಹೀಬ್ರೂ ಭಾಷೆಯಲ್ಲಿ ತಮ್ಮ ಜನಾಂಗದ ನೋವು ನಲಿವುಗಳಿಗೆ ಆಕಾರ ಕೊಡ

ತೊಡಗಿದರು. ಸಮಕಾಲೀನ ಪಶ್ಚಿಮ ಯುರೋಪ ಮತ್ತು ಅಮೆರಿಕಾ ಸಾಹಿತ್ಯದ ಮಾರ್ಗದಲ್ಲಿ ಇಸ್ರೇಲೀ ಸಾಹಿತ್ಯವೂ ಬೆಳೆಗೆ ಬರತೊಡಗಿತು. ಸಮುದಾಯದ ಸಾಂಸ್ಕೃತಿಕ ವಿಭಿನ್ನತೆ ಮತ್ತು ಹೊಸ ವಲಸೆಗಾರರ ಸಮಸ್ಯೆಗಳು ಸಾಹಿತ್ಯದ ಮುಖ್ಯ ಆಸಕ್ತಿಗಳಾಗಿ ಪರಿಣಮಿಸಿದುವು. ಕಾವ್ಯವಂತೂ ಸಮೃದ್ಧವಾಗಿ ಬೆಳೆಯಿತು. ನಾಟಕದ ಬೆಳವಣಿಗೆ ಅಷ್ಟೊಂದು ಕ್ಷಿಪ್ರಗತಿಯಲ್ಲಿ ಆಗಲಿಲ್ಲ. 1951ರಲ್ಲಿ ರಚಿತವಾದ 'ಗ್ರೀನ್‌ಬರ್ಗ್'ನ 'ರ್ಜ್ವಿಜೊತ್ ಹಾನಹಾರ್'ನಲ್ಲಿ ನರಮೇಧದ ಅನುಭವದಿಂದಾದ ದೀನಭಾವ, ಹುತಾತ್ಮಭಾವದ ಅಭಿಮಾನದ ನೆಲೆಗೆ ದಾಟಿಕೊಳ್ಳುವ ಸಂಕೀರ್ಣಸ್ಥಿತಿ ಅನನ್ಯವಾದ ರೀತಿಯಲ್ಲಿ ಅಭಿವ್ಯಕ್ತಿಗೊಂಡಿದೆ. 'ಜಿಂಕಿ ಮತ್ತು ಬಿಡುಗಡೆಯ ನಡುವೆ' ಎಂಬ ತನ್ನ ಕಾವ್ಯ ನಾಟಕದಲ್ಲಿ 'ಆರನ್ ಜೀಟ್ಲಿನ್' ಯುರೋಪೀ ಜ್ಯೂಗಳ ಸ್ಥಾನ ಭ್ರಷ್ಟತೆಯನ್ನು ಪೌರಾಣಿಕ ಪ್ರತೀಕಗಳ ಮೂಲಕ ಸೂಚಿಸಿದ್ದಾನೆ.

ಇಸ್ರೇಲಿನ ದೇಸೀಗದ್ಯ ಲೇಖಕರು 1948-49ರ ಯುದ್ಧಕಾಲದ ಭೂಗತ ಬದುಕನ್ನು ತಮ್ಮ ಬರವಣಿಗೆಯಲ್ಲಿ ಚಿತ್ರಿಸಿದ್ದಾರೆ. 'ಎಸ್ ಯಿಜಾರ್' ಮತ್ತು 'ಮೋಷೆ ಶಮೀರ್' ಈ ಕಾಲದ ಶ್ರೇಷ್ಠ ಲೇಖಕರು. ಅವರ ಬರವಣಿಗೆಯಲ್ಲಿ ಪ್ರಧಾನ ವಾಗಿ ಸಮೂಹನಿಷ್ಠವಾದ ಯೆಹೂದಿ ಬದುಕಿನಲ್ಲಿನ ವೃಷ್ಟಿ ಸಂವೇದನೆಯ ಸೂಕ್ಷ್ಮತೆಯ ಅಭಿವ್ಯಕ್ತಿ ಕಂಡುಬರುತ್ತದೆ. ವ್ಯಕ್ತಿಭಾವನೆಯ ಅಭಿವ್ಯಕ್ತಿ ಪ್ರಧಾನ ವಾದಾಗಲಿಲ್ಲಾ. ಹತಾಶೆ, ಏಕಾಕಿತನ, ಗೊಂದಲ ಈ ಭಾವಗಳೇ ವಿಶೇಷವಾಗಿ ಕಾಣುತ್ತವೆ. ಯಿಜಾರ್ ಮತ್ತು ಶಮೀರ್‌ರ ಕೊನೆಕೊನೆಯ ಕೃತಿಗಳಲ್ಲಿ ಭ್ರಮ ನಿರಸನದ ಚಿತ್ರಗಳು ಬರುತ್ತವೆ. ಒಂದು ನಿರ್ದಿಷ್ಟ ಚಾರಿತ್ರಿಕ ಗುರಿಯಿಲ್ಲದೆ ವಿಭ್ರಾಂತರಾದ ಜನತೆಯನ್ನು ಈ ಇಬ್ಬರು ಲೇಖಕರೂ ತಮ್ಮ ಕೃತಿಗಳಲ್ಲಿ ವಿಷಾದದ ನೆಲೆಯಲ್ಲಿ ಚಿತ್ರಿಸುತ್ತಾರೆ. 'ಹಾರನ್ ಮೆಗೆದ್'ನ' ಅತಿವಾಸ್ತವ ಶೈಲಿಯ ಕಾದಂಬರಿ 'ದಿ ಕೇಸ್ ಆಫ್ ದ ಸಿಂಪಲ್ಟನ್' (1960), ಅಮಾನವೀಯಗೊಂಡ ಸಮಾಜದ ಬದುಕನ್ನು ಹೃದಯ ವಿದ್ರಾವಕವಾಗಿ ಚಿತ್ರಿಸುತ್ತದೆ. 'ಲಿವಿಂಗ್ ಆನ್ ದಿ ಡೆಡ್' (1965) ಕಾದಂಬರಿ, ಹೊಸ ಜನಾಂಗದ ನಾಯಕನನ್ನು ತೀವ್ರ ವ್ಯಂಗ್ಯದ ನೆಲೆಯಲ್ಲಿ ರೂಪಿಸುತ್ತದೆ. 'ಆರನ್ ಅಪ್ಲೆಫೆಲ್ಡ್'ನ' ಗೀತಾತ್ಮಕ ಕೃತಿಗಳಲ್ಲಿ ಭಯಾವಹ ಅನುಭವಗಳ ಮರುಕಳಿಕೆಯನ್ನು ನೋಡಬಹುದು. ಪಲಾಯನ ಮತ್ತು ತಲೆಮರೆಸಿ ಕೊಳ್ಳುವಿಕೆ ಅವನ ಕಥೆಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ ಸಂದರ್ಭಗಳು. 'ದಿ ಸ್ಕಿನ್ ಅಂಡ್ ದ ಗೌನ್' (1971) ಎಂಬ ಅವನ ಕಾದಂಬರಿಯಲ್ಲಿ ಐರೋಪ್ಯ ಯಾತನಾ ಶಿಬಿರಗಳಿಂದ ಬದುಕುಳಿದು ಹೊರಬಂದ ಜನ, ತಮ್ಮ ದಾರುಣ ಅನುಭವದ ನೆನಪಿನಿಂದ ವಿಮುಕ್ತರಾಗಲಾರದ ಸ್ಥಿತಿಯಲ್ಲಿ ಪರಿತಪಿಸುವುದನ್ನು ಚಿತ್ರಿಸಲಾಗಿದೆ. 'ಅಬ್ರಾಹಂ. ಬಿ. ಯೆಹೋಷುವಾನ' ಕತೆಗಳಲ್ಲಿ ನಿರೂಪಕ ಕಥಾ ಸಂದರ್ಭದಿಂದ ಎಲ್ಲೋ ದೂರದಲ್ಲಿ ನಿಲ್ಲುತ್ತಾನೆ. ಕಥೆಯಲ್ಲಿ ಬರುವ ಜನಗಳು ಏಕಾಕಿಗಳು ಮತ್ತು ಭಾವನೆಗಳು ಒಣಗಿ ಮುರುಟಿ ಹೋದವರು. ಆಗೊಮ್ಮೆ,

ಈಗೊಮ್ಮೆ, ಯಾವುದೋ ಕಾಡಿನಲ್ಲಿ, ಮರುಭೂಮಿಯಲ್ಲಿ ಅಥವಾ ಹಳ್ಳಿಯೊಂದರಲ್ಲಿ ಮಾನವೀಯ ಭಾವನೆ ಸ್ಫೋಟಿಸುತ್ತದೆ ; ಪಾತ್ರದ ಮನುಷ್ಯತ್ವ ಮಿಂಚಿನಂತೆ ಹೊಳೆಯುತ್ತದೆ. ವೈಯಕ್ತಿಕ ಹತಾಶೆ ಮತ್ತು ಧಾರ್ಮಿಕ ದರ್ಶನ 'ಪಿನ್ಹಾಸ್ ಸಾದೇನ' ಪ್ರಧಾನ ವಸ್ತುಗಳು. 'ನೋಟ್ಸ್ ಆನ್ ದಿ ಕಂಡೀಷನ್ ಆಫ್ ಎ ಮ್ಯಾನ್' (1967) ಎಂಬ ಆತನ ಕಾದಂಬರಿಯಲ್ಲಿ ಸಾಮಾಜಿಕ ಸೋಲಿನ ದುರಂತ ಮತ್ತು ಆಧ್ಯಾತ್ಮಿಕ ಸೌಂದರ್ಯ ಒಂದಾದರ ಮೇಲೊಂದರಂತೆ ಕಾಣಿಸಿಕೊಂಡು ವಿಲಕ್ಷಣವಾದ ಹೆಣಿಗೆಯೊಂದನ್ನು ಸಾಧಿಸಲಾಗಿದೆ. 'ಆಮಸ್ ಓಜ್', 1968ರಲ್ಲಿ ರಚಿಸಿದ 'ಮೈ ಮೈಖೇಲ್' ಕಾದಂಬರಿಯಲ್ಲಿ ಚಿಕ್ಕ ಪ್ರಾಯದ ಗೃಹಿಣಿಯೊಬ್ಬಳು ತನ್ನ ಮಾನಸಿಕ ವಿಚ್ಛಿದ್ರತೆಯನ್ನು ರೂಪಿಸುವ ಆತ್ಮಕಥನಾತ್ಮಕ ನಿರೂಪಣೆ ಇದೆ. 'ಅಮಾಲಿಯ ಕಹನೆ-ಕರ್ಮನ್' ಎಂಬ ಲೇಖಕಿ ಕಾಲ ಮತ್ತು ನೆನಪುಗಳ ಬಗ್ಗೆ ತನ್ನ ವೈಯಕ್ತಿಕವೂ ಸಂಕೀರ್ಣವೂ ಆದ ಭಾವನೆಗಳನ್ನು ತನ್ನ ಕೃತಿಗಳಲ್ಲಿ ಅಭಿವ್ಯಕ್ತಿಸುತ್ತಾಳೆ. ತೀರ ಸಾಮಾನ್ಯ ಜನರ ಒಳಬಾಳಿನ ಸೂಕ್ಷ್ಮಗಳನ್ನು ಪ್ರಜ್ಞಾಪ್ರವಾಹ ತಂತ್ರದ ಮೂಲಕ ಈ ಲೇಖಕಿ ಪಡಿಮೂಡಿಸಿದ್ದಾಳೆ ಎಂಬುದು ವಿಶೇಷವಾದ ಅಂಶ.

**ಆಧಾರ :**

1. ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕ
2. ದಿ ಲ್ಯಾಂಡ್ ಆಫ್ ಇಸ್ರೇಲ್

# ಐಸ್ಯಾಕ್ ಭಾಷೆವಿಸ್ ಸಿಂಗರ್

ಕೆ. ನರಸಿಂಹಮೂರ್ತಿ

ಐಸ್ಯಾಕ್ ಭಾಷೆವಿಸ್ ಸಿಂಗರ್ ವಿಶ್ವವಿಖ್ಯಾತ ಸಣ್ಣಕತೆಗಾರ, ಕಾದಂಬರಿಕಾರ. ಇವನು 1978ರ ಸಾಹಿತ್ಯ ಕ್ಷೇತ್ರದ ನೊಬೆಲ್ ಪ್ರಶಸ್ತಿಯ ವಿಜೇತ.

ಸಿಂಗರ್ 190-ರಲ್ಲಿ ಪೋಲೆಂಡಿನ ಲುಬ್ಲಿನ್ ಎಂಬ ನಗರದಲ್ಲಿ ಹುಟ್ಟಿದ. ಇವನು ಯೆಹೂದಿ. ಇವನ ತಂದೆ ತಾತಂದಿರು ಯೆಹೂದಿಗಳ ಧರ್ಮ ಮತ್ತು ನ್ಯಾಯ ಶಾಸ್ತ್ರಗಳಲ್ಲಿ ಪರಿಣತರು. ಇವನ ತಂದೆಯ ನ್ಯಾಯಾಲಯದ ಬಾಗಿಲ ಹೊರಗೆ ನಿಂತು ಅರ್ಜಿದಾರರ ಹೇಳಿಕೆಗಳನ್ನು ಹುಡುಗನಾಗಿದ್ದಾಗ ಇವನು ಕೇಳಿಸಿಕೊಳ್ಳುತ್ತಿದ್ದನಂತೆ. ಇವನೂ ವಾರ್ಸಾದ ಯೆಹೂದಿ ಶಾಸ್ತ್ರ ವಿದ್ಯಾಲಯದಲ್ಲಿ ಓದಿದ. ಇವನ ಅಣ್ಣ ಇಸ್ರೇಲ್ ಜೋಷ್ವಾ ಸಿಂಗರ್ ಒಳ್ಳೆಯ ಕಾದಂಬರಿಕಾರ. ಅಣ್ಣನನ್ನು ಇವನು ತನ್ನ ಗುರುವೆಂದು ಕರೆದಿದ್ದಾನೆ. ಅಣ್ಣನಂತೆ ಇವನೂ ಪೋಲೆಂಡಿನಿಂದ ಅಮೇರಿಕಾಕ್ಕೆ ವಲಸೆ ಹೋದ. 1935ರಲ್ಲಿ ಇವನು ಹೀಗೆ ಅಮೇರಿಕಾಕ್ಕೆ ಬಂದುದು. ನ್ಯೂಯಾರ್ಕಿನಲ್ಲಿ ಇವನ ವಾಸ. ಇವನು ಎಂಟು ಕಾದಂಬರಿಗಳನ್ನೂ ಏಳು ಕಥಾ ಸಂಕಲನಗಳನ್ನೂ ತನ್ನ ಜೀವನ ಸ್ಮೃತಿಗಳ ನಾಲ್ಕು ಭಾಗಗಳನ್ನೂ ಇಲ್ಲಿಯವರೆಗೆ ಬರೆದಿದ್ದಾನೆ.

ಇವನು ಬರೆಯುವ ಭಾಷೆ ಯಿಡ್ಡಿಷ್. ಯೆಹೂದಿಗಳ ಅತ್ಯಂತ ಪ್ರಾಚೀನ ಮತ್ತು ಅತ್ಯಂತ ಹೆಚ್ಚಿನ ಬಳಕೆಯ ಭಾಷೆ ಹೀಬ್ರೂ. ಆದರೆ ರಷ್ಯಾ, ಪೋಲೆಂಡ್, ಪ್ಯಾಲಿಸ್ಟೈನ್. ಅಮೇರಿಕಾಗಳ ಕೆಲವು ಯೆಹೂದಿಗಳು ಯೂರೋಪಿನಲ್ಲಿ ಮಧ್ಯಯುಗದಿಂದೀಚೆಗೆ ಬಳಕೆಗೆ ಬಂದ ಮಿಶ್ರತಳಿಯ ಯಿಡ್ಡಿಷ್ ಭಾಷೆಯನ್ನು ಆಡುತ್ತಾರೆ. ಈ ಭಾಷೆಯಲ್ಲಿ ಸಾಹಿತ್ಯ ಸೃಷ್ಟಿಯಾದುದು ಕಳೆದ ಶತಮಾನದ ಉತ್ತರಾರ್ಧದಿಂದೀಚೆಗೆ. 'ಉಪನ್ಯಾಸ' ಕತೆಯ ನಾಯಕ ಮಾಡಬೇಕಾಗಿದ್ದ ಉಪನ್ಯಾಸದ ವಸ್ತು 'ಯಿಡ್ಡಿಷ್ ಭಾಷೆಯ ಭವಿಷ್ಯ'. ಈ ಭಾಷೆಯ ಭವಿಷ್ಯ ಅಷ್ಟೇನೂ ಆಶಾದಾಯಕವಾದುದಲ್ಲ. ಪ್ರಾಯಶಃ ಸಿಂಗರ್‌ನೇ ಇದರ ಕೊನೆಯ ಮಹತ್ವದ ಲೇಖಕನಾದರೆ ನಾವು ಆಶ್ಚರ್ಯಪಡಬೇಕಾಗಿಲ್ಲ.

ಸಿಂಗರ್‌ನ ಮೊದಲ ಕಾದಂಬರಿ 'ಗೋರೆಯಲ್ಲಿ ಸೈತಾನ' 1935ರಲ್ಲಿಯೇ ವಾರ್ಸಾದಲ್ಲಿ ಪ್ರಕಟವಾಯಿತು. ಆದರೆ ಅವನ ಮೊದಲ ಇಂಗ್ಲೀಷಿಗೆ ಅನುವಾದ ವಾಗಿ ಪ್ರಕಟವಾದ ಕಾದಂಬರಿ, 'ದಿ ಫ್ಯಾಮಿಲಿ ಮಾಸ್ಕಾಟ್' (19˚0). ಇವನು ಪ್ರಸಿದ್ಧಿಗೆ ಬಂದುದು ಇವನ ಸಣ್ಣ ಕತೆ 'ಮುಗ್ಧ ಜಿಂಪೆಲ್', 1953ರಲ್ಲಿ ಇಂಗ್ಲೀಷಿಗೆ ಅನುವಾದವಾಗಿ ಪ್ರಕಟವಾದಾಗ. ಇದನ್ನು ಅನುವಾದ ಮಾಡಿದವನು ನೊಬೆಲ್ ಪ್ರಶಸ್ತಿ ವಿಜೇತ ಅಮೇರಿಕನ್ ಯೆಹೂದಿ ಕಾದಂಬರಿಕಾರ ಸಾಲ್‌ಬೆಲ್ಲೊ. ಸಿಂಗರ್‌ನ ಕಾದಂಬರಿಗಳು ಹದಿನೇಳನೆ ಶತಮಾನದಿಂದ ಎರಡನೇ ಜಾಗತಿಕ ಯುದ್ಧದ ಮುಕ್ತಾಯದವರೆಗೆ ಪೋಲೆಂಡಿನ ಯೆಹೂದಿಗಳು ಅನುಭವಿಸಿದ ಹಿಂಸಾಚಾರಗಳನ್ನು ನಿರೂಪಿಸುತ್ತವೆ. 'ಶತ್ರುಗಳು' ಎನ್ನುವ ಇತ್ತೀಚಿನ ಕಾದಂಬರಿಯೊಂದು ಅಮೇರಿಕಾಕ್ಕೆ ವಲಸೆ ಬಂದವನೊಬ್ಬನ ಜೀವನವನ್ನು ಚಿತ್ರಿಸುತ್ತದೆ. ಇವನ ಸಣ್ಣ ಕತೆಗಳು ಸಾಮಾನ್ಯ ಜನರ ಜೀವನದ ಭಾವತೀವ್ರತೆಯ ಘಟ್ಟಗಳನ್ನು ಅಭಿವ್ಯಕ್ತಿಸು ತ್ತವೆ. ಇವನ ಯಶಸ್ವೀ ಸಣ್ಣಕತೆಗಳಲ್ಲಿ ಐದಾರನ್ನು ಮಾತ್ರ ಹೆಸರಿಸಬೇಕಾದರೆ 'ಮುಗ್ಧ ಜಿಂಪೆಲ್', 'ಕಾಫ್ಕಾನ ಸ್ನೇಹಿತ', 'ಏಕಾಕಿ', ಕಾಕಡೂಡಲ್‌ಡೂ', 'ಕ್ರಾಕೋವಿನಿಂದ ಬಂದ ಒಬ್ಬ ಸಭ್ಯ' ಮತ್ತು 'ಸಿಯಾನ್ಸ್' ಇವುಗಳನ್ನು ಹೆಸರಿಸ ಬಹುದು.

ಇತರ ಯಿಡ್ಡಿಷ್ ಸಾಹಿತಿಗಳಿಗೂ ಸಿಂಗರ್‌ಗೂ ಅವರ ನಿಲುವಿನಲ್ಲಿಯೂ, ಅವರ ಕಲ್ಪನಾ ಪ್ರಪಂಚದ ಸ್ವರೂಪದಲ್ಲಿಯೂ ಅವರ ಶೈಲಿಯಲ್ಲಿಯೂ ಭಿನ್ನತೆ ಕಾಣುತ್ತದೆ. ಸಿಂಗರ್‌ನ ಕಲ್ಪನಾ ಪ್ರಂಪಚ ಗ್ರಾಮೀಣ ಪೋಲೆಂಡಿನ ಜಾನಪದ ಕಲ್ಪನಾ ಪ್ರಪಂಚ. ಹಿಂದೆ ಜನ ನಂಬುತ್ತಿದ್ದ ಭೂತಗಳೂ ಅವನ ಕೃತಿಗಳಲ್ಲಿ ತಮ್ಮ ಚೇಷ್ಟೆ ನಡೆಸುತ್ತವೆ. ಒಂದು ಮಟ್ಟದಲ್ಲಿ ಅವು ಪ್ರತೀಕಗಳಾಗಿ ಬಳಸಲ್ಪಡುತ್ತವೆ ಎನ್ನುವುದನ್ನೂ ನಾವು ಮರೆಯಬಾರದು ಎನ್ನಿ. ಒಂದು ದೃಷ್ಟಿಯಿಂದ ಅವನ ಜೀವನದರ್ಶನ ಸಾಂಪ್ರ ದಾಯಿಕ, ಅವನನ್ನು ಧಾರ್ಮಿಕ ಸಾಹಿತಿ ಎನ್ನಲೂಬಹುದು. ಅವನಿಗೆ ದೇವರಲ್ಲಿ ಮತ್ತು ಆತ್ಮದ ಅಮರತ್ವದಲ್ಲಿ ನಂಬಿಕೆ ಇದೆ. ಅವನನ್ನು ಮುಖ್ಯವಾಗಿ ಕಾಡುವುದು ಜೀವನದಲ್ಲಿ ನಿರಂತರವಾಗಿರುವ ನೋವು. ವಿಜ್ಞಾನದಲ್ಲಿ ಎಷ್ಟೇ ಪ್ರಗತಿಯಾದರೂ ನಮ್ಮ ಭೌತಿಕ ಪರಿಸರ ಅಭಿವೃದ್ಧಿಯಾಗಬಹುದೇ ವಿನಾ ನಮ್ಮ ಜೀವನದ ಸಂಕಟ ಗಳು ಪರಿಹಾರವಾಗುವುದಿಲ್ಲ ಎಂದು ಸಿಂಗರ್ ಹೇಳುತ್ತಾನೆ. ಭಾರತೀಯರಾದ ನಮಗೆ ಸ್ವಾರಸ್ಯವಾದ ಸಂಗತಿಯೆಂದರೆ ಸಿಂಗರ್ ಭಗವದ್ಗೀತೆ ಮತ್ತು ಬೌದ್ಧ ಸಾಹಿತ್ಯದ ಬಗ್ಗೆ ಮಾತಾಡುತ್ತ ತನ್ನ ವಿಚಾರಗಳಿಗೂ ಇವುಗಳಲ್ಲಿನ ವಿಚಾರಗಳಿಗೂ ಎಷ್ಟು ಸಾಮರಸ್ಯ ಇದೆ ಎಂದರೆ ತಾನು ಹಿಂದಿನ ಜನ್ಮದಲ್ಲಿ ಇವುಗಳನ್ನು ಅಧ್ಯಯನ ಮಾಡಿದ್ದಿರಬಹುದು ಎಂದೆನ್ನಿಸುತ್ತದೆ ಎನ್ನುವುದು. ಇವನ ಸಂವೇದನೆ ಎಷ್ಟು ಆಧುನಿಕವೋ ಇನ್ನೊಂದು ದೃಷ್ಟಿಯಿಂದ ಅಷ್ಟೇ ಪ್ರಾಚೀನ.

ಸಣ್ಣ ಕತೆಗಳಲ್ಲಿ ಇವನ ಕಥನಕಲೆ ಜಾನಪದ ಸಂಪ್ರದಾಯದ್ದು. ಎಂದರೆ ಒಬ್ಬರು ಇತರರಿಗೆ ಹೇಳುತ್ತಾ ಹೋಗುವಂತೆ ಇವನು ಕತೆಗಳನ್ನು ನೇರವಾಗಿ ನಿರೂಪಿಸುತ್ತಾನೆ. ಒಮ್ಮೊಮ್ಮೆ ಹೇಳುವವರು ಕೇಳುವವನು(ರು) ಇರುವಂತೆ ಚೌಕಟ್ಟಿರಬಹುದು, ಹೆಚ್ಚಾಗಿ ಹೀಗೆ ಇಲ್ಲದಿರಬಹುದು. ವಸ್ತುವಿನಲ್ಲಾಗಲೀ, ತಂತ್ರದಲ್ಲಾಗಲೀ ಇವನನ್ನು ನವ್ಯ ಎನ್ನಲಾಗುವುದಿಲ್ಲ. ಇವನಿಗೆ ಕತೆ ನಿಜವಾಗಿ ಕತೆಯಾಗಿರಬೇಕು. ಕಥಾಸ್ವಾರಸ್ಯ ವಿಲ್ಲದಿದ್ದರೆ ಎಂಥಾ ಕತೆ ಎನ್ನುತ್ತಾನೆ. ಹೆಚ್ಚಿನ ಕತೆಗಳಲ್ಲಿ ಕೊನೆಯಲ್ಲಿ ಅನಿರೀಕ್ಷಿತ ವಾದ ತಿರುವು ಬರುತ್ತದೆ. ಇಷ್ಟಾದರೂ ಇವನ ಕತೆಗಳು ಅಪರೂಪದ ಮಾನಸಿಕ ಸ್ಥಿತಿಗಳ ಆಳವಾದ ಪರಿಶೋಧನೆಯಿಂದಲೂ, ಪ್ರತೀಕಗಳ ಸೃಷ್ಟಿಯಿಂದಲೂ, ಫ್ಯಾಂಟಸಿ ಅಥವಾ ಅದ್ಭುತ ಅಂಶಗಳ ಬಳಕೆಯಿಂದಲೂ ನವ್ಯವಾಗುತ್ತವೆ ಎಂದೂ ಭಾಸವಾಗದಿರದು. ತನ್ನ ಕಲೆಯ ಬಗ್ಗೆ ಮಾತಾಡುತ್ತಾ ತನ್ನ ಅಣ್ಣನ ಹಿತವಚನ ವೊಂದನ್ನು ಅವನು ನೆನೆಯುತ್ತಾನೆ. ಅದೇನೆಂದರೆ "ವಿವರಗಳನ್ನು ಕೊಡಬೇಕು : ವಿವರಣೆಯನ್ನಲ್ಲ." ಸಿಂಗರ್ ಏನು ನಡೆಯಿತು ಎಂಬುದನ್ನು ಹೇಳುತ್ತಾನೆಯೇ ಹೊರತು ಅದು ಏಕೆ ಹಾಗೆ ನಡೆಯಿತು ಎಂದು ಮನೋವೈಜ್ಞಾನಿಕವಾಗಿ ವಿವರಣೆ ಕೊಡಲು ಹೋಗುವುದಿಲ್ಲ. ಇದು ಎಲ್ಲ ಉತ್ತಮ ಸಾಹಿತ್ಯದ ಮುಖ್ಯಗುಣ ಎಂದು ಅವನ ಭಾವನೆ.

ಇವನ ಹಿಂದಿನ ಯಿಡ್ಡಿಷ್ ಲೇಖಕರು ಹೆಚ್ಚಾಗಿ ವಿಜ್ಞಾನದ ಮುನ್ನಡೆಯಲ್ಲಿ ವಿಶ್ವಾಸವುಳ್ಳವರು. ಅವರು ಶೋಷಣೆಗೊಳಗಾದ ಯೆಹೂದಿಗಳ ಚಿತ್ರಗಳನ್ನು ಸಾಮಾನ್ಯವಾಗಿ ಕೊಡುವುದುಂಟು. ಸಿಂಗರ್ ಪ್ರಕಾರ ವಿಜ್ಞಾನ ಈಗ ಒಪ್ಪದ ನಂಬಿಕೆಗಳನ್ನೂ ಮುಂದೆ ವಿಜ್ಞಾನ ಒಪ್ಪಬಹುದು. ಅವನ ಪಾತ್ರಗಳು ವಿಶಿಷ್ಟ ಮನೋಭಾವದ ಪಾತ್ರಗಳು. ಸಾಮಾನ್ಯ ಪಾತ್ರಗಳಾದರೂ ಒಂದು ಪರಿಸ್ಥಿತಿಯಲ್ಲಿ ಅವರ ಪ್ರತಿಕ್ರಿಯೆಯ ವೈಶಿಷ್ಟ್ಯದಿಂದ ಅವರು ದುರಂತ ನಾಟಕಗಳ ನಾಯಕರಂತೆ ಘನತೆಯನ್ನು ಪ್ರದರ್ಶಿಸುತ್ತಾರೆ. ಸಿಂಗರ್‌ನ ಪ್ರಕಾರ ಮಾನವ ಜೀವನದಲ್ಲಿ ಎಷ್ಟೇ ನೋವಿದ್ದರೂ ಕೇಡಿದ್ದರೂ ಒಂದು ಭಾಗ್ಯವೂ ಇದೆ. ಅದು ನಮ್ಮ ಸಂಕಲ್ಪಶಕ್ತಿಯ ಸ್ವಾತಂತ್ರ್ಯ, ನಮ್ಮ ಆಯ್ಕೆಯ ಜವಾಬ್ದಾರಿ.

'ಉಪನ್ಯಾಸ' ಎಂಬ ಕತೆ ಸಿಂಗರ್‌ನ ಕಾದಂಬರಿಗಳ ಪ್ರಪಂಚವನ್ನು ಪುನಃ ಸೃಷ್ಟಿಸುತ್ತದೆ. ಇದರ ಕಥಾನಾಯಕ ಸಿಂಗರ್‌ನಂತೆಯೇ ಯಿಡ್ಡಿಷ್ ಕತೆಗಾರ. ಮಾಂಟ್ರಿಯಲ್ ಅನ್ನು ಅವನು ತಲುಪುವುದಕ್ಕೆ ತಡವಾಗಿ ಆ ಚಳಿಗಾಲದ ಮಧ್ಯ ರಾತ್ರಿಯಲ್ಲಿ ಅವನನ್ನು ಸ್ವಾಗತಿಸಲು ಉಳಿದಿರುವವಳು ಊರೆಗೋಲುಗಳನ್ನು ಆಶ್ರಯಿಸಿರುವ ಒಬ್ಬ ಮುದುಕಿ ಮತ್ತು ಅವಳ ಮಗಳು. ಅವರು ಅವನನ್ನು ತಮ್ಮ ಬಡನಿವಾಸಕ್ಕೆ ಕರೆದೊಯ್ಯುತ್ತಾರೆ. ಹಿಟ್ಲರ್ ತನ್ನ ಅಧಿಕಾರ ವ್ಯಾಪ್ತಿ ಗೊಳಗಾದ ಪ್ರದೇಶಗಳ ಯೆಹೂದಿಯರನ್ನು ಚಿತ್ರಹಿಂಸೆ ಕೊಟ್ಟು ಸಾಯಿಸಲು ಏರ್ಪಡಿಸಿದ್ದ ಭಯಂಕರ ಕ್ಯಾಂಪುಗಳಲ್ಲಿ ಕುಪ್ರಸಿದ್ಧವಾದ ಆಸ್ಕ್ವಿಜ್ ಕ್ಯಾಂಪಿನಲ್ಲಿ

ಈ ಮುದುಕಿಯೂ ಅವಳ ಮಗಳೂ ಪಡಬಾರದ ಕಷ್ಟಗಳನ್ನು ಪಟ್ಟು ಹೇಗೋ ಪಾರಾಗಿ ಕೆನಡಾಕ್ಕೆ ವಲಸೆ ಬಂದಿರುವವರು. ಅವನು ಅವರ ನಿವಾಸದಲ್ಲಿ ಕಳೆಯುವ ರಾತ್ರಿ ಮುದುಕಿ ಸತ್ತು ಮಗಳು ಬಿನಿಲಿ ಅನಾಥಳಾಗುತ್ತಾಳೆ. ಆ ರಾತ್ರಿಯ ಪರಿಸ್ಥಿತಿಯಲ್ಲಿ ಕತೆಯ ನಾಯಕನಿಗೆ ಅವನು ಅಮೇರಿಕಾಕ್ಕೆ ವಲಸೆ ಬಂದು ಅಲ್ಲಿ ವಾಸಿಸುತ್ತಿದ್ದ ಕಾಲವೆಲ್ಲಾ ಕನಸಿನಂತೆ ಕರಗಿಹೋಗಿ ತಾನು ಬಿಟ್ಟುಬಂದಿದ್ದ ಹಿಟ್ಲರನ ಹತ್ಯಾಕಾಂಡಗಳ ಘೋರಪ್ರಪಂಚದ ಪ್ರತ್ಯಕ್ಷಾನುಭವವಾಗಿ ಅದೇ ಸತ್ಯವಾಗಿ ತೋರುತ್ತದೆ. ಆಸ್ಕ್ವಿಜ್‌ನಲ್ಲಿ ಅವಳ ಸಂಖ್ಯೆಯನ್ನು ಹಚ್ಚೆ ಹಾಕಿದ್ದ ಬಿನಿಲಿಯ ಕೆಳತೋಳನ್ನು ಹಿಡಿದು ಆತನು ತನ್ನ ಬಾಯಿಂದ ಹೊರಟ "ಬಿನಿಲಿ ನಿನ್ನನ್ನು ಕೈ ಬಿಡುವುದಿಲ್ಲ, ನಿನ್ನ ತಾಯಿಯ ಆತ್ಮದಾಣೆಗೂ," ಎಂಬ ಮಾತುಗಳನ್ನು ಕೇಳಿಸಿ ಕೊಳ್ಳುತ್ತಾನೆ. ಹಿಟ್ಲರ್‌ನ ಕೆಳಗೆ ಪೋಲಿಷ್ ಯೆಹೂದಿಗಳು ಇತರ ಆಕ್ರಮಿತ ಪ್ರದೇಶಗಳ ಮತ್ತು ಜರ್ಮನ್ ಯೆಹೂದಿಗಳಂತೆ ಅನುಭವಿಸಿದ ನರಕಯಾತನೆ ಸಿಂಗರ್ ನನ್ನು ನಿರಂತರ ಕಾಡುವುದರ ಪ್ರತೀಕವಾಗಿ ಈ ಕತೆ ಮುಖ್ಯವಾಗುತ್ತದೆ. ಬದುಕು ಒಡ್ಡಿದ ಅತ್ಯಂತ ಕಠಿಣ ಸವಾಲುಗಳನ್ನು ಧೈರ್ಯದಿಂದ ಎದುರಿಸಿದ ಮುದುಕಿಯ ಪಾತ್ರ ಗಂಭೀರವಾದರೂ ವಾಸ್ತವವಾಗಿ ಚಿತ್ರಿಸಲ್ಪಟ್ಟಿದೆ. ಎರಡನೆಯ ಜಾಗತಿಕ ಯುದ್ಧದ ನಂತರ ಯೆಹೂದಿಗಳನ್ನಿಟ್ಟಿದ್ದ ಕ್ಯಾಂಪುಗಳಿಗೆ ಪುಸ್ತಕಗಳನ್ನು ಕಳುಹಿಸಿ ಕೊಟ್ಟಾಗ ಈ ಮುದುಕಿ ಕತೆಯ ನಾಯಕನ ಒಂದು ಕತೆಯನ್ನು ಓದಿ ಒಂದು ನಿಧಿ ಸಿಕ್ಕಷ್ಟು ಸಂತೋಷಪಟ್ಟಿದ್ದಳು ಎಂಬುದು ಸ್ವಾರಸ್ಯವಾದ ಸಂಗತಿ. ಕತೆಯ ಕೊನೆಯ ಮಾತುಗಳಲ್ಲಿ ಅವಳು ಅವನ ಬರವಿಗಾಗಿ ಮತ್ತು ಅವನಿಗೆ ಮಗಳನ್ನು ಒಪ್ಪಿಸುವುದಕ್ಕಾಗಿ ಮಾತ್ರ ಸಾಯದೆ ಉಳಿದಿದ್ದಳೋ ಎಂದು ಭಾಸವಾಗಿ ಕತೆಯ ಜೀವನ ಚಿತ್ರಣಕ್ಕೆ ಒಂದು ರಹಸ್ಯಮಯ ಆಯಾಮ ಒದಗಿಬರುತ್ತದೆ.

ಇಂಥದೇ ಒಂದು ರಹಸ್ಯಮಯ ಆಯಾಮವಿರುವ ಇನ್ನೆರಡು ಕತೆಗಳು 'ಕಟುಕ' ಮತ್ತು 'ಒಂದು ಗಿಳಿಯ ಕತೆ'. 'ದೇವರೇ ಕರುಣೆಗೆ ಮೂಲವಾದುದ ರಿಂದ ದೇವರಿಗಿಂತ ಮನುಷ್ಯ ಹೆಚ್ಚು ಕರುಣಾಮಯಿಯಾಗುವುದಾಗದು' ಎಂಬ ನುಡಿಯನ್ನು ಆಳವಾಗಿ ಶೋಧಿಸುವ ಕತೆ 'ಕಟುಕ' ಭಗವದ್ಗೀತೆಯ ಅರ್ಜುನನ ವಿಷಾದಯೋಗವನ್ನೂ, ಯಜ್ಞಯಾಗಾದಿಗಳನ್ನು ಎದುರಿಸುವ ಬೌದ್ಧ ಜೈನ ನಿಲುವನ್ನೂ ಈ ಕತೆಯ ಪಾತ್ರಚಿತ್ರಣ ನೆನಪಿಗೆ ತರುತ್ತದೆ. 'ಉಪನ್ಯಾಸ'ದ ನಾಯಕ ಸಿಂಗರ್‌ನಂತೆಯೇ ಯಿಡ್ಡಿಷ್ ಕತೆಗಾರನಾದರೆ 'ಕಟುಕ'ದ ನಾಯಕ ಸಿಂಗರ್ ನಂತೆ ಧರ್ಮಶಾಸ್ತ್ರಜ್ಞರ ಮಗ, ಮೊಮ್ಮಗ. ಇವನೂ ಧರ್ಮನ್ಯಾಯಾಧೀಶನೇ ಆಗಬೇಕಾಗಿದ್ದುದು ತಪ್ಪಿ ಬಲಿಯಾಗಿ ಅರ್ಪಿತವಾಗುವ ಪ್ರಾಣಿಗಳನ್ನು ಕಡಿದು ಹಾಕುವ ಕರ್ತವ್ಯವನ್ನು ಅವನು ವಹಿಸಿಕೊಳ್ಳಬೇಕಾಗಿ ಬಂದು ಅವನ ಮನಸ್ಸಿನಲ್ಲಿ ತುಮುಲ ಆರಂಭವಾಗಿ ಕೊನೆಗೆ ಉನ್ಮಾದದ ಮಟ್ಟವನ್ನು ಮುಟ್ಟುತ್ತದೆ. ದೇವರನ್ನು

ಕೊಲೆಗಾರನೆಂದು ಕೂಗುತ್ತಾ ಅವನು ರಕ್ತದ ಮಡುವಿನಂತೆ ಅವನ ಉದ್ರಿಕ್ತ ಕಲ್ಪನೆಗೆ ಕಾಣುವ ಹೊಳೆಗೆ ಬೀಳುತ್ತಾನೆ.

'ಒಂದು ಗಿಳಿಯ ಕತೆ'ಯ ನಾಯಕ ಸೈಮನ್‌ನಲ್ಲಿಯೂ ಇಂಥದೇ ಪ್ರಾಣಿದಯೆಯನ್ನು ಕಾಣುತ್ತೇವೆ. ಸಿಂಗರ್ ನಿಜಜೀವನದಲ್ಲಿ ಪಕ್ಷಿಪ್ರೇಮಿ. ಅವನು ಎರಡು ಗಿಳಿಗಳನ್ನು ಸಾಕಿಕೊಂಡಿದ್ದಾನೆ. ಅವನಂತೆಯೇ ಸೈಮನ್ ತನ್ನ ಮನೆಯನ್ನು ಸೇರಿಕೊಂಡಿದ್ದ ಒಂದು ಗಿಳಿಯನ್ನು ಸಾಕುತ್ತಾನೆ. ಅಚ್ಚುಮೆಚ್ಚಿನ ಹೆಂಡತಿಯನ್ನು ಕಳೆದುಕೊಂಡಿದ್ದ ಏಕಾಕಿಯಾದ ಅವನಿಗೆ ಅದು ಅತ್ಯಂತ ಪ್ರೀತಿಯ ವಸ್ತುವಾಗುತ್ತದೆ. ವಿಧುರ ಜೀವನವೇ ಹೊಂದಿಕೊಂಡಿದ್ದ ಅವನಿಗೆ ವಿಧಿವಶದಿಂದ ಅವನ ಸ್ವಭಾವಕ್ಕೆ ತೀರಾ ವಿರುದ್ಧ ಸ್ವಭಾವದ ಒಂದು ಹೆಣ್ಣು ಆಕರ್ಷಕಳಾಗಿ ಕಂಡು ಅವರಿಬ್ಬರೂ ಪ್ರೇಮಿಸುತ್ತಾರೆ. ಈಗಾಗಲೇ ಒಂದು ಮದುವೆಯಿಂದ ವಿಚ್ಛೇದನವನ್ನು ಅವಳು ಪಡೆದಿದ್ದುದರಿಂದಲೂ, ಅವನು ಪುರೋಹಿತ ಕುಲಕ್ಕೆ ಸೇರಿದವನಾದುದರಿಂದಲೂ ಅವರು ಮದುವೆಯಾಗುವುದು ಅಸಾಧ್ಯವಾದರೂ ಗಂಡ ಹೆಂಡತಿಯರಂತೆಯೇ ಅವರು ಸಂಸಾರ ಮಾಡುತ್ತಾರೆ. ಆದರೆ ಅವರ ಅಭಿರುಚಿ ಆಸಕ್ತಿಗಳ ಭಿನ್ನತೆಯಿಂದ ಅವರ ಸಂಬಂಧ ವಿಷಮಿಸಿ ಮನೆಯೇ ನರಕವಾಗುತ್ತದೆ. ಅವನ ಸಾಕುಗಿಳಿಯ ಮೇಲೆ ಅವಳಿಗೆ ಮಾತ್ಸರ್ಯ, ಭಯಂಕರ ಸಿಟ್ಟು. ಅವರ ತಂಟೆಗೆ ಮಾತ್ರ ಹೋಗಬಾರದೆಂದು ಅವನು ಎಚ್ಚರಿಸಿದ್ದರೂ ಚಳಿಗಾಲದ ಒಂದು ರಾತ್ರಿ ಹಿಮ ಬೀಳುತ್ತಿದ್ದರೂ ಅವಳು ಅವನ ಪ್ರೀತಿಯ ಗಿಳಿಯನ್ನು ಹೊರಹಾಕುತ್ತಾಳೆ. ಅದು ಸಾಯದಿರುವುದು ಹೇಗೆ? ತಿಳಿದ ಕೂಡಲೇ ಸೈಮನ್ ಅವಳನ್ನು ಎತ್ತಿಕೊಂಡು ಹೋಗಿ ಬಾವಿಯಲ್ಲಿ ಕೆಡವಿ ಸಾಯಿಸುತ್ತಾನೆ. ಪೊಲೀಸರ ವಶಕ್ಕೆ ತನ್ನನ್ನು ಒಪ್ಪಿಸಿಕೊಂಡು ಸೆರೆಮನೆ ಸೇರುತ್ತಾನೆ. ಅವಳ ಕೊಲೆಯ ಬಗ್ಗೆ ಅವನಿಗೆ ಪಶ್ಚಾತ್ತಾಪವಿಲ್ಲ. ಅವಳ ಪ್ರೇತವೂ ಅವನನ್ನು ಕಾಡುವುದೂ ಇಲ್ಲ. ಅವನ ಗಿಳಿ ಮಾತ್ರ ಈಗಲೂ ಆಗಾಗ್ಗೆ ಅವನ ಬಳಿ ಬರುತ್ತಿರುತ್ತದೆ ಎಂದು ಅವನ ನಂಬಿಕೆ. ಸೆರೆಮನೆಯಲ್ಲಿ ಅವನ ಜೊತೆಯ ಮೂವರು ನಾಲ್ವರು ಖೈದಿಗಳಿಗೆ ಅವನು ತನ್ನ ಕತೆಯನ್ನು ಹೇಳಿಕೊಳ್ಳುವಂತೆ ರಚಿತವಾದ ಈ ಕತೆಯಲ್ಲಿ ಜೊತೆಯ ಖೈದಿಗಳು ಸತ್ತಗಿಳಿ ಮತ್ತೆ ಅವನ ಬಳಿಗೆ ಬರುವುದು ಅಸಂಭವವೆಂದರೆ, ಇಲ್ಲ, ಅದು ಸತ್ಯ ಎಂದು ಹೇಳುತ್ತಾನೆ. ಕುದುರೆ ವ್ಯಾಪಾರಿಯಾದ ಸೈಮನ್ ಪ್ರಾಣಿದಯಾಪರ. ತಾನು ಇಟ್ಟುಕೊಂಡಿದ್ದ ಕುದುರೆಗಳನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಾನೆ. ಕುದುರೆಗಳನ್ನು ಕ್ರೂರವಾಗಿ ನಡೆಸಿಕೊಳ್ಳುವವರಿಗೆ ಅವುಗಳನ್ನು ಮಾರನು. ಇಂತಹ ಮೃದುಹೃದಯದವನು ತನ್ನ ಪ್ರೀತಿಯ ಪರಕಾಷ್ಠೆಯಿಂದಲೇ ಕ್ರೌರ್ಯಕ್ಕೆ ಪ್ರತಿಕ್ರೌರ್ಯವೆಸಗುವುದನ್ನು ಈ ಕತೆ ಮನವರಿಕೆಯಾಗುವಂತೆ ಚಿತ್ರಿಸುತ್ತದೆ.

ಅನೈತಿಕ ವೃತ್ತಿಯನ್ನು ಕರ್ತವ್ಯವೆಂದೂ, ದಾಕ್ಷಿಣ್ಯಕ್ಕೂ, ಯಾಂತ್ರಿಕವಾಗಿ ನಡೆಸುವ ನಿಷ್ಠಾವಂತ ಹೆಣ್ಣು 'ಯಾಂಡಾ' ಕತೆಯ ಅದೇ ಹೆಸರಿನ ನಾಯಕಿ.

ಪೋಲೆಂಡಿನ ಎಲ್ಲೆಯ ಹತ್ತಿರದ ಪಟ್ಟಣವೊಂದರಲ್ಲಿ ಇಟ್ಟಿದ್ದ ಹೋಟೆಲೊಂದರಲ್ಲಿ ಪ್ರತಿಯೊಂದು ಕೆಲಸವನ್ನೂ ಕೊಟ್ಟಷ್ಟು ತೆಗೆದುಕೊಂಡು ಒಬ್ಬಳೇ ನಿಭಾಯಿಸುತ್ತಾ ಹಲವು ವರ್ಷಗಳು ಬಯಸಿದ ಅತಿಥಿಗಳಿಗೆ ಭೋಗ್ಯವಸ್ತುವಾಗಿಯೂ ಬಾಳುತ್ತಿದ್ದ ಯಾಂಡಾ ಹೋಟೆಲು ಮಾಲೀಕರು ಸತ್ತಮೇಲೆ ತಾನು ಹುಟ್ಟಿದೂರಿಗೆ ಮರಳುತ್ತಾಳೆ ಅಲ್ಲಿ ಅವಳಿಗಾಗಿ ಗೊತ್ತಾಗಿದ್ದ ಗಂಡನ್ನು ಅವಳು ಊರಿನಲ್ಲಿದ್ದಾಗಲೇ ಇನ್ನೊಬ್ಬ ಹೆಣ್ಣು ಆಕರ್ಷಿಸಿ ಮದುವೆಯಾಗಿರುತ್ತಾಳೆ. ಅವಳು ಈಗ ಸತ್ತಿದ್ದಾಳೆ. ಅವಳ ಮಕ್ಕಳಲ್ಲಿ ಒಂಬತ್ತು ಮಕ್ಕಳು ಬದುಕಿವೆ. ತಂದೆ ಕುಡುಕ. ಮಕ್ಕಳಲ್ಲಿ ದೊಡ್ಡವು ತಂಟರು. ಸಂಸಾರವೇ ಹೊಟ್ಟೆಗೆ ಸಾಕಷ್ಟು ಇಲ್ಲದೆ ಕಷ್ಟದಲ್ಲಿದೆ. ತನ್ನ ಗಂಡನಾಗ ಬಹುದಾಗಿದ್ದವನ ಮೇಲಿನ ವಿಶ್ವಾಸದಿಂದ ಅವನ ಸಂಸಾರವನ್ನು ತನ್ನ ಉಳಿತಾಯದ ಹಣದಿಂದ ಮತ್ತು ದುಡಿಮೆಯಿಂದ ಸರಿಪಡಿಸಲು ಯತ್ನಿಸುವ ಅವಳನ್ನು ಗಂಡನಾಗ ಬೇಕಾಗಿದ್ದವನು 'ಸೂಳೆ' ಎಂದು ಕರೆಯುತ್ತಾನೆ. ಒಕ್ಕಣ್ಣಿನ ಒಬ್ಬ ಮಗ ಅವಳ ಮೇಲೆ ಅತ್ಯಾಚಾರವೆಸಗುತ್ತಾನೆ. "ನಾನು ನಿನ್ನ ತಾಯಿಯಾಗಬಹುದಾಗಿದ್ದವಳು" ಎಂದು ಅವಳು ಆ ತುಂಟ ಹುಡುಗನನ್ನು ತಡೆಯಲು ಪ್ರಯತ್ನಿಸಿದರೂ ಅವನು ಅವಳನ್ನು ಬಿಡುವುದಿಲ್ಲ. ಯಾರಿಗೂ ಇಲ್ಲ ಎಂದು ಹೇಳಲಾರದ ಸ್ವಭಾವದ ಈ ಹೆಣ್ಣು ಇದೊಂದು ಆಕ್ರಮಣಕ್ಕೆ ಮಾತ್ರ ಒಪ್ಪದೆ ಕೊನೆಯವರೆಗೂ ಹೊಡೆದಾಡು ತ್ತಾಳೆ. ಈ ವಿಶಿಷ್ಟ ಸ್ವಭಾವದ ಹೆಣ್ಣಿನ ಈ ದುರಂತ ಕತೆ ಮರ್ಮಸ್ಪರ್ಶಿ.

ಒಬ್ಬ ಮರ್ಯಾದಸ್ಥ ಕಳ್ಳನ ಕತೆ 'ಜಡೆಬಿಲ್ಲೆ'. ತನ್ನೂರಿನಲ್ಲಿ ಅವನು ಕಳ್ಳನಲ್ಲ, ಪ್ರಾಮಾಣಿಕ. ಕಡಿಮೆ ಆದಾಯದ, ಕೊಳಕಾದ ಚರ್ಮ ಹದಮಾಡುವ ಪ್ರಾಮಾಣಿಕ ವೃತ್ತಿಯಲ್ಲಿದ್ದವನು ಅದನ್ನು ಬಿಟ್ಟು ಬೇರೆ ಊರಿಗೆ ಒಮ್ಮೊಮ್ಮೆ ಹೋಗಿ ಕಳ್ಳತನ ಮಾಡಿ ಬಂದು ತನ್ನೂರಿನಲ್ಲಿ ಸಭ್ಯನಂತೆ ಸಂಸಾರ ನಡೆಸುತ್ತಿದ್ದ. ಇವನಿಗೆ ಒಂದು ಸಲ ಅವನು ಹಣ ಮಾಡಿಕೊಂಡು ಹಿಂದಿರುಗಿದಾಗ ಒಂದು ಮಾನಸಿಕ ಆಘಾತ ಕಾದಿರುತ್ತದೆ. ತನ್ನ ಹೆಂಡತಿ ಆದರ್ಶ ಪತ್ನಿಯೆಂದು ತಿಳಿದಿದ್ದವನಿಗೆ ಅವಳ ಗುಣ ಶೀಲಗಳ ಬಗ್ಗೆ ಸಂದೇಹ ಹುಟ್ಟಿಸುವ ಸಾಕ್ಷ್ಯ ಅಕಸ್ಮಾತ್ತಾಗಿ ಕೈಗೆ ಸಿಕ್ಕಿ ಅವನ ಪ್ರಪಂಚವೇ ಬುಡಮೇಲಾಗುತ್ತದೆ. ಅನರ್ಘ್ಯವಾದ ಈ ಊರಿನ ಶ್ರೀಮಂತಳೊಬ್ಬಳ ಜಡೆಬಿಲ್ಲೆಯನ್ನು ತಾನು ಕದ್ದುದುಂಟೆಂದು ಹೆಂಡತಿ ಒಪ್ಪಿಕೊಂಡು "ನೀನು ಕಳ್ಳನಾದರೆ ನಾನೇಕೆ ಆಗಬಾರದು ?" ಎಂದು ಕೇಳುತ್ತಾಳೆ. ತನ್ನ ಕಳ್ಳತನದ ದುಷ್ಪರಿಣಾಮ ಎಷ್ಟರಮಟ್ಟಿಗೆ ತನ್ನ ಸಂಸಾರದ ಮೇಲೆಯೇ ಆಗಿದೆಯೆಂದು ಅರಿತುಕೊಂಡ ಅವನು ತನ್ನ ಕಳ್ಳತನದ ವೃತ್ತಿಯನ್ನು ಕೂಡಲೆ ಬಿಟ್ಟು ಆ ರಾತ್ರಿಯೇ ತನ್ನ ಹೆಂಡತಿಯನ್ನು ಕೂಡಬೇಕೆಂದು ತನಗಿದ್ದ ಅಪಾರ ಆಸೆಯನ್ನು ತ್ಯಜಿಸಿ ತನ್ನ ಹಳೇ ಕೊಳಕು, ಆದರೆ ಪ್ರಾಮಾಣಿಕ ವೃತ್ತಿಗೆ ತೆರಳುತ್ತಾನೆ. ಮನುಷ್ಯನ ಸಂಕಲ್ಪಶಕ್ತಿಯ ಸ್ವಾತಂತ್ರ್ಯಕ್ಕೂ, ಎಂಥವನಲ್ಲಿಯೂ ಹುದುಗಿರಬಹುದಾದ ಘನತೆಗೂ ಇದು ಒಳ್ಳೇ ಉದಾಹರಣೆ.

ಸಿಂಗರ್‌ನ ಜಾನಪದ ಕಥನ ಕಲೆಯ ದೃಷ್ಟಿಯಿಂದ ಅಭ್ಯಾಸಯೋಗ್ಯ 'ಒಂದು ಸೂಜಿಯ ಕತೆ'. ಒಳ್ಳೆಯ ನಡತೆಯ ಹೆಣ್ಣನ್ನು ತನ್ನ ಸೊಸೆಯಾಗಲು ಆಯ್ಕೆ ಮಾಡುವ ಉದ್ದೇಶದಿಂದ ಒಬ್ಬ ಶ್ರೀಮಂತನ ಹೆಂಡತಿ ಒಂದು ಸೂಜಿ ಕೊಳ್ಳುವ ನೆವದಲ್ಲಿ ಇಬ್ಬರು ವ್ಯಾಪಾರಿ ತರುಣಿಯರ ಪರೀಕ್ಷೆ ನಡೆಸುವ ಮತ್ತು ವಿನಯಶೀಲೆಯೂ ವ್ಯಾವಹಾರಿಕವಾಗಿಯೂ ವಿವೇಕಿಯೂ ಆದ ಒಬ್ಬಳನ್ನು ಅವರಿಬ್ಬರಲ್ಲಿ ಅವಳು ಬಡವಿಯಾದರೂ ತನ್ನ ಮಗನಿಗೆ ತಂದುಕೊಳ್ಳುವ ಈ ಕತೆ ಅಪ್ಪಟ ಜಾನಪದ ಕತೆಯೇ. ಆದರೆ ಕತೆಯನ್ನು ಅಲ್ಲಿಯೇ ಬಿಡದೆ ಸಿಂಗರ್ ಆಯ್ಕೆಯಾಗದ ಹೆಣ್ಣಿನ ಮನದ ಮೇಲೆ ಆದ ಆಘಾತವನ್ನು ಶೋಧಿಸುತ್ತಾ ಮುಂದುವರೆಯುತ್ತಾನೆ. ಅತಿ ಹುಚ್ಚಿಯಾಗಿ ಕಡೆಗೆ ಒಂದು ಬಗೆಯ ಸಮಾಧಾನ ಸ್ಥಿತಿಯನ್ನು ಅವಳು ಮುಟ್ಟುವವರೆಗೆ ಅವಳ ಮನಸ್ಸು ಹದಗೆಡುತ್ತಾ ಹೋಗುವುದನ್ನು ಸಿಂಗರ್ ಅದ್ಭುತವಾಗಿ ಚಿತ್ರಿಸುತ್ತಾನೆ.

ವಿಶಿಷ್ಟ ಸ್ವಭಾವದ ವ್ಯಕ್ತಿಗಳನ್ನು ಅನಿರೀಕ್ಷಿತ ಸನ್ನಿವೇಶಗಳಲ್ಲಿಟ್ಟು ಅವರ ಪ್ರತಿಕ್ರಿಯೆಗಳನ್ನು ಪರಿಶೋಧಿಸುವ. ವಿಧಿಯ ವಿಲಾಸದ ನಿಗೂಢತೆಯನ್ನು ಸೂಚಿಸುವಾಗಲೂ ಮನುಷ್ಯನ ಆಯ್ಕೆಯ ಸ್ವಾತಂತ್ರ್ಯ ಮತ್ತು ಜವಾಬ್ದಾರಿಗಳನ್ನು ಒತ್ತಿ ಹೇಳುವ. ಸಾಮಾನ್ಯ ಜನರ ಅಸಾಮಾನ್ಯತೆಯನ್ನು ಎತ್ತಿ ತೋರಿಸುವ ದೊಡ್ಡವರಲ್ಲ ಎನಿಸುವವರಲ್ಲಿಯೂ ಇರುವ ದೊಡ್ಡತನವನ್ನು ತೋರಿಸಿಕೊಡುವ. ಮನುಷ್ಯ ಸ್ವಭಾವದ ಸಂಕೀರ್ಣತೆಯನ್ನು ಕಲೆಯನ್ನು ಮರೆಮಾಚುವ ಕಲೆಯ ಮೂಲಕ ಅಭಿವ್ಯಕ್ತಿಸುವ ಇಂಥ ಅದ್ಭುತ ಕತೆಗಾರನ ಪರಿಚಯ ಕನ್ನಡಿಗರಿಗೆ ಆಗಬೇಕಾದುದು ಅಗತ್ಯ ಮತ್ತು ಕನ್ನಡ ಸಣ್ಣಕತೆಯ ಬೆಳವಣಿಗೆಯ ಈ ಹಂತದಲ್ಲಿ ಸಂದರ್ಭೋಚಿತ.

---

ನರಹಳ್ಳಿ ಬಾಲಸುಬ್ರಹ್ಮಣ್ಯ ಅವರ 'ಸಿಂಗರನ ಕಥೆಗಳು' ಕೃತಿಗೆ ಬರೆದ ಮುನ್ನುಡಿಯಿಂದ ಸಂಗ್ರಹಿತ.

—ಸಂ.

# ಭಾರತದಲ್ಲಿ ಯೆಹೂದಿಗಳು

ಬಿ. ವೈ. ಲಲಿತಾಂಬ

ಭಾರತದ ನರ–ನಾಡಿಗಳಲ್ಲಿ ಸೇರಿಹೋಗಿರುವ ಯೆಹೂದಿಗಳು ಕ್ರಿ.ಶ. ಸುಮಾರು 1ನೆಯ ಶತಮಾನದಿಂದ ಭಾರತೀಯರಾಗಿ ಇಲ್ಲಿ ನೆಲಸಿದ್ದಾರೆ. ಕ್ರಿ.ಶ. 8ನೆಯ ಶತಮಾನದಲ್ಲಿ ಮಲಬಾರ್‌ನ ರಾಜನಿಂದ ಸನದು ಗಳಿಸಿ ತಮ್ಮ ಧರ್ಮಾ ಚರಣೆಯಲ್ಲೂ ಇವರು ನಿರತರಾದರು. 16ನೆಯ ಶತಮಾನದಲ್ಲಿ ವಿಧರ್ಮೀಯರ ಕಿರುಕುಳ ಅನುಭವಿಸಿ ಭಾರತದ ಇತರೆ ಪ್ರದೇಶಗಳಿಗೆ ವಲಸೆ ಹೋಗಿ ಇಂದು ವಿಶೇಷ ವಾಗಿ ಮುಂಬಯಿಯ ಥಾನಾ ಹಾಗೂ ಕುಲಾಬಾದಲ್ಲಿ ನೆಲಸಿದ್ದಾರೆ.

ವಿಶ್ವದ ಏಕೇಶ್ವರವಾದಿಗಳಲ್ಲಿ ಅತಿ ಪ್ರಾಚೀನತೆಯನ್ನು ಹೊಂದಿದ ಯೆಹೂದಿ ಧರ್ಮದಲ್ಲಿ ಸರ್ವಶಕ್ತಿ ಸಂಪನ್ನನಾದ, ಸರ್ವಜ್ಞ–ಸರ್ವದರ್ಶಿಯಾದ ಪರಮಾತ್ಮನನ್ನು ಇವರು ಇಂದಿಗೂ ಆರಾಧಿಸುತ್ತಾರೆ. 'ತಾಲ್‌ಮುಡ್'ನ ವಿಧಿ–ನಿಷೇಧಗಳು ಇವರ ಕರ್ಮ–ಧರ್ಮಗಳಿಗೆ ಮಾರ್ಗದರ್ಶನ ಮಾಡುತ್ತವೆ. ಹಾಗೂ ಜರೂಸಲಂ ನಾಶವಾದ ದಿನ ಇವರು ಉಪವಾಸ ಮಾಡುತ್ತಾರೆ.

ಭಾರತದ ಯೆಹೂದಿಗಳು 'ಬೇನೇ ಇಸ್ರಾಯಿಲ್–ಇಸ್ರೇಲಿನ ಪುತ್ರ'ರೆಂದು ಪ್ರಸಿದ್ಧಿ ಪಡೆದಿದ್ದಾರೆ. ಮುಂಬಯಿ ಪ್ರಾಂತದಲ್ಲಿ ಇವರು ಹೆಚ್ಚಾಗಿ ಮರಾಠಿ ಭಾಷೆ ಮಾತನಾಡುತ್ತಾರೆ. ಇಂದಿನ ಉಡುಪು ಧರಿಸುತ್ತಾರೆ. ಎಣ್ಣೆಯ ವ್ಯಾಪಾರವನ್ನು ವಂಶಪರಂಪರಾಗತವಾಗಿ ನಡೆಸಿಕೊಂಡು ಬರುತ್ತಿರುವುದರಿಂದ ಮುಂಬಯಿಯಲ್ಲಿ ಇವರನ್ನು 'ಶನಿವಾರತೇಲಿ' (ಶನಿವಾರ–ವ್ಯಾಪಾರದ ದಿನ, ಎಣ್ಣೆ ಮಾರುವವರು) ಎಂದೇ ಕರೆಯುತ್ತಾರೆ. 'ಡೇವಿಡ್ ನಕ್ಷತ್ರ'ದ ಮುಂದೆ ಇವರು ಎಣ್ಣೆ ದೀಪ ಹಚ್ಚುತ್ತಾರೆ. ಕೆಲವರು ನೇಯ್ಗೆ, ಅಧ್ಯಾಪಕ ವೃತ್ತಿ ಹಾಗೂ ವಿಶೇಷವಾಗಿ ದವಾಖಾನೆ ನಡೆಸುತ್ತಾರೆ.

ಈ ಯೆಹೂದಿಗಳು ಭಾರತೀಯ ಸಂಸ್ಕಾರಗಳನ್ನು ತಮ್ಮ ಜೀವನದಲ್ಲಿ ಎಷ್ಟರ ಮಟ್ಟಿಗೆ ಅಳವಡಿಸಿಕೊಂಡಿರುವರೆಂದರೆ ಮದುವೆಯ ಸಂಸ್ಕಾರದಲ್ಲಿ ಅರಿಶಿಣ–ಗೋರಂಟಿ ಹಚ್ಚಿಕೊಳ್ಳುತ್ತಾರೆ.

ಪ್ರಾರ್ಥನೆ ಇಂದಿಗೂ ಹಿಬ್ರೂ ಭಾಷೆಯಲ್ಲಿ ಮಾಡುತ್ತಾರೆ, ರೆಕ್ಕೆಯ ಮೀನು ತಿನ್ನುತ್ತಾರೆ ; ಶುಕ್ರವಾರದ ದಿನ ಅದು ಕೂಡ ತಿನ್ನುವುದಿಲ್ಲ ! ವಿವಾಹ ಸಂಸ್ಕಾರಗಳು ಭಾನುವಾರದ ದಿನ ಮಾತ್ರ ನೆರವೇರುತ್ತದೆ, ಸಂಜೆಯ ಹೊತ್ತು ಇವರ ಪ್ರಾರ್ಥನಾ ಮಂದಿರದಲ್ಲಿ ಆ ಸಂಸ್ಕಾರ ಜರುಗುತ್ತದೆ. ಹಿಬ್ರೂ ಭಾಷೆಯಲ್ಲಿ ಮಂತ್ರೋಚ್ಚಾರ ನಡೆಸಿದ ನಂತರ ವರ ವಧುವಿಗೆ ತನ್ನ ಕೈ ಬೆರಳಿನ ಬೆಳ್ಳಿಯ ಉಂಗುರವನ್ನು ತೊಡಿಸುತ್ತಾನೆ. ವರ ಕೈಯಲ್ಲಿ ಬೆಳ್ಳಿಯ ಮದ್ಯದಪಾತ್ರೆಯಿದ್ದು ಹಿಡಿದು ಅದರಲ್ಲಿ ಅರ್ಧ ವಧುವಿನ ಕೈಯ ಗಾಜಿನ ಲೋಟಕ್ಕೆ ಸುರಿಯುತ್ತಾನೆ. ಅದನ್ನು ಇಬ್ಬರೂ ಸೇವಿಸುತ್ತಾರೆ. ಮಂಗಳಸೂತ್ರವನ್ನು ವಧುವಿಗೆ ಕಟ್ಟುತ್ತಾರೆ. ವರ ವಧುವಿನ ಕೈನ ಗಾಜಿನ ಲೋಟ ಒಡೆದು ಹಾಕುತ್ತಾನೆ. ನಂತರ ಇಬ್ಬರೂ ಮದುವೆಯ ಕರಾರು ಪತ್ರಕ್ಕೆ ಸಹಿ ಹಾಕುತ್ತಾರೆ.

ಕಪ್ಪು–ಬಿಳಿ ಯೆಹೂದಿಗಳ ನಡುವೆ ವಿವಾಹ–ಸಂಬಂಧ ಏರ್ಪಡುವುದಿಲ್ಲ. ಹುಟ್ಟಿದ ಮಗುವಿಗೆ ಗಂಡಾದರೆ ಅಬ್ರಾಹಂ, ಐಸಾಕ್, ಜೋಸೆಫ್, ಮೋಸೆಸ್, ಬೆಂಜಾಮಿನ್ ಇತ್ಯಾದಿ ಹೆಸರುಗಳು, ಹೆಣ್ಣಾದರೆ ಸಾರಾ, ರೆಬೆಕಾ, ಹೆನ್ನಾ, ಸಫೀರಾ ಮುಂತಾದ ಹೆಸರುಗಳು. ಹಾಗೂ 40ನೆಯ ದಿನ ತಾಯಿಗೆ ಜನನ ಸೂತಕದಿಂದ ಮುಕ್ತಿ ಸಿಗುತ್ತದೆ.

ಹಬ್ಬ ಹರಿದಿನಗಳು ಹೊಸವರ್ಷ, ನವಾನ್ನ ಹೋಳಿ, ದಾರಫಳನಿ ಮುಂತಾದು ವನ್ನು ಇವರು ಆಚರಿಸುತ್ತಾರೆ. ದಾರಫಳನಿಯ ದಿನ ಬಿಳಿ ಉಡುಪು ಧರಿಸಿ ಮೌನವ್ರತ ಆಚರಿಸುತ್ತಾರೆ.

ಆಧಾರ :

Encyclopaedia of Religions.

# ಆಧುನಿಕ ಯಿಡ್ಡಿಷ್ ಸಾಹಿತ್ಯ

ಡಾ. ಎಚ್. ಎಸ್. ವೆಂಕಟೇಶಮೂರ್ತಿ

ಬಹಳ ಕಾಲ ಯಿಡ್ಡಿಷ್ ಆಡುಭಾಷೆಯಾಗಿ ಮಾತ್ರ ಉಳಿದಿತ್ತು. ಸಾಹಿತ್ಯಕ್ಕೆ ಅದನ್ನು ಬಳಸುವ ಧೈರ್ಯ ಆರಂಭದ ಲೇಖಕರಿಗೆ ಇರಲಿಲ್ಲ. ಹೀಬ್ರು ಪಂಡಿತರ ಭಾಷೆಯಾಗಿ ಚಾಲ್ತಿಯಲ್ಲಿದ್ದ ಕಾಲವದು. 12, 13ನೇ ಶತಮಾನಗಳಲ್ಲಿ ಯಿಡ್ಡಿಷ್ ಭಾಷೆಯಲ್ಲಿ ರಚಿತವಾದ ಕೃತಿಗಳು ಮಹಿಳೆ ಮತ್ತು ಅಜ್ಞರನ್ನು ಮಾತ್ರ ಉದ್ದೇಶಿಸಿದ್ದುವು! ಆರಂಭದ ಯಿಡ್ಡಿಷ್ ಕೃತಿಗಳು ಎರಡು ವಾಹಿನಿಯಲ್ಲಿ ಕಾಣಿಸಿಕೊಂಡವು. ಒಂದು ಧಾರ್ಮಿಕ ವಾಹಿನಿ. ಇನ್ನೊಂದು ಲೌಕಿಕ. ಲೌಕಿಕ ವಾಹಿನಿಯಲ್ಲಿ ಕಾಣಿಸಿದ ಕೃತಿಗಳು ಜರ್ಮನ್ ಮತ್ತು ಇಟಾಲಿಯನ್ ಭಾಷೆಗಳಿಂದ ಆಮದು ಮಾಡಿಕೊಂಡ ಅದ್ಭುತ ರಮ್ಯ ಮಾದರಿಯ ಕೃತಿಗಳು. ಯೆಹೂದೀ ಜಾನಪದ ಗಾಯಕರು ಇಂಥ ಕೃತಿಗಳನ್ನು ಮನರಂಜನಾಗೋಷ್ಠಿಗಳಲ್ಲಿ ಹಾಡುತ್ತಿದ್ದರು ; ಅಭಿನಯಿಸುತ್ತಿದ್ದರು. 17ನೇ ಶತಮಾನದಲ್ಲಿ ಸಂಪೂರ್ಣ ಕಾಣೆಯಾದ ಲೌಕಿಕ ಕಾವ್ಯ, ಮತ್ತೆ ಕಾಣಿಸತೊಡಗಿದ್ದು 18ನೇ ಶತಮಾನದ ಉತ್ತರಾರ್ಧದಲ್ಲಿ. ಪೂರ್ವ ಐರೋಪ್ಯ ಯೆಹೂದಿಗಳ ಭಾಷೆಯಾಗಿ ಯಿಡ್ಡಿಷ್ ಈ ಕಾಲಮಾನದಲ್ಲಿ ಪ್ರವರ್ಧಮಾನಕ್ಕೆ ಬಂತು. ಅನೇಕ ಜಾನಪದ ಕಥನಕೃತಿಗಳು ಈ ಕಾಲದಲ್ಲಿ ರಚಿತವಾದುವು. ಸರಿಸುಮಾರು ಇದೇ ಕಾಲದಲ್ಲಿ ಪೋಲೆಂಡ್ ಪಾಶ್ಚಾತ್ಯೀಕರಣಕ್ಕೆ ಒಳಗಾಗತೊಡಗಿತ್ತು. ಇದು ಯೆಹೂದಿಗಳ ಜೀವನಕ್ರಮ ಮತ್ತು ಯಿಡ್ಡಿಷ್ ಸಾಹಿತ್ಯದ ಮೇಲೆ ಗಾಢ ಪ್ರಭಾವ ಬೀರಿತು. ಈ ಕಾಲದ ಬಹುಪಾಲು ಲೇಖಕರು ಹೀಬ್ರೂ ಮತ್ತು ರಷಿಯನ್ ಭಾಷೆಯಲ್ಲಿ ಬರೆದರಾದರೂ, ಕೆಲವರು ಯಿಡ್ಡಿಷ್ ಭಾಷೆಯಲ್ಲೂ ಕೃತಿರಚನೆ ಮಾಡಿದರು. ಜನಪ್ರಿಯ ವೈಜ್ಞಾನಿಕ ಕೃತಿಗಳೂ ಈ ಕಾಲದಲ್ಲಿ ರಚಿತವಾಗತೊಡಗಿದವು. ಇಸ್ರೇಲ್ ಆಕ್ಸೆನ್ ಫೆಲ್ಡ್ ಈ ಯುಗದ ಮುಖ್ಯ ಲೇಖಕರಲ್ಲಿ ಒಬ್ಬ. ಇವನ ಕತೆ ಮತ್ತು ನಾಟಕಗಳು ಪೂರ್ವ ಐರೋಪ್ಯ ಯೆಹೂದಿಗಳ ಮೂಢನಂಬಿಕೆ ಮತ್ತು ಕಂದಾಚಾರಗಳನ್ನು ತೀವ್ರ ವಿಡಂಬನೆಗೆ ಒಳಪಡಿಸುತ್ತವೆ. ಶ್ಲೊಮೊ ಎಟ್ಟಿಂಜಿರ್, ಇಸ್ರೇಲ್ ಆಕ್ಸೆನ್‌ಫೆಲ್ಡ್‌ಗೆ ಹೋಲಿಸಿದರೆ, ಅವನಿಗಿಂತ ಶ್ರೇಷ್ಠ ಕಲಾವಿದ; ಮನಸ್ಸನ್ನೂ ಅವನಷ್ಟು ಕಹಿಮಾಡಿ

ಕೊಂಡವನಲ್ಲ. 1856ರಲ್ಲಿ ಶೊಲೋಮ್‌ನ ನಾಟಕಗಳೂ, ಸಣ್ಣಕತೆಗಳೂ, ಕವಿತೆ ಮತ್ತು ರೂಪಕ ಕತೆಗಳೂ ಬೆಳಕಿಗೆ ಬಂದುವು.

ಆಧುನಿಕ ಯಿಡ್ಡಿಷ್ ಗದ್ಯ ಸಾಹಿತ್ಯ ರಚನೆಯಾಗತೊಡಗಿದ್ದು 1850ರ ಅನಂತರ. ಇಜಿಕ್ ಮಿಯರ್‌ಡಿಕ್ ಅನೇಕ ಕತೆ ಮತ್ತು ವಿಡಂಬನಾತ್ಮಕ ಕಾದಂಬರಿಗಳನ್ನು ಬರೆಯತೊಡಗಿದ್ದು ಆ ಕಾಲದಲ್ಲಿ. ಐಸಾಕ್ ಜೋಯಲ್ ಲಿಂಜೆಸ್ಕಿ 1869ರಲ್ಲಿ 'ಪೋಲಿಷ್ ಹುಡುಗ' ಎಂಬ ತನ್ನ ಪ್ರಸಿದ್ಧ ಕಾದಂಬರಿಯನ್ನು ಪ್ರಕಟಿಸಿದ. ಮೆಂಡೆಲ್ ಮೊಖರ್ ಸ್ಫೊರಿಮ್ (ಆಧುನಿಕ ಯಿಡ್ಡಿಷ್ ಸಾಹಿತ್ಯದ ಪಿತಾಮಹ ಎಂದು ಹೆಸರಾದ ಲೇಖಕ) ಯಿಡ್ಡಿಷ್ ಮತ್ತು ಹೀಬ್ರೂ ಎರಡೂ ಭಾಷೆಗಳಲ್ಲಿ ಬರೆದ ಅತ್ಯಂತ ಸಮರ್ಥ ಲೇಖಕ. ಮೆಂಡೆಲ್ ಕೂಡ, ತನ್ನ ಇತರ ಸರೀಕ ಲೇಖಕರಂತೆಯೇ ರಷಿಯನ್ ಮತ್ತು ಪೋಲಿಷ್ ಯೆಹೂದಿಗಳ ಮೂಢನಂಬಿಕೆ, ಅವೈಜ್ಞಾನಿಕ ಶಿಕ್ಷಣ ಕ್ರಮ, ಕಂದಾಚಾರಗಳನ್ನು ತೀವ್ರವಾಗಿ ವಿಡಂಬನೆಗೆ ಗುರಿಪಡಿಸುತ್ತಾನೆ. ಜನ ಸಾಮಾನ್ಯರನ್ನು ತಮ್ಮ ಸ್ವಾರ್ಥಕ್ಕಾಗಿ ಶೋಷಿಸುತ್ತಿದ್ದ ಮೇಲ್ವರ್ಗದ ಯೆಹೂದಿಗಳೂ ಮೆಂಡೆಲ್‌ನ ಟೀಕೆಗೆ ಗುರಿಯಾಗುತ್ತಾರೆ. ಇವನ ಕಾಲಕ್ಕಾಗಲೇ ಬಹಳಷ್ಟು ಸಂಖ್ಯೆಯಲ್ಲಿ ಯೆಹೂದಿಗಳು ರಷಿಯ, ಪಶ್ಚಿಮ ಯುರೋಪ್, ಅಮೆರಿಕಾದ ದೊಡ್ಡ ದೊಡ್ಡ ನಗರಗಳಲ್ಲಿ ನೆಲೆಸಿದ್ದರು. ಜಗತ್ತಿನ ವಿಖ್ಯಾತ ವಿಶ್ವವಿದ್ಯಾಲಯಗಳಲ್ಲಿ ಯೆಹೂದಿಗಳು ಪ್ರಾಧ್ಯಾಪಕರುಗಳಾಗಿ ಸೇವೆ ಸಲ್ಲಿಸುತ್ತಿದ್ದರು. ಯೆಹೂದೀ ಚಳವಳಿಯ ಬಿಸಿ ಪೋಲೆಂಡ್ ಮತ್ತು ಯುಕ್ರೈನ್‌ಗಳ ಸಣ್ಣ ಸಣ್ಣ ಹಳ್ಳಿಗಳಲ್ಲಿ ಜೀವಿಸುತ್ತಿದ್ದ ಯೆಹೂದಿಗಳಿಗೂ ಮುಟ್ಟಿತ್ತು. ತರುಣ-ತರುಣಿಯರು ಪ್ಯಾಲಸ್ಟೈನ್‌ನ ಪುನರ್ ನಿರ್ಮಾಣದ ಕನಸು ಕಾಣುತ್ತಾ ಮನೆಗಳನ್ನು ತೊರೆದು ಹೊರಟಿದ್ದರು. ಸಂಯುಕ್ತ ಸಂಸ್ಥಾನ, ದಕ್ಷಿಣ ಅಮೆರಿಕಾ ಮೊದಲಾದ ರಾಷ್ಟ್ರಗಳಿಗೆ ಯೆಹೂದಿಗಳು ಭಾರಿ ಪ್ರಮಾಣದಲ್ಲಿ ವಲಸೆ ಹೋಗುತ್ತಿದ್ದರು. ಇಂಥ ಕಾಲದಲ್ಲಿ ಮೆಂಡೆಲ್ ಕುಗ್ರಾಮಗಳಲ್ಲಿ ವಾಸಿಸುತ್ತಿದ್ದ ಶ್ರೀಸಾಮಾನ್ಯರ ಬದುಕನ್ನು ತನ್ನ ಕೃತಿಗಳಲ್ಲಿ ಚಿತ್ರಿಸುವುದೇ ತನ್ನ ಪರಮಗುರಿಯೆಂದು ಭಾವಿಸಿದಂತೆ, ಬಡ ಯೆಹೂದಿಗಳ ಬದುಕಿನ ಚಿತ್ರವನ್ನು ಕೊಡುತ್ತಿದ್ದ.

ಯಿಡ್ಡಿಷ್ ಸಾಹಿತ್ಯದಲ್ಲಿ ಅನಂತರ ಕಾಣಿಸಿಕೊಂಡ ಬಹುಮುಖ್ಯ ಲೇಖಕ ಶೋಲೆಮ್ ಅಲೆಶೆಮ್. ಶೋಲೆಮ್‌ನ ನಾಯಕರೆಲ್ಲಾ ಜೀವಿಸುವುದೇ ದೊಡ್ಡ ಸವಾಲೆಂಬಂತೆ ಬದುಕಿನ ಹೋರಾಟದಲ್ಲಿ ತೊಡಗಿದವರು. ನಿತ್ಯದ ಜೀವನ ನಿರ್ವಹಣೆಯ ಪಾಡೇ ಪ್ರಧಾನ ಕಥಾವಸ್ತುವಾದ ಜಗತ್ತಿನ ಏಕೈಕ ಲೇಖಕನೆಂದರೆ ಶೋಲೆಮ್ ಎಂದು ವಿಮರ್ಶಕರ ಅಭಿಪ್ರಾಯ. ಅವನ ಕೃತಿಗಳು ಭಾವವಶತೆಯ ಅಂಚನ್ನು ಆಗಾಗ ಮುಟ್ಟಿಯೂ, ತಮ್ಮ ಅಸ್ತಿತ್ವದ ಘನತೆಯನ್ನೂ ಪಕ್ವತೆಯನ್ನೂ ಭಂಗಪಡಿಸಿಕೊಳ್ಳದೆ ಶ್ರೇಷ್ಠ ಕೃತಿಗಳಾಗಿ ಎದ್ದು ನಿಲ್ಲುವ ಪವಾಡ ಸಂಭವಿಸುತ್ತದೆ. 'ಹಾಲು ವ್ಯಾಪಾರಿ ತೇವ್ಯಾ', 'ಜಾತ್ರೆಯಿಂದ ಬಂದ ಮೋಲೆ' ಮೊದಲಾದುವು ಆತನ

ಅತ್ಯಂತ ಮಹತ್ವದ ಕೃತಿಗಳು. ಅವನ ಭಾಷೆ ಸಮೃದ್ಧವಾದದ್ದು. ಅವನ ವಿವರಗಳು ಜೀವಂತ ಚಿತ್ರಗಳನ್ನು ಕಡೆದಿಡುತ್ತವೆ. ತಿಳಿಹಾಸ್ಯ ಅವನ ಕೃತಿಗಳ ಉದ್ದಕ್ಕೂ ಕಾಣುತ್ತದೆ. ಶೋಲೆಮ್ ತನ್ನ ಕೊನೆಗಾಲವನ್ನು ಅಮೆರಿಕಾದಲ್ಲಿ ಕಳೆದವನು. ಅಮೆರಿಕೆಗೆ ವಲಸೆಬಂದು ನೆಲೆಸಿರುವ ರಷಿಯನ್ ಯೆಹೂದಿಗಳ ಬದುಕಿನ ವಿವರಗಳನ್ನು ಶೋಲೆಮ್ ಕೊಡುವ ಕ್ರಮ ಅತ್ಯಂತ ಸಹಜ; ಅಧಿಕೃತ; ಹಾಸ್ಯಮಯ.

ಐಸಾಕ್ ಲಿಯಬ್ ಪೆರೇಜ್ಟ್, ಶೋಲೆಮ್‌ನ ಸಮಕಾಲೀನನಾದ ಇನ್ನೊಬ್ಬ ಪ್ರಮುಖ ಲೇಖಕ. ಮೊದಲ ಬಹುಮುಖ್ಯ ರಮ್ಯವಾದೀ ಯಿಡ್ಡಿಷ್ ಲೇಖಕನೆಂದೂ ಆತನನ್ನು ಕರೆಯಲಾಗುತ್ತದೆ. 'ಫೋಕ್‌ಟೇಲ್ಸ್' ಆತನ ಅತ್ಯಂತ ಜನಪ್ರಿಯ ಕೃತಿ. 'ಹಳೇ ಮಾರುಕಟ್ಟೆಯಲ್ಲಿ ಒಂದು ರಾತ್ರಿ' ಪೆರೇಟ್ಜ್‌ನ ಅತೀಂದ್ರಿಯ ತುಡಿತವುಳ್ಳ ಪ್ರಸಿದ್ಧ ನಾಟಕ. ವಸ್ತು ಮತ್ತು ಶೈಲಿ ಎರಡೂ ದೃಷ್ಟಿಯಲ್ಲೂ ಪೆರೇಟ್ಜ್ ಆಧುನಿಕ ಐರೋಪ್ಯ ಲೇಖಕರಿಗೆ ಸಮೀಪ ಎನ್ನಬಹುದು. ಯಿಡ್ಡಿಷ್ ಹಳ್ಳಿ ಮತ್ತು ನಗರಗಳಲ್ಲಿನ ಪ್ರೇಮವನ್ನು ವಸ್ತುವಾಗಿ ಸಾಹಿತ್ಯದಲ್ಲಿ ತಂದ ಮೊದಲ ಲೇಖಕ ಪೆರೇಟ್ಜ್. ಧರ್ಮದ ಬಗ್ಗೆ ಆತನದು ಧನಾತ್ಮಕ ಧೋರಣೆಯೇನಲ್ಲ. ಕವಿತೆ, ನಾಟಕ, ಸಣ್ಣ ಕತೆಗಳನ್ನು ರಚಿಸಿರುವ ಈ ಲೇಖಕ ರಷಿಯ ಮತ್ತು ಪೋಲೆಂಡ್‌ನ ಯೆಹೂದಿಗಳು ಧರ್ಮಾತೀತ ಸಂಸ್ಕೃತಿಯೊಂದನ್ನು ರೂಪಿಸಿಕೊಳ್ಳುವುದು ಸಾಧ್ಯ ಎಂದು ನಂಬಿದವನು ಈತನನ್ನು 'ಯಿಡ್ಡಿಷಿಸಂ'ನ ಜನಕನೆಂದು ನಿರ್ವಿವಾದವಾಗಿ ಕರೆಯಬಹುದು. ರಷಿಯಾದ ಯೆಹೂದಿಗಳಿಗೆ ಸಾಂಸ್ಕೃತಿಕ ಸ್ವಾಯತ್ತತೆ ದೊರೆಯಬೇಕೆಂದು ಬಯಸಿದ ಈ ಲೇಖಕ, ಶೋಲೆಮ್‌ನಂತೆ ರಾಜಕೀಯ ಜಿಯೊನಿಸಂ ಅನ್ನು ಅಪೇಕ್ಷಿಸಿದವನಲ್ಲ. ಶೋಲೆಮ್ ಮತ್ತು ಮೆಂದೆಲ್ ಜೊತೆಗೆ ಪೆರೇಟ್ಜ್‌ಗಿದ್ದ ಒಂದೇ ಸಮಾನಾಂಶವೆಂದರೆ, ಅವರಂತೆ ಇವನೂ ಸಾಹಿತ್ಯವೊಂದರಿಂದ ಜೀವನ ನಿರ್ವಹಿಸುವುದರಲ್ಲಿ ವಿಫಲನಾದವನು. ತಾನು ಬರವಣಿಗೆಯಲ್ಲಿ ಯಾರನ್ನು ಖಂಡಿಸುತ್ತಿದ್ದನೋ ಅದೇ ಧಾರ್ಮಿಕ ಯೆಹೂದಿಗಳ ಸಂಸ್ಥೆಯಲ್ಲಿ ಇವನು ಕೆಲಸಗಾರನಾಗಿ ದುಡಿಯಬೇಕಾಯಿತು! ಅವನ ಮನೆಯಲ್ಲಿ ಯಾವಾಗಲೂ ಯುವ ಲೇಖಕರು ತುಂಬಿರುತ್ತಿದ್ದರು. ಅನೇಕ ಪ್ರತಿಭಾವಂತ ತರುಣ ಲೇಖಕರನ್ನು ಪೆರೇಟ್ಜ್ ಬೆಳಕಿಗೆ ತಂದ. ಹಾಗೆ ನೋಡಿದರೆ ಈತ ತನ್ನ ಸರೀಕರಿಗಿಂತ ಹೆಚ್ಚು ಪ್ರತಿಭಾವಂತ. 'ಕಾಲ' ಮತ್ತು 'ಸಂಯಮ'ದ ಅಭಾವದಿಂದಾಗಿ ವಿಸ್ತಾರವಾದ ಹರಹುಳ್ಳ ಸಾಹಿತ್ಯ ಕೃತಿಗಳನ್ನು ಈತ ರಚಿಸಲೇ ಇಲ್ಲ. ಆದರೆ ಅವನು ರಚಿಸಿರುವ ಕವಿತೆಗಳು, ಕಿರು ನಾಟಕಗಳು, ಸಣ್ಣ ಕತೆಗಳು ಯಿಡ್ಡಿಷ್ ಸಾಹಿತ್ಯದಲ್ಲಿ ಬಹುಕಾಲ ಉಳಿಬಾಳುವಂಥವು.

ಇದೇ ಕಾಲದ ಇನ್ನೊಬ್ಬ ಪ್ರಮುಖ ಲೇಖಕ, ಶ್ರೇಷ್ಠ ಪ್ರಬಂಧಕಾರನೆಂದು ಹೆಸರಾಗಿರುವ ಡೇವಿಡ್ ಫ್ರಿಷ್‌ಮನ್. ಯಿಡ್ಡಿಷ್ ಮತ್ತು ಹೀಬ್ರು ಎರಡೂ ಭಾಷೆಗಳಲ್ಲಿ ಬರೆದ ಲೇಖಕ ಇವನು. ತನ್ನ ಪ್ರಬಂಧಗಳಲ್ಲಿ ಡೇವಿಡ್ 'ಯುರೋಪಿ

ಯುನಿಸಂ'ನ್ನು ಸಮರ್ಥಿಸುತ್ತಾನೆ. ಮಧ್ಯ ಮತ್ತು ಪಶ್ಚಿಮ ಯುರೋಪ್‌ಗಳ ಸಾಂಸ್ಕೃತಿಕ ಮತ್ತು ವೈಜ್ಞಾನಿಕ ಪ್ರಗತಿಯಿಂದ ಆಕರ್ಷಿತನಾದ ಡೇವಿಡ್, ತನ್ನ ಕಾಲದ ಯಿಡ್ಡಿಷ್ ಮತ್ತು ಹೀಬ್ರೂ ಸಾಹಿತ್ಯ ಕೇವಲ ಪ್ರಾಂತೀಯ ಮಟ್ಟದೆಂದು ಭಾವಿಸಿದ್ದ! ಜರ್ಮನ್ ತತ್ವಜ್ಞಾನಿ ಫ್ರೆಡ್ರಿಕ್ ನೀಷೆಯನ್ನು ಅನುವಾದಿಸಿದ್ದು ಮಾತ್ರವಲ್ಲ, 'ಯುರೋಪಿನ ಹೊಸಗಾಳಿ' ತನ್ನ ಜನತೆಗೆ ಪರಿಚಯವಾಗಬೇಕೆಂದು ಬದುಕಿನುದ್ದಕ್ಕೂ ಹೋರಾಡಿದ ಈತ 1922ರಲ್ಲಿ ಒಂಟಿಯಾಗಿ, ಭ್ರಮನಿರಸನ ಗೊಂಡು ನಿಧನನಾಗುತ್ತಾನೆ. ತಾನು ಅಷ್ಟೆಲ್ಲ ಮೆಚ್ಚಿ ಕೊಂಡಾಡಿದ್ದ ಜರ್ಮನಿ ಜಾಗತಿಕ ಯುದ್ಧದ ಘೋರನಾಶವನ್ನು ಜಗತ್ತಿಗೆ ತಂದ ಪರಿ ಅವನನ್ನು ಅತ್ಯಂತ ದುಃಖಿತ ವ್ಯಕ್ತಿಯನ್ನಾಗಿ ಮಾಡುತ್ತದೆ.

ಹಿಲ್ಲೇಲ್ ಜೆಟ್ಲಿನ್ ಯಿಡ್ಡಿಷ್ ಸಾಹಿತ್ಯದ ಇನ್ನೊಬ್ಬ ಹೆಸರಾಂತ ಲೇಖಕ. ಯೆಹೂದಿಗಳು ತಮ್ಮ ಧರ್ಮವನ್ನು ಬಿಟ್ಟರೆ ತಮ್ಮ ಅಸ್ತಿತ್ವವನ್ನೇ ಕಳೆದುಕೊಂಡಂತೆ ಎಂದು ಮೊಟ್ಟಮೊದಲು ಸಾರಿದ ಯಿಡ್ಡಿಷ್ ಸಾಹಿತಿ. ತನ್ನೆಲ್ಲಾ ಕೃತಿಗಳಲ್ಲಿ ದೃಢವಾದ ವಿಶ್ವಾಸದಿಂದ ಆತ ಅದನ್ನೇ ಸಾರುತ್ತಾನೆ. ಜೆಟ್ಲಿನ್ ಅವಧೂತನಂಥ ಲೇಖಕ. ಆಧ್ಯಾತ್ಮ ಕೃತಿ 'ಜೋಹರ್'ದ ಕೆಲವು ಭಾಗಗಳನ್ನು ಆತ ಅನುವಾದಿಸಿ ತನ್ನ ಭಾಷೆಗೆ ತರುತ್ತಾನೆ. ಇವನ ವಿಮರ್ಶೆ ಕೂಡ ತುಂಬ ಹರಿತವಾದುದು. ಸೋವಿಯತ್‌ಪರ ಯೆಹೂದೀ ಲೇಖಕರನ್ನು ಇವನು ತೀವ್ರವಾಗಿ ಟೀಕಿಸುತ್ತಾನೆ.

ಆಧುನಿಕ ಯಿಡ್ಡಿಷ್ ಕವಿಗಳಲ್ಲಿ ಪ್ರಾಯಶಃ ಸರ್ವಶ್ರೇಷ್ಠ ಎಂದು ವಿಮರ್ಶಕರು ಗುರುತಿಸುವ ಆರನ್ ಜೆಟ್ಲಿನ್, ಹಿಲ್ಲೇಲ್ ಜೆಟ್ಲಿನ್‌ನ ಮಗ. ಈತನೂ ತಂದೆ ಯಂತೆಯೇ ಮಿಸ್ಟಿಕ್ ಕವಿ.

ಶೋಲೆಮ್ ಆಷೆ ತನ್ನನ್ನು ಪೆರೇಟ್ಜ್‌ನ ಶಿಷ್ಯನೆಂದು ಕರೆದುಕೊಳ್ಳುತ್ತಾ ನಾದರೂ, ಇವನಲ್ಲಿ ಪೆರೇಟ್ಜ್‌ನ ವಿದ್ವತ್ತಾಗಲೀ, ಶಿಲ್ಪಪ್ರಜ್ಞೆಯಾಗಲೀ ಕಾಣುವು ದಿಲ್ಲ. ಬೃಹತ್ ಕಾದಂಬರಿಗಳನ್ನು ರಚಿಸಿರುವ ಶೋಲೆಮ್ ಆಶೆ, ಚಾರಿತ್ರಿಕ ವಸ್ತು ವನ್ನು ಕಾದಂಬರಿ ಮತ್ತು ನಾಟಕಗಳಿಗೆ ಬಳಸಿಕೊಂಡ ಮೊದಲ ಯಿಡ್ಡಿಷ್ ಲೇಖಕ. ಅಂಕಲ್ ಮೋಸೆಸ್ (1938) ಈತನ ಪ್ರಸಿದ್ಧ ಕೃತಿಗಳಲ್ಲಿ ಒಂದು. ನ್ಯೂಯಾರ್ಕಿ ನಲ್ಲಿರುವ ಯೆಹೂದೀ ವಲಸೆಕಾರರ ಜೀವನವನ್ನು ಈ ಕೃತಿ ಚಿತ್ರಿಸುತ್ತದೆ.

1933ರಲ್ಲಿ ಅಮೆರಿಕಾಕ್ಕೆ ವಲಸೆ ಬಂದು, ವಿಶ್ವಾದ್ಯಂತ ಸಾಕಷ್ಟು ಹೆಸರು ಮಾಡಿರುವ ಲೇಖಕ ಇಸ್ರೇಲ್ ಜೋಷುವಾ ಸಿಂಗರ್. ಈತನ ಪ್ರಸಿದ್ಧ ಕೃತಿಗಳು 'ದಿ ಬ್ರದರ್ಸ್ ಆಷ್ಕೆಂಜಿ' (1936), ಯೋಷೆ ಕಲ್ಬ್ (1932), ದಿ ಸಿನ್ನರ್ (1933), ದಿ ಫ್ಯಾಮಿಲಿ ಕಾರ್ನೊವಸ್ಕಿ (1969). 'ದಿ ಬ್ರದರ್ಸ್ ಆಷ್ಕೆಂಜಿ' ಔದ್ಯೋಗೀಕರಣಕ್ಕೆ ಒಳಗಾದ ನಗರವೊಂದರ ಬೆಳವಣಿಗೆಯೊಂದಿಗೆ ಆಷ್ಕೆಂಜಿ ಕುಟುಂಬದ ಏಳುಬೀಳುಗಳನ್ನು ತಳುಕು ಹಾಕಿ ರಚಿಸಿದ ಪ್ರೌಢಕೃತಿ. 'ದಿ ಫ್ಯಾಮಿಲಿ

ಕಾನೊರ್ವಸ್ಕಿ' ಕಾದಂಬರಿಯು ದ್ವಿತೀಯ ಜಾಗತಿಕ ಯುದ್ಧದ ಪರಿಣಾಮವಾಗಿ ಉಂಟಾದ ನಿರ್ವಾಸಿತರ ಸಮಸ್ಯೆಯನ್ನು ಚಿತ್ರಿಸುತ್ತದೆ. ಈತನ ಕೆಲವು ನಾಟಕಗಳು ಯಿಡ್ಡಿಷ್ ಭಾಷೆಯಲ್ಲೇ ಯುರೋಪ್ ಮತ್ತು ಸಂಯುಕ್ತ ಸಂಸ್ಥಾನದಲ್ಲಿ ಪ್ರಯೋಗ ಗೊಂಡು ಮೆಚ್ಚುಗೆ ಗಳಿಸಿವೆ. ಯೆಹೂದಿ ಲೇಖಕರಲ್ಲಿ ಸಾಮಾನ್ಯವಾಗಿ ಕಾಣುವ ಭಾವನಾತ್ಮಕತೆಯನ್ನು ಲವಲೇಶವೂ ತೋರಿಸದ ಪಕ್ಕಾ ವಾಸ್ತವವಾದೀ ಧೋರಣೆಯ ಲೇಖಕ ಇಸ್ರೇಲ್ ಜೋಷುವಾ ಸಿಂಗರ್.

1935 ರಿಂದ ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿ ನೆಲೆಸಿರುವ ಐಸಾಕ್ ಭಾಷೆವಿಷ್ ಸಿಂಗರ್, ಇಸ್ರೇಲ್ ಜೋಷುವಾ ಸಿಂಗರ್‌ನ ತಮ್ಮ. ಸೇಟನ್ ಇನ್ ಗೋರೆ (1955), ದ ಫ್ಯಾಮಿಲಿ ಮಸ್ಕಾತ್ (1950), ದಿ ಸ್ಲೇವ್ (1962) ಸಿಂಗರ್‌ನ ಸುವಿಖ್ಯಾತ ಕೃತಿಗಳು. ಅನೇಕ ಮಕ್ಕಳ ಕತೆಗಳನ್ನೂ ಒಳಗೊಂಡಂತೆ ಬಹಳಷ್ಟು ಸಣ್ಣ ಕತೆಗಳನ್ನೂ* ಸಿಂಗರ್ ರಚಿಸಿದ್ದಾನೆ. 1978ರಲ್ಲಿ ನೊಬೆಲ್ ಪ್ರಶಸ್ತಿ ಕೂಡ ಬಾಷೆ ವಿಷ್ ಸಿಂಗರ್‌ಗೆ ದೊರೆತಿದೆ. ಸಂಯುಕ್ತ ಸಂಸ್ಥಾನದಲ್ಲಿ ಸೃಷ್ಟಿಯಾಗು ತ್ತಿರುವ ಯಿಡ್ಡಿಷ್ ಕಾವ್ಯವಂತೂ ಸಾಕಷ್ಟು ಸಮೃದ್ಧವಾಗಿದೆ. ಮೋರಿಸ್ ರೊಸೆನ್ ಫೀಲ್ಡ್, ಎಚ್. ಲೀವಿಕ್, ಮೋಷೆ ಲೀಬ್ ಹಾಲ್ಪರ್ನ್, ಮೋಷೆ ನಾದಿರ್, ಎ. ಲುಜುಸ್ಕಿ ಹೆಸರಿಸಬಹುದಾದ ಕೆಲವರು.

ರೊಮೇನಿಯಾ, ಫ್ರಾನ್ಸ್, ಅರ್ಜಂಟೀನಾ ಮೊದಲಾದ ದೇಶಗಳಲ್ಲೂ ಯಿಡ್ಡಿಷ್ ಸಾಹಿತ್ಯ ರಚನೆ ಆಗುತ್ತಿದೆ. ಭಾರತದಲ್ಲೂ ಕೂಡ ಯೆಹೂದಿ ಮೂಲದ ಲೇಖಕರಿದ್ದಾರೆ. ನಿಜ್ಸಿಂ ಇಜ್ಸಕಿಲ್ ಅವರಲ್ಲಿ ಒಬ್ಬರು.

ಯಿಡ್ಡಿಷ್, ಹೀಬ್ರೂ ಭಾಷೆಗಳಲ್ಲಿ ರಚಿತವಾಗುತ್ತಿರುವುದು ಮಾತ್ರ ಯೆಹೂದೀ ಸಾಹಿತ್ಯ ಎನ್ನುವಂತಿಲ್ಲ. ಸಾಲ್‌ಬೆಲೊ, ಬರ್ನಾರ್ಡ್ ಮಾಲಮುಡ್ ಅಮೇರಿಕಾ ದಲ್ಲಿದ್ದು, ಇಂಗ್ಲಿಷ್ ಭಾಷೆಯಲ್ಲಿ ಬರೆಯುತ್ತಿರುವ ಯೆಹೂದೀ ಲೇಖಕರಾಗಿದ್ದಾರೆ. ಫ್ರಾಂಜ್ ಕಾಫ್ಕ ಕೂಡ ಯೆಹೂದೀ ಮೂಲದ ಲೇಖಕನೇ. ರಷಿಯಾದ ಐಸಾಕ್ ಬಬೆಲ್, ಓಸಿಫ್ ಮಂಡೆಲ್‌ಸ್ತಂ, ಇಲ್ಯಾ ಹೆರ್ನ್‌ಬರ್ಗ್ ಯೆಹೂದೀ ಲೇಖಕರು. ಕೆನಡಾ, ಇಂಗ್ಲೆಂಡ್, ಸೌತ್ ಆಫ್ರಿಕಾ, ಫ್ರಾನ್ಸ್, ಜರ್ಮನಿ, ಆಸ್ಟ್ರೇಲಿಯಾದಲ್ಲಿ ಕೂಡಾ ಆಯಾ ದೇಶ ಭಾಷೆಗಳಲ್ಲಿ ಬರೆಯುವ ಪ್ರಸಿದ್ಧ ಯೆಹೂದೀ ಲೇಖಕರಿದ್ದಾರೆ.

ಯಿಡ್ಡಿಷ್ ಮತ್ತು ಹೀಬ್ರೂ ಅಲ್ಲದೆ, ಬೇರೆ ಭಾಷೆಗಳಲ್ಲಿ ಬರೆಯುವ ಯೆಹೂದೀ ಲೇಖಕರ ಸಾಹಿತ್ಯದಲ್ಲಿ ಸಾಮಾನ್ಯ ಅಂಶವೆಂದರೆ—ಆ ಎಲ್ಲ ಸಾಹಿತ್ಯ ದಲ್ಲೂ ಕಾಣುವ ತ್ರಿಶಂಕು ಸ್ಥಿತಿ, ಮೊಟಕಾದ ಸಾಂಸ್ಕೃತಿಕ ಬೇರುಗಳು. ನಿರ್ವಾಸಿತತನ ಸಾಹಿತ್ಯ ಸೃಷ್ಟಿಗೆ ಫಲವತ್ತಾದ ಭೂಮಿಕೆಯೇನೂ ಅಲ್ಲ. ಬೇರೆ ಭಾಷೆಯಲ್ಲಿ

---

* ಈಚೆಗೆ ಸಿಂಗರ್‌ನ ಕೆಲವು ಸಣ್ಣ ಕತೆಗಳನ್ನು ನರಹಳ್ಳಿ ಬಾಲಸುಬ್ರಹ್ಮಣ್ಯ ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದ್ದಾರೆ.

ಬರೆಯುವ ಹೊಸ ಪೀಳಿಗೆಯ ಯೆಹೂದೀ ಲೇಖಕರು ಮಹತ್ವದ್ದನ್ನು ಸೃಷ್ಟಿಸಲು ಹೊಸ ನೆಲೆಯಲ್ಲಿ ಅವರಿನ್ನೂ ಬೇರುಬಿಡುವ ಆಗತ್ಯವಿದೆ. ಸಿಂಗರ್ ಸೋದರರಂತೆ ಸಮೃದ್ಧ ನೆನಪುಗಳೊಂದಿಗೆ ಬದುಕಿನ ಪಕ್ವ ಕಾಲದಲ್ಲಿ ಹೊರದೇಶಕ್ಕೆ ಬಂದು ನೆಲೆಸಿದವರು ಇಂದಿಗೂ ಶ್ರೇಷ್ಠ ಲೇಖಕರೇ. ವಲಸೆಗಾರರ ಮಕ್ಕಳಾಗಿ ಹುಟ್ಟಿ ಲೇಖನ ವ್ಯವಸಾಯ ಶುರುಮಾಡಿದ ಯೆಹೂದೀ ಮೂಲದ ಲೇಖಕರು ಮಹತ್ವದ್ದನ್ನು ಸೃಷ್ಟಿಸಲು ಕಾಲವಿನ್ನೂ ಪಕ್ವಗೊಂಡಿಲ್ಲ ಎನ್ನಬಹುದು.

**ಆಧಾರ :**

**ಎನ್‌ಸೈಕ್ಲೊಪೀಡಿಯಾ ಬ್ರಿಟಾನಿಕ.**

# ಅವನು-ಅವಳು

ಅನು : ಜಿ. ಎಸ್. ಶಿವರುದ್ರಪ್ಪ

ನಮ್ಮೀ ತೋಟದ ಬೇಲಿಯುದಾಟುತ
ನಡೆದರೆ ಎರಡೇ ಮಾರು
ಆಳದೊಳೆಲ್ಲೋ ಬಾವಿಯು ಪಾತ್ರದ
ಒಳಗಡೆ ಮಲಗಿದೆ ನೀರು.

ವಾರವಾರಕ್ಕೂ ತಪ್ಪದೆ ಬರುತಾನೆ
ನನ್ನ ಮೆಚ್ಚಿನ ಹುಡುಗ ಮನೆಗೆ
ಈ ಬಾವಿ ನೀರೆಂದರವನಿಗೆಷ್ಟಿಷ್ಟವೊ
ಮರುಳಾಗೊಂಡಿದ್ದಾನೆ ರುಚಿಗೆ.

ಕೊಂಬೆಯ ಮಡಿಲಲ್ಲಿ ಮಲಗಿದ ಹಣ್ಣಂತೆ
ನಿದ್ದೆಯೊಳದ್ದಿದೆ ಲೋಕ
ಈಗ ನಾನೊಬ್ಬಳೆ ; ಮನೆಯೊಳ್ಯಾರೂ ಇಲ್ಲ.
ಎಚ್ಚತ್ತು ಕಾದಿದೆ ಹೃದಯ.

ಬೆಳ್ಳಿ ಬಂಗಾರದ ತಿಳಿನೀರು ತುಳುಕುವ
ಪಾತ್ರೆಯ ಜತೆಯಲ್ಲಿ ನಾನು
ಕಾಯುತ್ತಾ ಇದ್ದೇನೆ ನನ್ನ ನಲ್ಲನಿಗಾಗಿ ;
ಅದೊ, ಅಲ್ಲಿ ಬರುವವನ್ಯಾರು ?

*"Songs of the People"

ಹಬ್ಬಿದ ಮೆಬ್ಬಿನ ಮಧ್ಯೆ ಏನದು ಸದ್ದು ?
ಕೇವಲ ಹಕ್ಕಿಯ ದನಿಯೆ ?
ಬಾ ನನ್ನ ಗೆಣೆಕಾರ, ಇಲ್ಲಿ ಯಾರೂ ಇಲ್ಲ
ದೂರ ನಿಲ್ಲುವುದಿನ್ನು ಸರಿಯೆ ?

ತೋಟ್ಟಿಯ ಪಕ್ಕದೊಳಿಬ್ಬರೆ ಕೂತೆವು
ಗಲ್ಲಗಲ್ಲಕೆ ಹಚ್ಚಿ ಕೈಯ್ಯ ಹೆಣೆದು.
'ಬಿಂದಿಗೆಗೇತಕೆ ಬಾವಿ ನೀರಿನ ಬಯಕೆ ?'
ಈ ಒಗಟಿನರ್ಥವ ಬಿಡಿಸು

ನಾ ಬಲ್ಲೆ; ನೀನಿದಕುತ್ತರ ಕೊಡಲಾರೆ,
ಪಾತ್ರೆ ಅಳುವುದು ಯಾಕೆ ಗೊತ್ತೆ ?
ಬೆಳಗೂ ಬೈಗೂ ತಟತಟ ಕಣ್ಣೀರು
ನೀನು ನಿಲ್ಲಿಸಲಾರೆ ಮತ್ತೆ.

ಹೇಳು ಹಾಗಾದರೆ ಹಗಲು-ಇರುಳೂ ನನಗೆ
ತಳಮಳವೇತಕೆ ಹೀಗೆ ?
ನನ್ನ ತಾಯಿಗು ಗೊತ್ತು; 'ನಿನ್ನ ಮನಸ್ಸೆಲ್ಲ
ನನ್ನಿಂದಾಚೆಗೆ ಹೊರಗೇ'.

ನನ್ನ ನಂಬಿಸುವಂತೆ ಹತ್ತಿರ ಹಿಡಿದೊತ್ತಿ
ನಂಬುಗೆಗೊಟ್ಟನು ಹೀಗೆ :
"ಆಗದ ಮಂದಿಯ ಚಾಡಿಯಮಾತಿಗೆ
ನೀನು ಕಿವಿಗೊಟ್ಟರೆ ಹೇಗೆ ?

ಏನಾದರಾಗಲಿ, ಮುಂದಿನ ವರ್ಷವೆ
ನನಗೂ ನಿನಗೂ ಮದುವೆ
ಇಲ್ಲದ ಸಲ್ಲದ ಯೋಚನೆ ಮಾಡುತ
ಶಂಕಿಸಬೇಡನ್ನ ಒಲವೆ.

ನಮ್ಮ ಮದುವೆಯ ದಿವಸ ನಂಟರ ಇಷ್ಟರ
ಎಳೆಯರ ಹಳೆಯರ ಬೆಸುಗೆ
ಹಾಡುತ್ತ ಕುಣಿಯುತ್ತ ಸಂಭ್ರಮಗೊಳ್ಳಲಿ
ನಡಸುತ್ತ ನಮ್ಮನು ಜೊತೆಗೆ.

ಅಂದಿನ ಚೆನ್ನದ ದಿನದ ಮೇಲಾಡಲಿ
ಹೊಳೆವ ವಸಂತದ ಬಿಸಿಲು,
ಹೂ ಹಣ್ಣು ತೂಗುವ ಮರದ ಕೊಂಬೆಗಳಿಂದ
ಹರಡಲಿ ಹರಕೆಯ ನೆರಳು.

ನಾಚಿ ತಲೆ ಬಾಗಿದ ಮದುವಣಗಿತ್ತಿಯ
ಮುಸುಕನ್ನು ಮೆಲ್ಲನೆ ತೆಗೆವೆ
ನಾನೀಗ ಹಿಡಿದಿರುವ ಈ ಕೈಯಬೆರಳಿಗೆ
ಬಂಗಾರದುಂಗುರ ಇಡುವೆ.

ಸಾರಿಹೇಳುತ್ತೇನೆ : ದೇವರು ನಿನ್ನನ್ನು
ಮೀಸಲಿಟ್ಟಿದ್ದಾನೆ ನನಗೇ.
ತಂತಮ್ಮ ಹೊಟ್ಟೆಯ ಕಿಚ್ಚಲ್ಲಿ ಬೇಯಲಿ
ನಮಗಾಗದ ಮಂದಿ ಕೊನೆಗೆ."

# ಒಂದು ಹಳೆಯ ಹಾಡು

ಯಿಡ್ಡಿಷ್ ಮೂಲ : ಯೆಹೋಆಷಾ (1870)
ಅನು : ರಾಮಚಂದ್ರಶರ್ಮ

ಹೂವು ಚೆಲ್ಲುವ ನಾಡು
ಜಪಾನಿನಲ್ಲೆಲ್ಲೋ ಹೀಗೊಂದು ಹಾಡು.

ಯೋಧ ಬಂದು ಕಮ್ಮಾರನಿಗೆ ಹೇಳಿದ :
'ನನಗೊಂದು ಕತ್ತಿ ಮಾಡಿಕೊಡು,
ತಡ ಮಾಡ ಬೇಡ.
ನೀರ ಹಾಸಿಗೆಯ ಮೇಲೆ
ಮಲಗಿರುವ ಗಾಳಿಯ ಹಾಗೆ ಹಗುರಾಗಿರಲಿ
ಅದರ ಅಲಗು.
ಸುಗ್ಗಿ ಹಬ್ಬಕ್ಕೆ ಹಾಡು ಹಬ್ಬುವ ಮೊದಲೆ
ನಿಡಿದಾದ ತೆನೆಭತ್ತದಂತಿರಲಿ,
ಒಡಕಿರದ ಒಡಲ ಹಾವಂತೆ ಅದಕ್ಕಿರಲಿ
ಬಳಕು ಚುರುಕು.
ಅದರ ಮೈಯುದ್ದ ಹರಿಯುತ್ತಿರಲಿ
ಸಾವಿರ ಕಣ್ಣ ಮಿಂಚ ಚಳಕು.
ರೇಶ್ಮೆಯ ಹಾಗೆ ನಯವಾಗಿದ್ದು ಜೇಡ
ನೇಯುವ ಬಲೆಯಷ್ಟು ತೆಳ್ಳಗಿರಲಿ.
ಆದರೂ, ಕರುಣೆ ಕಾಣದ ನೋವಂತೆ
ತಣ್ಣಗಿರಲಿ.

‘ಕತ್ತಿಯ ಹಿಡಿ ?
ಅದರಲ್ಲಿ ಏನಿರಲಿ, ಹೇಳಿ.’

‘ಹಿಡಿಯೊಳಗೆ, ಮಿತ್ರ,
ಬಿಡಿಸುವೆಯಂತೆ
ಹರಿವ ನೀರಿರುವ ಸರೋವರ,
ಒಂದು ಕುರಿಮಂದೆ,
ಜೊತೆಗೆ, ಕಂದನಿಗೆ ಜೋಗುಳ ಹಾಡಿ
ಮಲಗಿಸುವ ತಾಯ ಚಿತ್ರ.’

[ನಾತ್ಸಿ ಅನುಭವದಿಂದಾಗಿ ಸಹ-ಯೆಹೂದಿಗಳ ನೋವು, ಯಾತನೆಗಳನ್ನು ಸೂಕ್ಷ್ಮವಾಗಿ ಅನುಭವಿಸಿ ಕವಿಯಿತ್ರಿಯಾದವಳು ನೆಲ್ಲಿ ಲಿಯೋನಿ ಸ್ಯಾಕ್ಸ್. ಹುಟ್ಟಿದ್ದು 1891ರಲ್ಲಿ, ಬರ್ಲಿನ್‌ನಲ್ಲಿ. ತಂದೆ ಕಾರ್ಖಾನೆಯೊಂದರ ಶ್ರೀಮಂತ ಮಾಲಿಕ. 17ನೆಯ ವಯಸ್ಸಿನಲ್ಲಿ ತೀರ ರಮ್ಯವಾದ, ಪಾರಂಪರಿಕ ಶೈಲಿಯ ಕವನಗಳ ರಚನೆ. 1920ರ ದಶಕದ ಕವನಗಳು ಕೆಲವು ಪತ್ರಿಕೆಗಳಲ್ಲಿ ಪ್ರಕಟವಾದರೂ ಅವಳಿಗೇ ತೃಪ್ತಿ ಕೊಟ್ಟಿರಲಿಲ್ಲ. 1940ರ ಹೊತ್ತಿಗೆ ನಾತ್ಸಿಗಳು ತನ್ನನ್ನು ಯೆಹೂದಿಗಳ ಕೂಡುದೊಡ್ಡಿಗೆ ದೂಡಲಿದ್ದಾರೆಂದು ತಿಳಿದಾಗ ಸ್ಯಾಕ್ಸ್, ಸ್ವೀಡಿಷ್ ಲೇಖಕಿ ಹಾಗೂ ನೋಬೆಲ್ ಪ್ರಶಸ್ತಿ ವಿಜೇತೆ ಸೆಲ್ಮಾ ಲಾಗರಾಲಾಫ್‌ಳ ಸಹಾಯದಿಂದ ಸ್ವೀಡನ್ನಿಗೆ ಸ್ಥಳಾಂತರಗೊಂಡಳು. ಅನಂತರದ ಕಾವ್ಯ ಮಾನವ ಕ್ರೌರ್ಯದ ನೇರ, ಸರಳ ಆದರೆ ಧ್ವನಿಪೂರ್ಣ ಅಭಿವ್ಯಕ್ತಿಗೆ ಮೀಸಲಾಯಿತು. "ಓ ದಿ ಚಿಮ್ನೀಸ್" ಮುಖ್ಯ ಸಂಕಲನ. "ಎಲಿ : ಎ ಮಿಸ್ಟರಿ ಪ್ಲೇ ಆಫ್ ದಿ ಸಫರಿಂಗ್ಸ್ ಆಫ್ ಇಸ್ರೇಲ್" (1951) ಪ್ರಸಿದ್ಧ ನಾಟಕ. ತನ್ನ 75ನೆಯ ವಯಸ್ಸಿನಲ್ಲಿ ನೋಬೆಲ್ ಪ್ರಶಸ್ತಿ (1966) ಪಡೆದ ಸಾಕ್ಸ್ 1965ರ ಜರ್ಮನ್ ಪ್ರಕಾಶಕರ ಶಾಂತಿ ಪುರಸ್ಕಾರವನ್ನೂ ಗಳಿಸಿದ್ದಳು. ನಿಧನ 1970ರಲ್ಲಿ, ಸ್ಟಾಕ್‌ಹೋಮ್‌ನಲ್ಲಿ.]

# ದೂರ ನೀಲಿಮೆಯಲ್ಲಿ*

ನೆಲ್ಲಿ ಲಿಯೋನಿ ಸ್ಯಾಕ್ಸ್
ಅನು : ಗೋಪಾಲಕೃಷ್ಣ ಅಡಿಗ

ದೂರ ನೀಲಿಮೆಯಲ್ಲಿ
ಕೆಂಪು ಸೇಬಿನ ರಸ್ತೆ ಅಂಕುಡೊಂಕಾಗುತ್ತ
ಬೇರುಗಳ ಕಾಲಿಂದ ಆಕಾಶವನ್ನೆಲ್ಲ ಅಳೆಯುವಲ್ಲಿ
ಹಂಬಲವೆ ಭಟ್ಟಿಯಿಳಿದಿದೆ
ಕಣಿವೆಯಲ್ಲಿರುವ ಎಲ್ಲರಿಗಾಗಿ.

ಅಂಚಿನಲ್ಲಿ ಮಲಗಿರುವ ಸೂರ್ಯ
ಮಂತ್ರದಂಡಗಳಿಂದ
ತಡೆಯುತ್ತಿದ್ದಾನೆ ನಿಲ್ಲುವಂತೆ ಪಯಣಿಗರನ್ನು.

ನಿಲ್ಲುತ್ತಾರೆ ಅವರು
ಗಾಜುಗಾಜಾದ ದುಃಸ್ವಪ್ನದಲ್ಲಿ,

* 'ಕಾವ್ಯ ಜಗತ್ತು' ಕೃತಿಯಿಂದ

ಆಗ ಸೂರ್ಯನ ಕುದುರೆ
ನಯವಾಗಿ ಕರೆಯುತ್ತೆ
ಅವ್ಯಕ್ತವನ್ನು.

ಮತ್ತೆ ಕಲ್ಲು ಧೂಳಾಗಿ ಮಾರ್ಪಡುತ್ತದೆ
ಸಂಗೀತಕ್ಕೆ ಕುಣಿಯುತ್ತ.

## ಬಹುದೂರದಿಂದೊಬ್ಬ ಬರಬಹುದು*

ಬಹುದೂರದಿಂದೊಬ್ಬ
ಬರಬಹುದು
ಅವನ ಭಾಷೆ
ತನ್ನ ದನಿಯನ್ನು ಬಹುಶಃ
ಕುದುರೆ ಕೆನೆತದಲ್ಲಿ
ಅಡಗಿಸಿಡಬಹುದು
ಅಥವಾ
ಎಳೆಯ ಹಾಡುಹಕ್ಕಿಗಳ
ಚಿಲಿಪಿಲಿಯಲ್ಲಿ
ಅಥವಾ
ಎಲ್ಲ ನಿಕಟತೆಯನ್ನೂ ಚೂರುಚೂರಾಗಿ ಸೀಳುವ
ಚೀರಾಟದಲ್ಲಿ—

ಬಹುದೂರದಿಂದೊಬ್ಬ
ಬರಬಹುದು
ನಾಲಗೆಯ ಹಾಗೆ ಚಲಿಸುತ್ತ
ಅಥವಾ
ಇಲಿಯ ಹಾಗೆ, ಬಹುಶಃ
ಈಗ ಚಳಿಗಾಲ ಅವನಿಗೆ
ಬೆಚ್ಚಗೆ ಬಟ್ಟೆ ತೊಡಿಸು

ಅಥವಾ
ಅವನ ಅಂಗಾಲುಗಳಲ್ಲಿ
ಬೆಂಕಿಯುಂಟೇನೊ,
(ಬಹುಶಃ ಅವನು ಉಲ್ಕೆಯ
ಮೇಲೇರಿ ಬಂದಿರಬಹುದು)
ಆಗ ನೆನಪಿರಲಿ
ಗೊಣಗದಿರು
ಹಾಸುಗಂಬಳಿ ತೂತುತೂತಾದರೆ ಮತ್ತು ಕಿರಿಚಿಕೊಂಡರೆ—

ಅಪರಿಚಿತ ಸದಾ ತನ್ನ ತೋಳುಗಳಲ್ಲಿ
ಅಪ್ಪಿಕೊಂಡಿರುತ್ತಾನೆ ತಾಯ್ನಾಡನು ;
ಬಹುಶಃ ಅದಕ್ಕವನು ಹುಡುಕುತ್ತಿರುವುದು
ಗೋರಿಗಿಂತ ಮಿಗಿಲಾದ ಜಾಗವಿರಲಾರದು.

---

*'ಕಾವ್ಯ ಜಗತ್ತು' ಕೃತಿಯಿಂದ.

# ಒಸಿಪ್ ಮಂಡೆಲ್‌ಸ್ಟಾಂ ಕವಿತೆಗಳು

ಅನು : ಎಚ್. ಎಸ್. ಶಿವಪ್ರಕಾಶ್

[ಈ ಶತಮಾನದ ರಷ್ಯನ್ ಕವಿಗಳಲ್ಲಿ ಅಗ್ರಗಣ್ಯ. ರಷ್ಯನ್ ಆಕ್ಮೇಯಿಸ್ಟ್ ಪಂಥದ ಕವಿಯಾಗಿ ಕಾವ್ಯರಚನೆಗೆ ತೊಡಗಿ, ಸ್ಟಾಲಿನ್ ಯುಗದಲ್ಲಿ ಸರ್ಕಾರದ ಕೋಪಕ್ಕೆ ಗುರಿಯಾದವನು. ಸೈಬೀರಿಯಾದ ಲೇಬರ್‌ಕ್ಯಾಂಪಿಗೆ ಹೋಗುವಾಗ ಪ್ರಾಣ ನೀಗಿದ. ಆಮೇಲೆ ಸುಮಾರು ನಾಲ್ಕು ದಶಕಗಳ ಕಾಲ ಈತನ ಕಾವ್ಯ ರಷ್ಯಾದಲ್ಲಿ ಪ್ರಕಟಗೊಳ್ಳಲಿಲ್ಲ. ಕಾವ್ಯದ ಸ್ವಾತಂತ್ರ್ಯಕ್ಕಾಗಿ ಆತ್ಮಾರ್ಪಣೆ ಮಾಡಿಕೊಂಡ ಮಂಡೆಲ್‌ಸ್ಟಾಂನ ಪ್ರಕಾರ ಜನರಿಗೆ ಕಾವ್ಯ ಅನ್ನದಷ್ಟೇ ಮುಖ್ಯ.]

## 1. ಇದು ಯಾವ ಬೀದಿ ?

— ಇದು ಯಾವ ಬೀದಿ ?
— ಮಂದೆಲ್‌ಸ್ತಾಂ ಬೀದಿ.
— ಅದೆಂಥಾ ದರಿದ್ರ ಹೆಸರು ?
ಎತ್ತಕಡೆಯಿಂದ ಉಚ್ಚರಿಸಿದರೂ
ವಕ್ರ ಅನಿಸುತ್ತೆ.

— ಅವನೇನೂ ಶುದ್ಧನಲ್ಲ,
ಅಲಿ ಹೂವಿನ ಹಾಗೆ.
ಅದಕ್ಕಾಗೇ ಈ ಬೀದಿಗೆ
(ಕ್ಷಮಿಸಿ, ಬೀದಿಯಲ್ಲ, ಈ ಚರಂಡಿಗೆ)
ಹೆಸರಿಟ್ಟಿದ್ದಾರೆ :
ಮಂದೆಲ್‌ಸ್ತಾಂ.

## 2. ನನ್ನ ಸಾಗರಗಳು, ನನ್ನ ಆಕಾಶಗಳು

ನನ್ನ ಸಾಗರಗಳನ್ನು, ನನ್ನ ಆಕಾಶಗಳನ್ನು ನೀನು ಕಿತ್ತುಕೊಂಡೆ,
ಬೂಟಿನಗಲದ ಭೂಮಿ ಸುತ್ತ ಕಂಬಿಗಳನ್ನು ನನಗೆ ಕೊಟ್ಟೆ,
ಇದರಿಂದ ಏನು ಸಿಕ್ಕಿತು ನಿನಗೆ ? ಏನೂ ಇಲ್ಲ.
ಮೌನದೊಳಗೂ ಮಾತು ಹೊರಡಿಸುವ ತುಟಿಗಳನ್ನು ನನಗೆ ಬಿಟ್ಟೆ.

## 3. ತಲೆಬುರುಡೆ ರಾಶಿಗಳು

ತಲೆ ಬುರುಡೆ ರಾಶಿಗಳು ಕರಗುತ್ತಿವೆ ದೂರದಲ್ಲಿ.
ನಾನೂ ಕರಗುತ್ತಿದ್ದೇನೆ ಅವುಗಳಲ್ಲಿ. ಆದರೆ ಪುಸ್ತಕಗಳಲ್ಲಿ
ಮಕ್ಕಳಾಡುವ ಆಟಗಳಲ್ಲಿ ಮೃತ್ಯುವಿನಿಂದ ಮೇಲೆದ್ದು
ಹೇಳುತ್ತೇನೆ : ಸೂರ್ಯ ಹೊಳೆಯುತ್ತಾನೆ.

## 4. ಹಾಲು ಬಿಸಿಲು ಕುದುರೆ

ಈ ಪತ್ರಗಳ ಧೂಳು ತುಂಬಿದ ಭರವಸೆಗಳನ್ನು
ಈ ಹಸಿರನ್ನು ತುಟಿಗಿಟ್ಟುಕೊಳ್ಳುತ್ತೇನೆ.
ಅದೇ ರೀತಿ ಇಬ್ಬನಿಯು, ಎಲ್ಲ ಮರಗಳ ತಾಯಿ
ಈ ನೆಲವನ್ನು.

ನೋಡಿ : ಕುರುಡಾದರೂ ಗಟ್ಟಿಯಾಗಿದ್ದೇನೆ
ಅಂಚಿಕಡ್ಡಿ ಬೇರುಗಳಿಗೂ ನನ್ನ ಒಡ್ಡಿಕೊಂಡಿದ್ದೇನೆ.
ಬಿರಿದುಕೊಳ್ಳುವ ಮರಗಳನ್ನು ಕಂಡಾಗ
ಚಿಂದಿಯಾದವು ನನ್ನ ಕಣ್ಣುಗಳು.

ತಮ್ಮ ದನಿ ಚಾಪೆಯೊಳಗಡೆ ಸುತ್ತಿಕೊಂಡಿರುವ ಕಪ್ಪೆಗಳು
ಪಾದರಸ ಬಿಂದುಗಳು, ಕಿಕ್ಕಿರಿದ ಚಂಡುಗಳು,
ಈಗ ಕೊಂಬೆಗಳಾಗಿ ರೆಂಬೆ ಬದಲಾಗಿವೆ.
ಬಂಜೆ ನೆಲವೆಲ್ಲ ಹಾಲು ಬಿಸಿಲು ಕುದುರೆ.

# 5. ಲೆನಿನ್‌ಗ್ರಾಡ್*

ನನ್ನ ನಗರಕ್ಕೆ ವಾಪಸ್ಸು ಬಂದಿದ್ದೇನೆ. ಇಲ್ಲಿವೆ ನನ್ನ ಹಳೇ ಕಂಬನಿಗಳು,
ನನ್ನ ಪುಟ್ಟ ಧಮನಿಗಳು, ಚಿಕ್ಕಂದಿನ ಗ್ರಂಥಿಗಳ ಊತ.

ವಾಪಸಾಗಿದ್ದೀಯ ತೆರೆದುಕೊ, ಕುಡಿದುಕೊ
ಲೆನಿನ್‌ಗ್ರಾಡ್ ನದಿದೀಪಗಳ ಮೀನೆಣ್ಣೆಯನ್ನು.

ಕಣ್ಣುತೆರೆ, ಗೊತ್ತೇನು ಈ ಡಿಸೆಂಬರ್ ದಿವಸ
ಕಪ್ಪು ಟಾರು ತುಂಬಿದ್ದ ಮೊಟ್ಟೆಲೋಳೆ.

ಪೀಟರ್ಸ್‌ಬರ್ಗ್ ! ನಾನಿನ್ನೂ ಸಾಯಲಾರೆ !
ನನ್ನ ಟೆಲಿಫೋನು ಸಂಖ್ಯೆಗಳೆಲ್ಲಾ ನಿನಗೆ ಗೊತ್ತು.

ಪೀಟರ್ಸ್‌ಬರ್ಗ್ ! ಅಡ್ರೆಸ್ಸುಗಳೆಲ್ಲ ನನ್ನ ಬಳಿ ಇನ್ನೂ ಇವೆ :
ಸತ್ತದನಿಗಳನ್ನು ಹೋಗಿ ಕಾಣಬಲ್ಲೆ.

ಗಂಟೆಗಳು ನರನರವ ಕಿತ್ತು ಗೊಣಗುಟ್ಟುವಾಗ
ಮಹಡಿಗಳ ಹಿಂದುಗಡೆ ಬಾಳಬಲ್ಲೆ.

ಮುಂಜಾನೆ ಚಿಲಕಗಳ ಕಟಕಟ ಮಾಡಿ
ಪ್ರೀತಿಯ ಅತಿಥಿ ಬರುವವರೆಗೂ ಕಾಯಬಲ್ಲೆ.

---

* ರಷ್ಯನ್ ಕ್ರಾಂತಿಯ ಬಳಿಕ 'ಸೆಂಟ್ ಪೀಟರ್ಸ್‌ಬರ್ಗ್'ಅನ್ನು 'ಲೆನಿನ್‌ಗ್ರಾದ್' ಎಂದು ಕರೆಯಲಾಯಿತು. ಇತ್ತೀಚೆಗೆ ಅದೇ ನಗರಕ್ಕೆ ಮತ್ತೆ 'ಸೆಂಟ್ ಪೀಟರ್ಸ್‌ಬರ್ಗ್' ಎಂಬ ಹೆಸರ ಕೊಡಲಾಗಿದೆ.

## ಆ್ಯರ್ಲಿನ್ ಜೈಡ್ ಕವಿತೆಗಳು

ಅನು : ಎಚ್. ಎಸ್. ಶಿವಪ್ರಕಾಶ್

[ಅಮೆರಿಕಾದ ಸಮಕಾಲೀನ ಕವಯಿತ್ರಿ. ಇಂಗ್ಲಿಷ್ ಸಾಹಿತ್ಯದಲ್ಲಿ ವಿಶೇಷ ಅಧ್ಯಯನ. ಜೊತೆಗೆ ಹಿಂದಿ ಭಾಷೆ, ಸಾಹಿತ್ಯಗಳ ಅಧ್ಯಯನ ಮಾಡಿ ಆಧುನಿಕ ಹಿಂದಿ ಕಾವ್ಯವನ್ನು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಈಗ 'ಪೆಂಗ್ವಿನ್ ಇಂಡಿಯಾ'ಗೋಸ್ಕರ ಇಂದಿನ ಭಾರತೀಯ ಮಹಿಳಾ ಕಾವ್ಯಸಂಕಲನವನ್ನು ಸಂಪಾದಿಸುತ್ತಿದ್ದಾರೆ.]

### 1. ಕಾಳಿ ಕೃಷ್ಣನಿಗೆ ಹೀಗೆಂದಳು

'ನಾವಿಬ್ಬರೂ ನಕಲಿ :
ಬೆಳ್ಳಿಯೊಳಗೆ ಬಿಚ್ಚಿದ್ದ ಕಹಿ
ಸೀಸದ ರುಚಿ
ಸಿಕ್ಕಲಿಲ್ಲವಾ ನಿನಗೆ ?

ಅಥವಾ
ನಾನು ಕುರುಡಳಾಗಿದ್ದೆನಾ
ಅತಿ ಹೊಳಪಿಂದ ನಮ್ಮನ್ನು ಸೆಳೆಯುವ
ಮೂರ್ಖನ ಹೊನ್ನಿಗೆ ?

ಕೃಷ್ಣಾ, ನೀನು ಕಪ್ಪು ಚಿನ್ನದ ಥರ ;
ನಾನೂ ನಿನ್ನ ಮುಸ್ಸಂಜೆ ಬಿಸಿಯಲ್ಲಿ
ದಾಹ ಕಳೆದು ಕೊಂಡಿದ್ದರೂ,
ನಿನಗೆ ಹಾಲುತರುವ ಹುಡುಗಿ ಮಾತ್ರ
ನಾನಲ್ಲ.

ರಾಧೆಯ ದೇಶಾವರೀ ನಾಚಿಕೆಯನ್ನು
ಉತ್ತಮ ಕುಲದವರು
ಮುಗುಳ್ನಕ್ಕು ತೋರಿಸಲೂ ಆಗುವುದಿಲ್ಲ.
ನಿನಗೆ ಕಾಣಿಸಲೇ ಇಲ್ಲ.

ನನ್ನ ಕೊರಳಿನ ಸುತ್ತ ಬುರುಡೆಗಳ ಸರ.
ನನ್ನ ಕುಡಿಗೋಲನ್ನು ನೀನು ಸೋಕಲೇ ಇಲ್ಲ.
ನನ್ನ ಕೈಕೊಳ್ಳಿಯನ್ನು ನೀನು ಬೇಡಲೇ ಇಲ್ಲ.

ಅವಳು ಹೇಳುತ್ತಾಳೆ :
ಕಥೆ ಪುರಾಣ ಏನೇ ಹೇಳಲಿ,
ಶಿವನೊಬ್ಬನೇ ಕಾಳಿಯಲ್ಲಿ ಅನುರಕ್ತ
—ಈ ಮಾತಲ್ಲಿ ಹುರುಳಿಲ್ಲ.

## 2. ಪುಣ್ಯ

ಬೆಟ್ಟದ ಚಾಮುಂಡಿಗೆ ಗಮಗಮಾ ಹಳದಿ ಹೂ
ಅರ್ಪಿಸುತ್ತಾರೆ.   ಹಾಗೆ
ಇತ್ತ ಕಾಳವ್ವನಿಗೆ ಗುಲಾಬಿಯ ಗುಚ್ಛ
ಚಂದನದ ಹೊಗೆ.

ಒಳಿತು ಕೆಡಕುಗಳನ್ನು ಹೋಲಿಸುತ್ತಾ
ಪರಲೋಕದ ಲೆಕ್ಕಪುಸ್ತಕದಲ್ಲಿ ಸರಿದೂಗಿಸುತ್ತಾ
ಒಳ್ಳೆ ಕೆಲಸಗಳಿಂದ. ಆಣೆ ಪ್ರಮಾಣಗಳಿಂದ
ಪುಣ್ಯ ಗಳಿಸುತ್ತಾರೆ.

ನಮ್ಮ ಇಂಗ್ಲಿಷಿನಲ್ಲೋ 'ಪುಣ್ಯ'ಕ್ಕೆ
ಸಂವಾದಿ ಪದವೇ ಇಲ್ಲ.   ಆದರೂ
ವಿರುದ್ಧವಾದ ಪಾಪ
ಇರುಳಲ್ಲಿ ಎದುರು ನಿಂತು ಕಾಡಿ

ಹಗಲಲ್ಲಿ ನಮ್ಮಿಂದ ದಾನ ಕೊಡಿಸುತ್ತೆ—
ತಿರುಕನ ಕೈಗೊಂದೊಂದು ಸಲ ಒಂದು ಕಾಸು.

ಅವ್ವಾ,
ರಾತ್ರಿ ಹೊತ್ತು ಕನಸುಗಳಲ್ಲಿ ಅಡ್ಡಾಡುತ್ತಾ
ನಿನ್ನ ಗೋರಿಕಲ್ಲಿನ ಬಂಜೆನೆಲ ದಾಟಿಹೋಗುತ್ತೇನೆ
ಆದರೆ ಬೆಳಿಗ್ಗೆ, ಎಲ್ಲಿದ್ದೇನೆ, ಗೊತ್ತಾಗುವುದಿಲ್ಲ
ಗೇಬ್ರಿಯಲ್[1]ನ ಪುಸ್ತಕಕ್ಕಾಗಿ
ಗೋರಿಕಲ್ಲಿನ ಗುರುತಾದ ಮಿತ್‌ಜ್ವಾ[2] ಕಲ್ಲುಗಳಿಗಾಗಿ
ಹೋಗಬೇಕಿದೆ ಇನ್ನು

ಹಳೇ ಲೆಕ್ಕ ಇನ್ನು ಚುಕ್ತಾ ಆಗಿಲ್ಲ.

1. ಗೇಬ್ರಿಯಲ್ = ಯೆಹೂದ್ಯರ ಚಿತ್ರಗುಪ್ತ.
2. ಮಿತ್‌ಜ್ವಾ = ಹೀಬ್ರೂ ಭಾಷೆಯಲ್ಲಿ ಪುಣ್ಯಕ್ಕೆ ಸಂವಾದಿಯಾದ ಪದ

# ಯಹೂದಾ ಅಮಿಚ್ಚಾಯ್ ಕವಿತೆಗಳು

ಅನು : ಎಚ್. ಎಸ್. ಶಿವಪ್ರಕಾಶ್

[ಯುದ್ಧೋತ್ತರ ಇಸ್ರೇಲಿನ ಮುಂಚೂಣಿಯಲ್ಲಿರುವ ಕವಿ. ಇಸ್ರೇಲಿ-ಅರಬ್ ಸಂಘರ್ಷದಲ್ಲಿ ಸಕ್ರಿಯನಾಗಿದ್ದರೂ ಯೂರೋಪಿನಲ್ಲಿ ಹುಟ್ಟಿದ ಈತ ತನ್ನ ಐರೋಪ್ಯತನವನ್ನು ವೈಯಕ್ತಿಕ ಸಂವೇದನೆಯನ್ನು ಕಾಪಿಟ್ಟುಕೊಂಡಿದ್ದಾನೆ. ಅನೇಕ ಕವನ ಸಂಕಲನಗಳನ್ನು ಕಾದಂಬರಿ, ನಾಟಕಗಳನ್ನೂ ಬರೆದಿದ್ದಾನೆ.]

## 1. ಜೆರೂಸಲೆಂ

ಜೆರೂಸಲೆಂನ ಮೇಯರ್ ಆಗುವುದು
ತುಂಬಾ ದುಃಖದ ವಿಷಯ
ಭಯಂಕರ.
ಅಂಥಾ ನಗರಕ್ಕೆ ಯಾವ ನರಮಾನವ ತಾನೇ
ಮೇಯರ್ ಆಗುವುದು ಸಾಧ್ಯ ?

ಅವನಿಗೆ ಮಾಡುವುದಾದರೂ ಏನಿದೆ ಅಲ್ಲಿ ?
ಕಟ್ಟುವುದು ಕಟ್ಟುವುದು ಕಟ್ಟುವುದು – ಅಷ್ಟೇ.

ಆದರೆ ರಾತ್ರಿ
ಸುತ್ತ ಬೆಟ್ಟಗಳ ಮೇಲಿಂದ ಕಲ್ಲುಗಳು
ತೆವಳುತ್ತ ಇಳಿಯುತ್ತವೆ
ಕಲ್ಲುಮನೆಗಳ ಕಡೆಗೆ
ತೋಳಗಳು ಬರುವ ಹಾಗೆ
ಮನುಷ್ಯರ ಗುಲಾಮರಾಗಿರುವ ನಾಯಿಗಳನ್ನು ಕಂಡು
ಊಳಿಡುವ ಹಾಗೆ.

## 2. ರಾಜೀನಾಮೆಯ ಹಾಡು

– ೧ –

ಇಗೋ ನನ್ನ ರಾಜೀನಾಮೆ !

ನನ್ನ ಮಗನಿಗೆ ನಮ್ಮಪ್ಪನ ಕಣ್ಣುಗಳು
ನಮ್ಮಮ್ಮನ ಕೈಗಳು
ನನ್ನ ಬಾಯಿ,
ಇನ್ನು ನಾನು ಬೇಕಾಗಿಲ್ಲ. ತುಂಬಾ ವಂದನೆಗಳು
ರೆಫ್ರಿಜಿರೇಟರ್ ಗುನುಗುತ್ತ ದೀರ್ಘಯಾತ್ರೆ ಶುರುಮಾಡಿದೆ
ಬೇವಾರ್ಸಿ ನಾಯಿ ಅಪರಿಚಿತ ಸತ್ತ ಅಂತ ಬಿಕ್ಕುತ್ತಿದೆ.

– ೨ –

ಇಗೋ ನನ್ನ ರಾಜೀನಾಮೆ !

ನನ್ನ ಬಾಕಿ ಎಲ್ಲವನ್ನೂ ಕೊಟ್ಟುಬಿಟ್ಟೆ
ವಿಮೆಯ ಕಂತುಗಳನ್ನು ಪೂರ್ತಿ ಕಟ್ಟಿಬಿಟ್ಟೆ
ಈಗ ಜಗತ್ತು ನನ್ನ ನೋಡಿಕೊಳ್ಳಲಿ
ಎಲ್ಲದರ ಜತೆಗೆ ಎಲ್ಲರ ಜತೆಗೆ ಗಂಟು
ಹಾಕಿಕೊಂಡಿದ್ದೇನೆ.
ನನ್ನಲ್ಲಿ ಯಾವ ಬದಲಾವಣೆಯಾದರೂ
ಅವರೇ ದುಡ್ಡು ಬಿಚ್ಚಬೇಕು
ನನ್ನ ಪ್ರತಿ ಚಲನೆಯೂ ಅವರಿಗೆ ನೋವು
ನಾನು ಸತ್ತರೆ ಅವರು ದಿವಾಳಿ
ನನ್ನ ಧ್ವನಿ ಮೋಡಗಳ ಜತೆಗೆ ಹಾಯುತ್ತಿದೆ
ನನ್ನ ಚಾಚಿದ ಕೈಯ್ಯಿ ಕಾಗದವಾಗಿಬಿಟ್ಟಿದೆ.

ಇನ್ನೊಂದು ಒಪ್ಪಂದ.
ನನ್ನ ಮೇಜಿನ ಮೇಲೆ
ಯಾರೋ ಮರೆತುಹೋಗಿರುವ
ಹಳದಿ ಗುಲಾಬಿಯೊಳಗಿಂದ
ನನಗೆ ಲೋಕ ಕಾಣುತ್ತಿದೆ.

– ೩ –

ಎಂಥಾ ದರಿದ್ರ !
ಘೋಷಿಸುತ್ತೇನೆ : ಜಗತ್ತೇ ಒಂದು ಗರ್ಭ
ಈ ಕ್ಷಣ
ನನ್ನನ್ನು ನಾನು ನೇಮಿಸಿಕೊಳ್ಳುತ್ತೇನೆ
ನನ್ನನ್ನು ನಾನು ಅಜ್ಞಾಪಿಸಿಕೊಳ್ಳುತ್ತೇನೆ
ನಾನು ಜಗತ್ತಿನ ಕಂದ.
ಅದು ನನ್ನನ್ನು ಸಾಕಿಕೊಳ್ಳಲಿ, ಚೆನ್ನಾಗಿ ನೋಡಿಕೊಳ್ಳಲಿ
ನಾನು ಘೋಷಿಸುತ್ತೇನೆ
ಅಮೆರಿಕಾದ ಅಧ್ಯಕ್ಷ ನನ್ನ ಅಪ್ಪ
ಸೋವಿಯತ್ ಒಕ್ಕೂಟದ ನಾಯಕ ನನ್ನ ವಕೀಲ
ಬ್ರಿಟಿಷ್ ಮಂತ್ರಿಮಂಡಲ ನನ್ನ ಕುಟುಂಬ
ಮಾವೋತ್ಸೆ ತುಂಗ್ ನನ್ನ ಅಜ್ಜ
ಇಗೋ ನನ್ನ ರಾಜೀನಾಮೆ
ಘೋಷಿಸುತ್ತೇನೆ : ಆಕಾಶವೇ ಕರ್ತ
ಅವರೆಲ್ಲ ಹೀಗೇ ಮುಂದುವರಿಯುತ್ತಾರೆ
ಮಾಡಲಾರರು ಎಂದು ನಾನು ಅಂದುಕೊಂಡಿದ್ದನ್ನೇ
ಮಾಡಿ ಮುಗಿಸುತ್ತಾರೆ.

# ಡೇನಿಯಲ್ ವೇಸ್‌ಬೋರ್ಟ್ ಕವಿತೆಗಳು

ಅನು : ಎಚ್. ಎಸ್. ಶಿವಪ್ರಕಾಶ್

[ಇಂಗ್ಲೆಂಡಿನ ಯೆಹೂದೀ ಕವಿ. ಈಗ ಅಮೆರಿಕಾದ ಅಯಾವೋ ವಿಶ್ವವಿದ್ಯಾಲಯದ ಕಾವ್ಯ ಪ್ರಾಧ್ಯಾಪಕ. ಅನೇಕ ಯೂರೋಪಿಯನ್ ಭಾಷೆಗಳ ಕಾವ್ಯವನ್ನು ಇಂಗ್ಲಿಷಿಗೆ ಅನುವಾದಿಸಿದ್ದಾರೆ ; ಅಂಥ ಸಂಕಲನಗಳನ್ನು ಸಂಪಾದಿಸಿದ್ದಾರೆ.]

## 1. ಬರಡು ಬೀಜ

ಒಂದು ದಿನ ಒಬ್ಬ ಚಲುವೆ ನಿದ್ದೆಹೋದಳು, ಎಚ್ಚರಗೊಳ್ಳಲಿಲ್ಲ.
ಮರದ ಕೆಳಗೆ ಮಲಗೇ ಇದ್ದಾಗ
ನೆಲ ಅವಳನ್ನು ಮೂಸಿ, ಮುಟ್ಟಿ ನೋಡಿತು,
ಆಕಾಶ ಅವಳ ಮೇಲೆ ಹತ್ತಿ ಕೂತಿತು.
ಅವಳು ಅಲ್ಲಾಡಲಿಲ್ಲ.
ಎಲೆಗಳು ಅವಳ ಮೇಲೆ ಉದುರತೊಡಗಿದವು ;
ಎಲೆಯಿಂದ ಅವಳು ಮುಚ್ಚಿಹೋದಳು.
ಅವಳನ್ನು ಎಚ್ಚರಗೊಳಿಸುವ ಯತ್ನ ಮಾಡಿದವರೆಲ್ಲ
ತೆಪ್ಪಗಾದರು, ಅವಳನ್ನು ಮರೆತುಹೋದರು.
ಆಮೇಲೆ ಬಿರುಗಾಳಿ ಬಂದು,
ಎಲೆ ಹಾರಿಹೋದವು. ಹೊಸ ಎಲೆಗಳಿಂದ ತೂರಿ
ಸೂರ್ಯನ ಕಿರಣ ಅವಳ ಮೈಮೇಲೆ ಚಿತ್ರಬಿಡಿಸಿತು.
ಹಾರಿಹೋದ ಎಲೆಗಳ ಗುರುತೂ ಹಾಗೇ ಇತ್ತು.
ಇನ್ನಷ್ಟು ಜನ ಅವಳನ್ನು ಸುತ್ತುವರಿದರು :
'ಏನು ಮಾಡುವುದು ?'
ಒಬ್ಬ ಹೇಳಿದ : 'ಅಬ್ಬಾ, ಎಂಥಾ ನಿದ್ದೆ !'
ಇನ್ನೊಬ್ಬ ಅವಳ ಸುತ್ತ ಬಿದ್ದಿದ್ದ ಕೊಂಬೆಗಳನ್ನು ನೋಡುತ್ತಾ

ಅಂದ : 'ಅವಳು ಮಲಗಿದ್ದಾಳೆ ಕೊಂಬೆಗಳ ಹಾಗೆ.'
'ಅಲ್ಲ, ದಿಮ್ಮಿಯ ಹಾಗೆ' ಅಂದ ಇನ್ನೊಬ್ಬ
ದಿಮ್ಮಿಯ ಮೇಲೆ ಕೂತವನು.
ಮೌನ
ಮುರಿಯುತ್ತಾ ಮತ್ತೊಬ್ಬ :
'ಅವಳು ಎಲೆಯ ಹಾಗೆ. ನೆಲದಾಳದಲ್ಲಿ ಹೂತುಬಿಡೋಣ'
'ಅಂಜ ! ಬಿತ್ತೋಣವೇನು !' ಇನ್ನೊಬ್ಬ.
'ಹೌದು, ಹೌದು' – ದೊವಲನೆಯುವನು.
'ಅವಳು ಏನಾಗಿ ಮೊಳೆಯುತ್ತಾಳೆ'
'ಬಹುಶಃ ಮರವಾಗಿ'
'ಆದರೆ ನೆಲದಡಿ ಅವಳಿಗೆ ಕಣ್ಣು ಕಾಣುವುದಿಲ್ಲ'
'ಈಗ ಕಾಣುತ್ತೇನು ?'
'ಅವಳು ಉಸಿರಾಡುವುದಿಲ್ಲ'
'ಈಗ ಉಸಿರಾಡುತ್ತಾಳೇನು ?'
ಆಮೇಲೆ ಒಂದು ಗುಂಡಿ ತೋಡಿ,
ಆ ಸಿದ್ರಾವತಿಯನ್ನು ಹೂತರು ನೆಲದಾಳದಲ್ಲಿ.
ಯಾರೂ ಅಲ್ಲಿ ಕಾಲಿಕ್ಕಬಾರದು ಎಂದು
ಒಂದು ಕಲ್ಲನ್ನು ನೆಟ್ಟರು
ಅದೇ ಜಾಗದಲ್ಲಿ.

ಎಷ್ಟೋ, ಎಷ್ಟೋ ವರ್ಷಗಳ ಬಳಿಕ
ಒಬ್ಬ ಗಂಡಸೂ ಅದೇ ರೀತಿ ಮಲಗಿಕೊಂಡದ್ದು,
ಆಗ ಅವನನ್ನು ಹೂಳಲು
ಹೆಚ್ಚು ಸಮಯ ತಕ್ಕೊಳ್ಳಲೇ ಇಲ್ಲ. ಯಾಕಂದರೆ
ನೆಲದವರು ಅವನ ಕಣ್ಣು ಮೂಗುಗಳನ್ನು
ಕಚ್ಚಿ ತಿನ್ನತೊಡಗಿದ್ದರು – ಪ್ರಾಯೋಗಿಕವಾಗಿ.
ಇಂಥವೇ ಇನ್ನಷ್ಟು ಘಟನೆಗಳು ನಡೆದ ಮೇಲೆ
ಆ ದೀರ್ಘ ನಿದ್ದೆಗೆ ಮತ್ತೊಂದು ಹೆಸರಿಟ್ಟರು.
ನಿಜ, ಒಂದೊಂದು ಸಲ ಈಗಲೂ ಅದಕ್ಕೆ
ದೀರ್ಘನಿದ್ದೆ ಅನ್ನುತ್ತಾರೆ.
ಆದರೂ ಅವರು ಅದಕ್ಕೆ ಕೊಟ್ಟ ಹೆಸರು :
ಬರಡು ಬೀಜ.

## 2. ಸ್ವಲ್ಪ ಹಾಗಿರುವುದು ವಾಸಿ

ಒಂದಾನೊಂದು ಕಾಲದಲ್ಲಿ
ಈ ಪೈಪೋಟಿ ನ್ಯಾಯವಲ್ಲ ಎಂದು ಜನ ಗೋಳಿಟ್ಟರು :
ಮೃತ್ಯು ನೇರವಾಗಿ ಮುಂದೆ ನಿಲ್ಲುವುದಿಲ್ಲ ;
ತಲೆಮರೆಸಿಕೊಂಡಿದ್ದು, ಆತ ನಮ್ಮ ಮೇಲೆ ಎರಗುವುದು
ಹಿಂದಿನಿಂದ ಅಥವಾ ಬದಿಯಿಂದ.
'ಇದು ಜನರ ಒಳಿತಿಗಾಗಿ' ಎಂದು ದೇವರ ಸಮಜಾಯಿಷಿ:
ಹೀಗಿರುವುದರಿಂದ ಅಂತ್ಯ ಸುಲಭವಾಗುತ್ತದೆ.
ಜನರಿಗೆ ಈ ಮಾತು ಅರ್ಥವಾಗಲಿಲ್ಲ. ಅಂದರು :
'ನಮಗೆ ಸಹಾಯ ನೀಡು, ಉಳಿದದ್ದು ನೋಡಿಕೊಳ್ಳುತ್ತೇವೆ.
ಇಷ್ಟೆಲ್ಲಾ ಒದ್ದಾಡಿ, ಕಟ್ಟಕಡೆಯಲ್ಲಿ
ಸೋಲು ಅನಿವಾರ್ಯವಾಗುವುದು ಎಂಥ ನ್ಯಾಯ ?'
ದೇವರೆಂದ :
'ಸ್ವಲ್ಪ ಹಾಗಿರುವುದೇ ವಾಸಿ'
ಆಮೇಲೆ ಸ್ವಲ್ಪ ಯೋಚಿಸಿ ಹೇಳಿದ :
'ಮೇಲಾಗಿ ಶಾಶ್ವತ ಬದುಕು ನಿಮ್ಮದು'
ತತ್‌ಕ್ಷಣ
ಅಲ್ಲಿ ನೆರೆದ ಜನ ಕೊರಳೆತ್ತಿ ಸ್ತೋತ್ರ ಹಾಡಿದರು.
ಗಟ್ಟಿಮುಟ್ಟಾಗಿದ್ದ ಎದೆಗಾರರಲ್ಲಿ
ಎಲ್ಲೋ ಕೆಲವು ಜನ ಲೊಚಗುಟ್ಟಿದ್ದು ಕೇಳಿಸುತ್ತಿತ್ತು.

# ಡೇವಿಡ್ ಅವಿದಾನ್ ಕವಿತೆಗಳು

ಅನು : ಸಂಧ್ಯಾ ಎಸ್.

[ಡೇವಿಡ್ ಅವಿದಾನ್ ಇಸ್ರೇಲಿನ ಅತ್ಯಾಧುನಿಕ ಹೀಬ್ರೂ ಕವಿಗಳಲ್ಲಿ ಮುಖ್ಯನೆನಿಸಿದ್ದಾನೆ. ಅಂತರ್ರಾಷ್ಟ್ರೀಯ ಮಟ್ಟದಲ್ಲಿ ಕವಿಯಾಗಿ, ಕಲಾವಿದನಾಗಿ, ಚಲನಚಿತ್ರ ಕಲಾವಿದನಾಗಿ ಹೆಸರು ಪಡೆದಿದ್ದಾನೆ.

ಅವನ ಕವಿತೆಗಳು ಇಂಗ್ಲಿಷ್, ಫ್ರೆಂಚ್, ರಷ್ಯನ್, ಅರೆಬಿಕ್, ಇಟಾಲಿಯನ್, ಯಿಡ್ಡಿಷ್ ಮುಂತಾದ ಅನೇಕ ಭಾಷೆಗಳಿಗೆ ಅನುವಾದವಾಗಿವೆ. ಅನೇಕ ಅಂತರ್ರಾಷ್ಟ್ರೀಯ ಮಟ್ಟದ ಸಂಕಲನಗಳಲ್ಲಿ ಈತನ ಕವಿತೆಗಳು ಪ್ರಕಟವಾಗಿವೆ.]

## 1. "ಇಲ್ಲಿ ಪ್ರಶ್ನೆಗಳನ್ನು ಕೇಳಬೇಡಿ...."

1966 ಆಗಸ್ಟ್‌ನಲ್ಲಿ
ಒಂದು ವರ್ಷದ ತರುವಾಯ
ನಮ್ಮ ದೇಶಕ್ಕೆ ವಾಪಸ್ಸಾದಾಗ
ಒಬ್ಬೊಬ್ಬರಲ್ಲ ಕೇಳಿದ್ದು :
"ಹಾಗಿದ್ರೆ ವಾಪಸ್ಸು ಬಂದುಬಿಟ್ಟೆಯಾ ?"
ಪಕ್ಕಾ ಇಸ್ರೇಲೀ ಪ್ರಶ್ನೆ !
ಇಲ್ಲ, ಇಲ್ಲ, ಖಂಡಿತಾ
ನೀವು ತಿಳಿದಂತೆ
ಈ ಪವಿತ್ರ ಭೂಮಿಗೆ ಸಾಯುವುದಕ್ಕೆಂದು ನಾನು ಬಂದಿಲ್ಲ.
ನಿಮ್ಮ ಕಳಕಳಿಗಾಗಿ ವಂದನೆಗಳು.
ಬಹಳ ಮರ್ಯಾದೆ ಕೊಟ್ಟು ಹೇಳುತ್ತಾರೆ :
"ಬಂದು ಹೋಗುತ್ತಿರು
ಯಾವಾಗ ಬಂದರೂ ನಿನಗೆ ಸ್ವಾಗತ
ಬಂದು
ಬಂದು ಹೋಗುತ್ತಿರು..."

## 2. "ನಿಜವಾದ ಜಯುನಿಜು"

ಯೆಹೂದ್ಯರಿಗೆ ಈಗ ಇರುವುದು ಒಂದೇ ಮಾರ್ಗ :
ಗಟ್ಟಿ ಮಾಂಸಖಂಡಗಳನ್ನು ಬೆಳೆಸಿಕೊಂಡು
ಎಂಥಾ ಕಷ್ಟಗಳನ್ನೂ ಎದುರಿಸಲು ಸಿದ್ಧರಾಗೋದು.
ಅಕ್ಕಪಕ್ಕದವರೊಂದಿಗೆ ಸಣ್ಣಪುಟ್ಟದ್ದಕ್ಕೆ ಕಾದಾಡುವುದನ್ನು ನಿಲ್ಲಿಸಿ
ಬೆಳಿಗ್ಗೆ ಸಾಯಂಕಾಲ
ಎಲ್ಲಾ ಕಾಲದಲ್ಲೂ ಎಲ್ಲಾ ಋತುವಿನಲ್ಲೂ
ಇನ್ನೂ ಎರಡು ಸಾವಿರ ವರ್ಷಗಳ ಕಾಲ
ರಜಾ, ಅಸೌಖ್ಯದ ರಜಾ, ವಾರಾಂತ್ಯದ ರಜ
ಹುಟ್ಟಿದ ಹಬ್ಬ, ಇತರ ಹಬ್ಬಹರಿದಿನಗಳ ರಜಾ
—ಇವ್ಯಾವಕ್ಕೂ ರಜಾ ಹಾಕದೆ
ವಿನ್‌ಗೇಟಿನ* ಪದವೀಧರರ ಸಹಾಯವಿಲ್ಲದೆ
ವ್ಯಾಯಾಮ ಮಾಡುವುದು.

* ಇಸ್ರೇಲಿನ ಪ್ರಸಿದ್ಧ ವ್ಯಾಯಾಮಶಾಲೆ,

## 3. ಬಿಳಿಕೂದಲಿದ್ದರೆ ಜೋಕೆ....

"ಮೇಲಿ"ನಿಂದ ಆದೇಶ ಪಡೆದ
ಪ್ರಶ್ನಿಸಲಾಗದ ಅಧಿಕಾರ ಪಡೆದ
ಸಾವಿನ ದೇವತೆ
ನಕ್ಷತ್ರ ವರ್ಷಗಳ ದೂರದಿಂದ
ಬಿಳಿಕೂದಲನ್ನು ಗುರುತು ಹಚ್ಚುವುದಂತೆ

ಬಿಳಿ ಕೂದಲಿದ್ದರೆ ಗಡ್ಡ ಬಿಡಬೇಡಿ
ಹಣೆಯ ಅಕ್ಕಪಕ್ಕಕ್ಕೆ ಬಣ್ಣ ಹಚ್ಚಿ
ಕಪ್ಪು ಬಣ್ಣದ ಹ್ಯಾಟ್ ತೊಟ್ಟುಕೊಳ್ಳಿ
ನಿಯಾನ್ ಬೆಳಕಿನಡಿ ರಾತ್ರಿಹೊತ್ತು ಓಡಾಡಬೇಡಿ

ಇದು
ನಿಮ್ಮನ್ನು ನೀವು ನೋಡಿಕೊಂಡಂತೆ
ನಿಮ್ಮನ್ನು ನೀವು ಇನ್ಶೂರ್ ಮಾಡಿಕೊಂಡಂತೆ
ಏನನ್ನೂ ಕೊಡದೆ ಏನನ್ನೋ ಪಡೆದುಕೊಂಡಂತೆ

ಇಂಥ ವಿಷಯಗಳು ಮಕ್ಕಳಿಗೆ ಮಾತ್ರ ಅರ್ಥವಾಗುತ್ತವೆ
ಆದರೆ
ಇಂಥ ವಿಷಯಗಳ ಅವಶ್ಯಕತೆ ಇರುವುದು
ಬೆಳೆದವರಿಗೆ ಮಾತ್ರ.

## 4. "ಬೇಕಾಗಿದ್ದಾರೆ...."

—ಒಂದು ಪೊಲಿಸ್ ನೋಟಿಸ್

ಸ್ಥಳೀಯ
1934ರ ಮಾಡೆಲ್
1935 ರಿಂದ ರಸ್ತೆಗಿಳಿದಿದೆ
ಥರ್ಡ್‌ಹ್ಯಾಂಡ್ ಆದರೂ
ವಿಲೇವಾರಿ ಆದರೂ
ಮೊದಲು ಹಾಕಿದ್ದ ಬಣ್ಣವೇ ಇದೆ
2000 ವರೆಗೂ ಸುಸ್ಥಿತಿಯಲ್ಲಿರಬಲ್ಲದ್ದು
ಮಣ್ಣಿನ ಬಣ್ಣದ ಕಣ್ಣು, ಸಾಧಾರಣ ಎತ್ತರ :
ಮನೆತನದ ವಿಚಾರ :
ಲಂಗ ಕಂಡರೆ ಹಿಂದೆ ಓಡುವ ರಕ್ತಗತ ಪ್ರವೃತ್ತಿ
ಹೀಬ್ರೂ ಇಂಗ್ಲಿಷ್ ಡಾಲ್ಫಿನೀಸ್ ಮಾತಾಡಬಲ್ಲದು
ಕಡೆಯಸಲ ಕಂಡಾಗ—
ಡ್ರೈಜೆನ್‌ಗಾಫ್ ರಸ್ತೆಯ ಪುಸ್ತಕದಂಗಡಿಯೊಂದರಲ್ಲಿ
ಅಟ್ಲಾಸ್ ಕದ್ದ ಶಂಕೆ ಹೊತ್ತು
ದಿಕ್ಕುದೆಶೆಯಿಲ್ಲದಂತೆ
ಜಪಾನೀ ಕಾಂಟೆಸ್ಸಾ ಓಡಿಸುತ್ತಾ
ಟೆಲ್ ಅವಿವ್‌ನೊಳಗೆ....

## ಲೀಹ್ ಗೋಲ್ಡ್‌ಬರ್ಗ್

ಅನು : ಎಲ್ಸಿ ನಾಗರಾಜು

[ಲಿಥುವೇನಿಯಾದಲ್ಲಿ ಹುಟ್ಟಿದ ಲೀಹ್ ಗೋಲ್ಡ್‌ಬರ್ಗ್, 1933ರಲ್ಲಿ ಸೆಮಿಟಿಕ್ ಭಾಷಾ ಪರಂಪರೆ, ಅಂದರೆ ಹೆಬ್ರ್ಯೂ, ಅರೇಮಿಯನ್, ಫೀನಿಷಿಯನ್, ಅರಬ್ ಮತ್ತು ಅಸೀರಿಯನ್ ಪರಂಪರೆಗಳ ಬಗೆಗೆ ನಡೆಸಿದ ಸಂಶೋಧನೆಗೆ ಡಾಕ್ಟೊರೇಟ್ ಪಡೆದಳು. ನಂತರ ಪ್ಯಾಲೆಸ್ಟೈನ್‌ಗೆ ಬಂದು, ಮೊದಲು ಪತ್ರಕರ್ತೆಯಾಗಿ, ಅನುವಾದಕಿಯಾಗಿ ನಂತರ ಜೆರೂಸಲೇನ ಹೆಬ್ರ್ಯೂ ವಿಶ್ವವಿದ್ಯಾನಿಲಯದಲ್ಲಿ ತೌಲನಿಕ ಸಾಹಿತ್ಯದ ಪ್ರಾಧ್ಯಾಪಕಿಯಾಗಿ ಕೆಲಸ ಮಾಡಿದಳು. ಕವಯಿತ್ರಿಯಾಗಿ, ಯೂರೋಪಿನ ಸೌಂದರ್ಯಪ್ರಜ್ಞೆ ಹೊಸ ಹೆಬ್ರ್ಯೂ ಸಂಸ್ಕೃತಿಗೆ ಪ್ರವಹಿಸಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಮಹತ್ವಪೂರ್ಣ ಪಾಂಡಿತ್ಯ ತೋರಿದಳು.]

### ತವರು ಮನೆ*

ನನ್ನ ತಾಯಿಯ ತಾಯಿ
ಸತ್ತಳು ಅವಳ ವಸಂತ ಕಾಲದಲ್ಲಿ
ಅವಳ ಮಗಳಿಗೆ ಅವಳ ಮುಖದ ನೆನಪು
ಅಷ್ಟಾಗಿ ಇಲ್ಲ.

ಅಜ್ಜನ ಹೃದಯದಲ್ಲಿ ಅಚ್ಚಳಿಯದೆ
ಉಳಿದಿದ್ದ ಅವಳ ಭಾವ ಭಂಗಿಗಳು
ಅವನ ಸಾವಿನ ನಂತರ ಚಿಮ್ಮಿ
ಹೊರ ಹರಿದವು ಕಲ್ಪನೆಗಳ ಲೋಕದಿಂದ
ಉಳಿದದ್ದು ಅವಳ ಕನ್ನಡಿ ಮಾತ್ರ.

ಕಾಲಾನುಕ್ರಮದಲ್ಲಿ ಅದು
ಕಂದಿಹೋಯಿತು ಬೆಳ್ಳಿ ಚೌಕಟ್ಟಿನೊಳಗೆ

ಅವಳನ್ನು ಸರಿಗಟ್ಟಲಾಗದ
ಮೊಮ್ಮಗಳು ನಾನು ಅವಳಿಗೆ
ಹೇಗೂ ಹೋಲಿಕೆಯಿಲ್ಲದವಳು.
ನಿಟ್ಟಿಸುತ್ತೇನೆ ಆ ಕನ್ನಡಿಯೊಳಗೆ
ತನ್ನೊಳಗೆ ಸಿರಿಸಂಪತ್ತನ್ನು
ಅಡಗಿಸಿಟ್ಟುಕೊಂಡ ಸರೋವರದ
ಜಲರಾಶಿಯನ್ನು ನಿಟ್ಟಿಸುವ ಹಾಗೆ

ನನ್ನ ಮುಖದ ಹಿಂದೆ ಆಳ
ಆಳದಲ್ಲಿ ತರುಣಿಯೊಬ್ಬಳು ಕಾಣುವಳು
ಕೆಂಗು ಬಿರಿಯುವಳು, ನಗು
ಹೊಳೆಯುವಳು, ಚವುರಿ ಜಡೆ
ಕಿವಿ ತುಂಬು ನಯ ನಾಜೂಕು
ತೊಟ್ಟ ಚಿನ್ನದ ಮಾಟಿ.
ಮುಖದ ಹಿಂದಿನ ಆಳದಲ್ಲಿ
ಮಿನುಗುವುದು ಬಂಗಾರದ ಕಣ್ಣುಬೊಂಬೆ
ಕನ್ನಡಿ ಕಾಪಿಡುವುದು ಎಂದೆಂದೂ
ಅವಳಂದ ಚೆಂದದ ಕೌಟುಂಬಿಕ ಪರಂಪರೆ.

---

* My Mothers House

# ದಾಹ್ಲಿಯಾ ರಾವಿಕೋವಿಚ್

---

ಅನು : ಎಲ್ಸಿ. ನಾಗರಾಜು

[ಟೆಲಿವೀವ್ ನಗರದ ಉಪನಗರ ರಮತ್‌ಗಾನ್‌ನಲ್ಲಿ ಹುಟ್ಟಿದ ದಾಗ್ಲಿಯಾ ಬೆಳೆದದ್ದು ಸಾಮೂಹಿಕ ಕೃಷಿಯ (ಬಹುಶಃ ಕಿಬ್ಬುತ್) ಹೊಲಗಳಲ್ಲಿ. ಮೊದಲ ಇಜ್ರೇಲ್‌ನಲ್ಲಿ ಸೈನ್ಯದಲ್ಲಿ ಸೇವೆ. ನಂತರ ಜೆರೂಸಲೇಂನ ಹೆಬ್ರ್ಯೂ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಸಾಹಿತ್ಯ ಅಧ್ಯಯನ. The love of an orrange ಹೆಸರಿನಲ್ಲಿ 1959ರಲ್ಲಿ ಪ್ರಕಟವಾದ ಅವಳ ಕವಿತೆಗಳು ಇಜ್ರೇಲ್‌ನ ಕಾವ್ಯಪರಂಪರೆಯಲ್ಲಿ ಹೊಸ ಧ್ವನಿಯೆಂದು ಗುರುತಿಸಲ್ಪಟ್ಟವು.]

## ನೀಲಿ ಪಶ್ಚಿಮ*

ಹಾದಿ ಮಾತ್ರವೆಂಬುದೇನಾದರೂ ಅಲ್ಲಿ
ಇರುವುದಾದರೆ ಅದು ಅಲ್ಲೆಲ್ಲೋ
ಬಿದ್ದಿರುವ ಮುಖವಾಡ
ಯಂತ್ರಗಳನ್ನು ಬಿಚ್ಚಿಟ್ಟ, ಮುರಿದ
ಬಿಡಿ ಭಾಗಗಳ ರೇಕು, ಕಾರ್ಯಾಗಾರಗಳು
ಸುರಿವ ಹಾಳು.

ಯಾಕೆ ಬಳಿಸಾರಬಾರದು
ಹೊಲಗದ್ದೆ ತೋಟಗಳಿಗೆ
ಹೊಲಗಳಿಗಿಂತ ಯಾತನೆ ಮತ್ತೊಂದಿಲ್ಲ
ಅವುಗಳ ಎದೆ ಕಗ್ಗಲ್ಲು.

ಬೆಟ್ಟದ ಆ ಮಗ್ಗುಲು
ಮುಟ್ಟುವ ಬಯಕೆ ನನಗೆ
ಮುಟ್ಟಬೇಕು ಅಲ್ಲಿಗೆ
ಅಲ್ಲೇ ಇದ್ದುಬಿಡಬೇಕು.

ಕಡಿದುಕೊಳ್ಳಬೇಕು ಭೂದ್ರವ್ಯದಿಂದ
ಆಪಾದ ಮಸ್ತಕ ಈ ಭೂದ್ರವ್ಯ

ಗರಗಸದಂತೆ ಹೋಗುತ್ತಾ ಕೊಯ್ಯುವ
ಬರುತ್ತಾ ಕೊಯ್ಯುವ ಚಿಂತನೆಯ ಆರಂಭಗಳು
ಕೊನೆಮುಟ್ಟಿ ಕಳಕೊಳ್ಳಬೇಕು. ಸೂರ್ಯನ
ಅಂಚು ಮುಟ್ಟಿಯೂ ಸುಟ್ಟುಕೊಳ್ಳದ ಹಾಗೆ

ಜಲದ ಕ್ಷಿತಿಜದಲ್ಲಿ ಅದು
ಸೆಳೆದುಕೊಳ್ಳದ ಹಾಗೆ
ಒಬ್ಬಳೆ ನಡೆಯಬಹುದಾದರೆ
ಸೂರ್ಯಕಿರಣಗಳು ಕಟ್ಟಿದ
ಕಮಾನುಗಳ ಮೇಲೆ
ಒಬ್ಬಳೆ ಏರಬಹುದಾದರೆ

ಕಡಲುಗಳಾಚೆಗೆ ಒಬ್ಬಳೇ
ಎಲ್ಲ ಪಟ್ಟಣಗಳ ಮುಟ್ಟಬಹುದಾದರೆ
ಇಲ್ಲಿ ಯಾವ ಹಡಗುಗಳೂ ಬಂದರು ತಾಗವ
ಮತ್ತೊಂದು ದುಃಖ ಕಾದಿದೆ.

ಮುಂಬರಲಿರುವ ದಿವಸಗಳಲ್ಲಿ
ಒಂದು ದಿವಸ ಬಂದು ಬಂದು
ಹೋಗುವ ಹಡಗುಗಳಾವರ್ತನದಿಂದ
ಕತ್ತಲಾಗುವುದು ಕಡಲಕಣ್ಣು.

ಆ ಘಳಿಗೆ ಇಡೀ ಭೂದ್ರವ್ಯವೇ
ಯಾನ ಹೊರಡುವುದು ಕರುಳು ಕತ್ತರಿಸಿಕೊಂಡು
ಹಾಗು ಸೂರ್ಯನೊಬ್ಬನು ಬೆಳಗುವನು
ಕಡಲು ನೀಲಿ ಜಲರಾಶಿ ಹಾಗೆ
ಕಣ್ಣು ಬೇಗೆಯ ಹಾಗೆ.

ಕಾಯುವುದು ನಮಗೆ
ನೀಲಿ ಪಶ್ಚಿಮದ ಕಡೆಗೆ
ಸಜ್ಜಾಗಿ ನಿಂತ ಹಡಗು
ಹತ್ತುವ ತನಕ.

* The Blue West

# ಫೌಂಡ್ ಪೊಯಮ್ಸ್

ಮೂಲ : ನಿಸ್ಸಿಂ ಇಜ್ಜಕಿಲ್

ಅನು : ಸುಮತೀಂದ್ರ ನಾಡಿಗ

[ಪ್ರಾಣಿಶಾಸ್ತ್ರಜ್ಞರು ಪ್ರಾಣಿಗಳನ್ನು ಕುರಿತು ಅಭ್ಯಾಸ ಮಾಡಿ ಅವುಗಳ ಕುತೂಹಲಕಾರಿ ಜೀವನಕ್ರಮವನ್ನು ಚಿತ್ರಿಸುವ ಪ್ರಬಂಧಗಳನ್ನು ನಿಸ್ಸಿಂ ಇಜ್ಜಕಿಲ್ ಅವರು ಓದುತ್ತಿದ್ದಾಗ, ಆ ಪ್ರಬಂಧಗಳ ಕೆಲವು ವಿವರಗಳನ್ನೇ ಹಾಗೇ ಗದ್ಯರೂಪದಲ್ಲಿ ಸಂಯೋಜಿಸಿದರೆ, ಈ ಸಂಯೋಜನೆಗಳು ಕಾವ್ಯದ ಪರಿಣಾಮವನ್ನು ಬೀರಬಲ್ಲವು ಎಂದು ಅವರಿಗೆ ಅನ್ನಿಸಿತು. ಹೀಗೆ ವೈಜ್ಞಾನಿಕ ಪ್ರಬಂಧಗಳಲ್ಲಿ ಕಂಡುಕೊಂಡ ಕವಿತೆಗಳನ್ನು ಅವರು 'ಫೌಂಡ್ ಪೊಯಮ್ಸ್' (Found Poems) ಎಂದು ಕರೆದರು. ಆ ಪದ್ಯಗಳ ಎರಡು ಮಾದರಿಗಳನ್ನು, ಮುಂಬಯಿನಲ್ಲಿ ಅವರೊಂದಿಗೆ ಮುಂಬಯಿ ವಿಶ್ವವಿದ್ಯಾನಿಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದ ಡಾ॥ ಸುಮತೀಂದ್ರ ನಾಡಿಗರು ಕನ್ನಡಕ್ಕೆ ಅನುವಾದಿಸಿ ಕೊಟ್ಟಿದ್ದಾರೆ.]

## ಕೋಳಿಗಳ ಸಾಮಾಜಿಕ ವ್ಯವಸ್ಥೆ

ನಾರ್ವೆಯ ಮನಶ್ಶಾಸ್ತ್ರಜ್ಞ
ಟಿ. ಶೆಜಲ್ಡರಪ್ ಎಬ್ ಎನ್ನುವವನು
ಕೋಳಿಗಳ ಕುಕ್ಕುವ ಕ್ರಮವನ್ನು ಗಮನಿಸಿದ.

ಪ್ರತಿಯೊಂದು ಗುಂಪಿನಲ್ಲೂ ಒಂದು ಕೋಳಿ
ಮಿಕ್ಕವುಗಳಿಗೆ ಮುಂದಾಳಾಗಿರುತ್ತದೆ
ಅದು ಇನ್ನಾವ ಕೋಳಿಯನ್ನಾದರೂ
ತಿರುಗಿ ಕುಕ್ಕಿಸಿಕೊಳ್ಳದೆ ಕುಕ್ಕಬಹುದು.

ಇನ್ನೊಂದು ಕೋಳಿ ಎಲ್ಲವನ್ನೂ ಕುಕ್ಕಬಹುದು
ಆದರೆ ಮೇಲಿನ ಕೋಳಿಯನ್ನಲ್ಲ.
ಇದೇ ರೀತಿ
ಅವರೋಹಣ ಕ್ರಮದಲ್ಲಿ ವ್ಯವಸ್ಥೆಯಾಗುತ್ತದೆ.
ಕಡೆಯಲ್ಲಿ ಉಳಿಯುವುದು
ಎಲ್ಲರಿಂದ ಕುಕ್ಕಿಸಿಕೊಂಡು
ಯಾರನ್ನೂ ಕುಕ್ಕದ
ದುರದೃಷ್ಟ ಕೋಳಿ.

ಹುಂಜಗಳು ಸಾಮಾನ್ಯವಾಗಿ
ಕೋಳಿಗಳನ್ನು ಕುಕ್ಕುವುದಿಲ್ಲ,
ಆದರೆ ಅವುಗಳದ್ದೇ ಆದ ಕುಕ್ಕುವ ಕ್ರಮವಿದೆ.
ಹೀಗೆ ಯಾವಾಗಲೂ
ಮೊಟ್ಟೆಯಿಕ್ಕುವ ಗುಂಪು
ಎರಡು ವ್ಯವಸ್ಥೆಗಳನ್ನು ಹೊಂದಿರುತ್ತದೆ.
ಒಂದೊಂದು ಲಿಂಗಕ್ಕೆ ಒಂದೊಂದು ವ್ಯವಸ್ಥೆ.

ಶಿಕಾಗೋ ಯೂನಿವರ್ಸಿಟಿಯ W. C. ಅಲೀ
ಮತ್ತು ಅವರ ವಿದ್ಯಾರ್ಥಿಗಳು
ಪುಲ್ಲಿಂಗ ಹಾರ್ಮೋನುಗಳು
ಮೇಲೆ ಬೀಳುವುದನ್ನು
ಹೆಚ್ಚಿಸುತ್ತಾವೆಂದೂ
ಈ ಹಾರ್ಮೋನ್ ಇಂಜಕ್ಷನ್ನಿನಿಂದ
ಕೋಳಿಗಳು ತಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ
ಮೇಲೇರಲು ಹೋರಾಡುತ್ತಾವೆಂದೂ
ಕಂಡುಹಿಡಿದರು.

ಸ್ತ್ರೀಲಿಂಗ ಹಾರ್ಮೋನುಗಳು
ಅದರ ವಿರುದ್ಧ ಪರಿಣಾಮವನ್ನು ಕೊಡುತ್ತವೆ.
ಇಂಜಕ್ಷನ್ ಕೊಟ್ಟ ಹುಂಜಗಳು
ಮೆತ್ತಗಾಗುತ್ತವೆ.

ಗುರುತಿಲ್ಲದ, ಬೆಳೆದ ಕೋಳಿಗಳನ್ನು
ಒಂದೇ ಗೂಡಿನಲ್ಲಿ ಒಟ್ಟಿಗೇ ಬಿಟ್ಟಾಗ
ಅವು ಅನುಕ್ರಮವಾಗಿ
ಒಂದು ಇನ್ನೊಂದನ್ನು ಜೋಡಿಮಾಡಿಕೊಂಡು
ಒಂದು ಸಾರಿಗೆ ಒಂದು ಎದುರಾಳಿಯೊಂದಿಗೆ
ಕುಕ್ಕುವ ಕ್ರಮ ತೀರ್ಮಾನವಾಗುವವರೆಗೆ
ಯುದ್ಧಮಾಡುತ್ತವೆ.

ಕೆಲವು ಹೋರಾಡದೆ ಶರಣಾಗುತ್ತವೆ;
ಮೇಲೆ ಬೀಳುವ ಶಕ್ತಿಯಿಲ್ಲದ್ದರಿಂದ,
ಅಥವಾ ಆರೋಗ್ಯ ಸರಿಯಿಲ್ಲದ್ದರಿಂದ,
ಅಥವಾ ಹೋರಾಡುವ ಚಾತುರ್ಯದ ಅಭಾವದಿಂದ.

ಕುಕ್ಕುವ ಕ್ರಮ ನಿಶ್ಚಿತವಾದ ಕೂಡಲೆ
ಆ ವ್ಯವಸ್ಥೆಯ ಸದಸ್ಯರು
ತಮಗಿಂತ ಶ್ರೇಷ್ಠರನ್ನು ಗುರುತಿಸುತ್ತ ಹೋದ ಹಾಗೆ
ಕುಕ್ಕುವ ಸರದಿ ಕಡಿಮೆಯಾಗುತ್ತ ಹೋಗುತ್ತದೆ.
ಕೇವಲ ತಲೆಯನ್ನು ಎತ್ತುವುದರಿಂದ
ಅಥವಾ ತಗ್ಗಿಸುವುದರಿಂದ
ಅಧಿಕಾರವೋ ಅಥವಾ ಶರಣಾಗತಿಯೋ
ಸ್ಪಷ್ಟವಾಗುತ್ತದೆ.
ಹಾಗೆ ವ್ಯವಸ್ಥೆಯಾದ ಹಿಂಡು
ಮೊದಲಿಗಿಂತ ಶಾಂತಿಯುತವಾಗಿ
ಶಕ್ತಿಯನ್ನು ಶೇಖರಿಸುತ್ತದೆ.

ಕೋಳಿಗಳ ನೆನಪು ಕ್ಷಣಕಾಲದ್ದು.
ಎರಡುವಾರ ಪ್ರತ್ಯೇಕಿಸಿದ ಕೋಳಿಗಳನ್ನು
ಮತ್ತೆ ಒಟ್ಟಿಗೇ ತಂದಾಗ
ಅಧಿಕಾರ ಸ್ಥಾಪನೆಗೆ ಮತ್ತೆ ಹೋರಾಡುತ್ತವೆ.

ಹೊಸತೊಂದು ಕೋಳಿ
ಒಂದು ವ್ಯವಸ್ಥಿತ ಹಿಂಡಿಗೆ ಬಂದಾಗ

ಅಲ್ಲಿರುವ ಪ್ರತಿಯೊಂದರ ಜೊತೆಗೂ
ತನ್ನ ಸ್ಥಾನ ನಿರ್ಧಾರಕ್ಕಾಗಿ ಹೋರಾಡಬೇಕಾಗುತ್ತದೆ.

ಹೀಗಿದೆ ಕೋಳಿಗಳ
ಮೂಲಭೂತ ಸಾಮಾಜಿಕ ವ್ಯವಸ್ಥೆ.
ಸಮಾಜದಲ್ಲಿ ಮೇಲಿನ ಸ್ಥಾನದ
ಉಪಯೋಗವೇನು ?

ಸಹಜವಾಗಿ
ಕುಕ್ಕುವ ಕ್ರಮದಲ್ಲಿ ಮೇಲಿರುವ ಕೋಳಿಗಳಿಗೆ
ಕೆಲವು ರಿಯಾಯತಿಗಳಿವೆ—
ಆಹಾರದ ತಟ್ಟೆಗಳ ಹತ್ತಿರ
ಮಣ್ಣು ಕೆದಕುವ ಜಾಗದಲ್ಲಿ
ಹಿಂಡಿನಲ್ಲಿ
ಮತ್ತು ಕೋಳಿಗೂಡುಗಳಲ್ಲಿ ಅವಕ್ಕೆ ಮೊದಲನೇ ಸ್ಥಾನವಿರುತ್ತದೆ.

ಮೇಲಿನವು
ಕೆಳಮಟ್ಟದ ಕೋಳಿಗಳನ್ನು
ನಿರ್ದಯವಾಗಿ ದೂರ–ಓಡಿಸುತ್ತವೆ.
ಕೆಳಗಿನವು ಬಹಳ ಹೊತ್ತು
ತಮ್ಮ ಮೇಲಿನವರಿಂದ ದೂರದಲ್ಲಿಯೇ ಇರುತ್ತವೆ.
ಅವುಗಳಿಗೆ
ತುಳಿಸಿಕೊಂಡವರ ಮತ್ತು ಸಾಮಂತರ ಮುಖಗಳಿರುತ್ತವೆ
ತಲೆ ಯಾವಾಗಲೂ ತಗ್ಗಿರುತ್ತದೆ,
ದೇಹದ ಪುಕ್ಕಗಳು ಕೆದರಿಕೊಂಡಿರುತ್ತವೆ,
ತಿದ್ದಿದ ಹಾಗಿರುವುದಿಲ್ಲ.

ಇದಕ್ಕೆ ವಿರುದ್ಧವಾಗಿ
ಮೇಲ್ಮಟ್ಟದ ಕೋಳಿಗಳು
ನೆಟ್ಟಗೆ ಜಂಭದಿಂದ
ಮುದ್ದುಮಾಡಿದ ಹೆಣ್ಣು ಕುದುರೆಗಳ ಹಾಗೆ ನಡೆಯುತ್ತವೆ.

ಈ ಕುಕ್ಕುವ ಕ್ರಮ
ಲೈಂಗಿಕ ವರ್ತನೆಯನ್ನು ಹೇಗೆ ಪ್ರಭಾವಿಸುತ್ತದೆ ಗೊತ್ತೆ ?

ಗಂಡು ತನ್ನ ಅಧಿಕಾರವನ್ನು ತೋರಿಸುವುದು
ಲೈಂಗಿಕ ಒಪ್ಪಿಗೆಗೆ ಮೊದಲನೆ ಅವಶ್ಯಕತೆ.
ಹಾಗಿದ್ದರೂ
ನಾವು ಗಮನಿಸಿದ್ದೇನೆಂದರೆ
ಲೈಂಗಿಕ ಆಕ್ರಮಣಕಾರಿ ಗಂಡುಗಳಿದ್ದರೆ
ಹೆಣ್ಣುಗಳು ಓಡಿಹೋಗುತ್ತವೆ.
ಹೆಣ್ಣುಗಳಿಗೆ ಇಷ್ಟವಿಲ್ಲದೆ ಹೋದಷ್ಟೂ
ಮತ್ತಷ್ಟು ಕಾತರತೆಯಿಂದ
ಗಂಡುಗಳು ಪ್ರಣಯಕ್ಕೆ ಮುನ್ನುಗ್ಗುತ್ತವೆ.

## ಮನೆಗೆ ಹಿಂತಿರುಗುವ ಸ್ಯಾಮನ್

ಒಮ್ಮೆ
ಆಳವಾಗಿ ಅಭ್ಯಾಸಮಾಡಿದ ಒಬ್ಬ ಪ್ರಾಣಿಶಾಸ್ತ್ರಜ್ಞ
ಮೀನುಗಳ ವಲಸೆ ಹೋಗುವಿಕೆ
ಪ್ರಕೃತಿಯ ರಹಸ್ಯಗಳಲ್ಲಿ
ಕಡಿಮೆ ಗೂಢವಾದದ್ದೇನೂ ಅಲ್ಲವೆಂದು ಹೇಳಿದ.
ಹುಟ್ಟಿದ ಸ್ಥಳಕ್ಕೆ ಹಿಂತಿರುಗುವ ಸ್ಯಾಮನ್
ಒಂದು ಆಶ್ಚರ್ಯಕಾರಕ ಉದಾಹರಣೆ.

ಅಮೆರಿಕದ ವಾಯುವ್ಯದಲ್ಲಿರುವ
ಚಿನೂಕ್ ಸ್ಯಾಮನ್
ಒಂದು ಸಣ್ಣ ಹಳ್ಳದಲ್ಲಿ ಹುಟ್ಟಿ
ನದಿಯುದ್ದಕ್ಕೂ ಹೋಗಿ
ಶಾಂತಸಾಗರವನ್ನು ಸೇರುತ್ತದೆ.
ಆ ಸಮುದ್ರದಲ್ಲಿ ಐದುವರ್ಷ ವಾಸವಾಗಿದ್ದು

ಮೊಟ್ಟೆ ಇಡುವ ಸಮಯ ಬಂದಾಗ
ದಾರಿ ತಪ್ಪದ ಹಾಗೆ
ತಾನು ಹುಟ್ಟಿದ ಹಳ್ಳಕ್ಕೆ ವಾಪಸಾಗುತ್ತದೆ.
ಹುಟ್ಟಿದ ಸ್ಥಳಕ್ಕೆ ಹಿಂತಿರುಗುವ
ಅದರ ನಿರ್ಧಾರ ಅದ್ಭುತವಾದದ್ದು.

ನೂರು ಪೌಂಡ್ ತೂಕದ ಚಿನೂಕ್ ಸ್ಯಾಮನ್
ಗಾಳಿಯಲ್ಲಿ
ಸುಸ್ತಾಗುವವರೆಗೆ ಮತ್ತೆ ಮತ್ತೆ ಹಾರುತ್ತ
ದಬೆದಬೆಯ ಹತ್ತಿರ
ನಿಷ್ಫಲ ಪ್ರಯತ್ನ ಮಾಡುವುದನ್ನು ನೋಡಿದರೆ,
ಸ್ಯಾಮನ್ನಿನ ಸಹಜ ಪ್ರವೃತ್ತಿ
ನದಿಯ ವಿರುದ್ಧ ದಿಕ್ಕಿನಲ್ಲಿ
ಅದನ್ನು ಎಳೆಯುವುದನ್ನು ನೋಡಿದರೆ—
ಆಶ್ಚರ್ಯವಾಗುತ್ತದೆ.

ಹುಟ್ಟಿದ ಸ್ಥಳ
ಸ್ಯಾಮನ್‌ಗಳಿಗೆ ಹೇಗೆ ನೆನಪಿರುತ್ತದೆ ?
ಕೆಲವೊಮ್ಮೆ 800 ಅಥವಾ 900 ಮೈಲಿಯಾಚೆಯಿಂದ
ತಮ್ಮ ದಾರಿಯನ್ನು ಹೇಗೆ ಕಂಡುಕೊಳ್ಳುತ್ತವೆ ?

ವಾಸನೆಯಿಂದ ಸ್ಯಾಮನ್
ತಾನು ಹುಟ್ಟಿದ ಹಳ್ಳವನ್ನು ಗುರುತಿಸುತ್ತದೆ.
ಸಮುದ್ರದಿಂದ ಮನೆಯವರೆಗೂ
ತನ್ನ ದಾರಿಯನ್ನು ಮೂಸುತ್ತ ಹೋಗುತ್ತದೆ.

ಮೀನುಗಳಿಗೆ ಘ್ರಾಣೇಂದ್ರಿಯ
ಸೂಕ್ಷ್ಮವಾಗಿರುತ್ತದೆ.
ಪ್ರತಿಯೊಂದು ಹಳ್ಳಕ್ಕೂ
ಅದರದೇ ವಿಶಿಷ್ಟವಾಸನೆ
ಎಷ್ಟು ವರ್ಷ ಕಳೆದರೂ ಹಾಗೆಯೇ ಇರುತ್ತದೆ.

ಪುಟ್ಟ ಸ್ಯಾಮನ್‌ಗಳು
ಕಡಲಿಗೆ ಹೋಗುವ ಮುಂಚೆ
ಈ ವಾಸನೆಗೆ ಬದ್ಧವಾಗಿರುತ್ತವೆ.
ಅವು ಪ್ರಬುದ್ಧವಾಗುವವರೆಗೂ
ಈ ಗಂಧವನ್ನು ನೆನಪಿಟ್ಟುಕೊಂಡಿರುತ್ತವೆ.
ಮೊಟ್ಟೆಯಿಡುವ ಸಮಯಕ್ಕೆ
ಆ ವಾಸನೆಯನ್ನು ಹಿಡಿದು
ಪ್ರವಾಹದ ವಿರುದ್ಧ ಈಜಿ
ತಮ್ಮ ಜನ್ಮಸ್ಥಳಕ್ಕೆ ಹಿಂತಿರುಗುತ್ತವೆ.

# ಮಗಳ ಸಮಾಧಿ

ಮೂಲ : ಶೋಲೊಮ್ ಅಲ್‌ಶೆಮ್
ಅನು : ಲಿಂಗರಾಜು

[ಆಧುನಿಕ ಯಿಡ್ಡಿಶ್ ಸಾಹಿತ್ಯ ಪಿತಾಮಹ 'ಮೆಂದೆಲ್'ನಿಂದ ಹೊಸ ತಿರುವನ್ನು ಪಡೆದುಕೊಂಡ ಯಿಡ್ಡಿಶ್ ಸಾಹಿತ್ಯ ಐ. ಎಲ್. ಪೆರೇಟ್ಜ್, ಶೋಲೋಮ್ ಆಶ್, ಬಾಲ್ ಮಕ್‌ಶೊವ್ಸ್ ಮುಂತಾದವರಿಂದ ಸಮೃದ್ಧಗೊಳ್ಳಲಾರಂಭಿಸಿದ್ದರೂ ಇದರಲ್ಲಿ—ಮೆಂದೆಲ್‌ನ ಜ್ಯೂ ದೀನ-ದರಿದ್ರರ ಬದುಕನ್ನು ಸಾಹಿತ್ಯಕ್ಕೆ ತರುವ ಯತ್ನದೊಂದಿಗೆ—ಹೊರ ಸಂವೇದನೆಯೊಂದು ತುಂಬಿಕೊಳ್ಳತೊಡಗಿದ್ದು ಶೋಲೆಮ್ ಅಲ್‌ಶೆಮ್‌ನಿಂದ. ಮೋಸೆಸ್‌ರ ಕಾಲದಿಂದಲೂ ಶಾಪಗ್ರಸ್ತ ಬದುಕಿನಂಥ ಅಲೆಮಾರಿತನಕ್ಕೆ ಅಂಟಿರುವ ಜ್ಯೂ ಜನಾಂಗದ ವೈವಿಧ್ಯಮಯ ಜೀವನ ಶೋಲೆಮ್ ಅಲ್‌ಶೆಮ್‌ನ ಕೃತಿಗಳಲ್ಲಿ ಮಾರ್ಕ್ಸ್ ತತ್ವವನ್ನು ಅಂತರ್ಗತವಾಗಿಸಿಕೊಂಡು ಹೊಮ್ಮಿಕೊಳ್ಳಲಾರಂಭಿಸಿತು. ತನ್ನ ಜನಾಂಗ ಇತಿಹಾಸದುದ್ದಕ್ಕೂ ಬದುಕುತ್ತಾ ಬಂದಂತಹುದೇ ಬದುಕನ್ನು ಬಾಳಿದ ಶೋಲೆಮ್ 1859ರ ಮಾರ್ಚ್ 2ರಂದು ಉಕ್ರೈನ್‌ನ ಪೆರೆಯಸ್ಲಾವ್‌ನಲ್ಲಿ ಬಡ ಅಂಗಡಿಕಾರನ ಮಗನಾಗಿ ಹುಟ್ಟಿದ. ಎಳೆಯದರಲ್ಲೇ ತಾಯಿಯನ್ನು ಕಳೆದುಕೊಂಡ. ಮಲತಾಯಿಯ ನಿಷ್ಠುರ ಪೋಷಣೆಯಲ್ಲಿ ಬೆಳೆದವನಿಗೆ ತನ್ನ ಪ್ರತಿಭೆಯನ್ನು ತೋರಿಕೊಂಡನಂತರ ತಂದೆಯ ಪ್ರೀತಿ ಲಭ್ಯವಾಗುತ್ತಾ ಬಂದಿತು. ಸಾಲೊಮನ್ ರಬಿನೋವಿಚ್‌ನಾಗಿದ್ದವನು ಜ್ಯೂಗಳಲ್ಲಿ ಪರಸ್ಪರರನ್ನು ಅಭಿನಂದಿಸುವಾಗ ಹೇಳುವ 'ಶೋಲೊಮ್ ಅಲ್‌ಶೆಮ್' ಎಂಬ ಅಂಕಿತದಲ್ಲಿ ಬರೆಯಲಾರಂಭಿಸಿದಾಗ ಚೆಕಾಫ್, ಗಾರ್ಕಿ, ಟಾಲ್‌ಸ್ಟಾಯ್ ಮೊದಲಾದವರು ಪ್ರಶಂಸಿಸಿದರು. ತನ್ನ ಬದುಕಿಗೆ ಒಂದು ನೆಲೆ ಕಂಡುಕೊಳ್ಳಲು ಉಕ್ರೈನ್‌ನ ಕೀವ್‌ನಿಂದ, ಜರ್ಮನ್, ಫ್ರಾನ್ಸ್ ಮೊದಲಾಗಿ ಯೂರೋಪ್‌ನ ರಾಷ್ಟ್ರಗಳಲ್ಲಿ ಸುತ್ತಿ ಕೊನೆಗೆ ಅಮೆರಿಕೆಗೆ ಹೋದ ಇವನು 1916ರಲ್ಲಿ ನ್ಯೂಯಾರ್ಕ್‌ನಲ್ಲಿ ಮರಣ ಹೊಂದಿದ. ಜಗತ್ತಿನ ಮಾನವತಾವಾದಿ ಲೇಖಕರಲ್ಲಿ ಒಬ್ಬನೆಂದು ಪ್ರಸಿದ್ಧ ಪಡೆದಿದ್ದ ಶೋಲೆಮ್ ಅಲ್‌ಶೆಮ್ 'ಕಸ್ರಿಲೆವ್ಕ' ಎಂಬ ಕಲ್ಪಿತ ಪೇಟೆಯನ್ನು ಆಧರಿಸಿದ ಕತೆಗಳಲ್ಲಿ ಜ್ಯೂಗಳ ಬದುಕಿನ ಹಲವು ಮುಖಗಳನ್ನು ನೀಡಿರುವಂತೆಯೇ, 'ತೇವ್ಯ' ಪಾತ್ರದ ಮೂಲಕ ತನ್ನ ಸಾಹಿತ್ಯದ ಹರಹಿಗೆ ಬೇರೊಂದು ಆಯಾಮವನ್ನು ಕೊಟ್ಟು, 'ಜಾತ್ರೆಯಿಂದ ಮರಳಿದವರು' ಕತೆಗಳಲ್ಲಿ ಇದನ್ನು ಇನ್ನೂ ವಿಸ್ತರಿಸಿದ್ದಾನೆ. ಮನುಷ್ಯ ಜೀವನದ ಅಂತ್ಯದಲ್ಲಿ ಕಂಡುಕೊಳ್ಳುವ ಜೀವನದ ಸತ್ಯವನ್ನೇ ಕೇಂದ್ರವಾಗಿಸಿಕೊಂಡ ಇವನ ಸಾಹಿತ್ಯ 30 ಸಂಪುಟಗಳಷ್ಟಿದೆ. ಯಿಡ್ಡಿಶ್ ಓದುಗರು ಮತ್ತು ವಿಮರ್ಶಕರು 'ಯಿಡ್ಡಿಶ್‌ನ ಮಾರ್ಕ್ ಟ್ವೈನ್' ಎಂದು ಕರೆಯುವಷ್ಟು ಖ್ಯಾತಿ ಪಡೆದಿದ್ದ ಇವನ ಕೀರ್ತಿಯನ್ನು 'ಇಂಗ್ಲಿಷ್‌ನ ಶೋಲೆಮ್ ಅಲ್‌ಶೆಮ್' ಎಂದು ಸ್ವತಃ

ಮಾರ್ಕ್ ಟ್ವೈನ್‌ನೇ ತನ್ನನ್ನು ಕರೆದುಕೊಂಡು ಇನ್ನಷ್ಟು ಹಿಗ್ಗಿಸಿದ. ನಡುರಾತ್ರಿಯ ಪ್ರಶಾಂತ ಮೌನದಲ್ಲಿ ಕುಡಿಯಲುಗದಂತೆ ಉರಿಯುವ ಮೋಂಬತ್ತಿಯ ಬೆಳಕಿನಲ್ಲಿ ತನ್ನ ಸೃಜನಶೀಲತೆಯನ್ನು ಸಾಕಾರಗೊಳಿಸುತ್ತಿದ್ದ ಶೋಲೊಮ್ ಅಲ್‌ಶೆಮ್ ಓದುಗರೊಂದಿಗೆ ಮುಖಾಮುಖಿಯಾಗಿ ನಿಂತಿರುವ ನಿರೂಪಣೆಯಲ್ಲಿಯೇ ಕಲೆಗಾರಿಕೆಯನ್ನು ತುಂಬಿ ಜಗತ್ತಿನ ಸಾಹಿತ್ಯದಲ್ಲಿ ಕಥಾ ಪ್ರಕಾರಕ್ಕೆ ತನ್ನದೇ ಆದ ಮುದ್ರೆಯನ್ನೊತ್ತಿದ್ದಾನೆ ]

*

"ನೀವು ಈಗ ಜಾತ್ರೆಗ್ಹೋಗ್ತಿದೀರಿ, ನಾವು ಜಾತ್ರೆಯಿಂದ ಮನೆಗ್ಬರ್ತಿದೀವಿ. ಈಗಾಗಲೆ ನಾನು ನನ್ನ ಅಳೂನ ಅತ್ತಿದೀನಿ, ನೀವು ಈಗ ಅಳೋದಕ್ಕೋಗ್ತಿದೀರಿ... ಆಯಿತು, ನಿಮಗಾಗಿ ಇಲ್ಲೆ ಒಂದಿಷ್ಟು ಜಾಗ ಮಾಡಿಕೊಡ್ತೀನಿ. ಸ್ವಲ್ಪ ಒತ್ತಿ ಕೂತುಕೊಳ್ಳಿ. ಈಗ ನಿಮಗೆ ಆರಾಮವಾಯ್ತಲ್ಲವೇ ?..."

"ಹ್ಞಂ...ತುಂಬಾ ಒಳ್ಳೆದಾಯ್ತು."

ಟ್ರೈನಿನಲ್ಲಿ ನನ್ನ ಹಿಂದೆ ಕುಳಿತಿದ್ದ ಇಬ್ಬರು ಪ್ರಯಾಣಿಕರು ಮಾತನಾಡುತ್ತಿದ್ದರು. ಒಬ್ಬ ಮಾತನಾಡುತ್ತಲೇ ಇದ್ದರೆ ಇನ್ನೊಬ್ಬ ಪ್ರತಿಧ್ವನಿಯಂತೆ ಆಗಾಗ ಒಂದೊಂದು ಮಾತು ಹೇಳುತ್ತಿದ್ದ.

"ನಾವಿಬ್ಬರೂ ಅಲ್ಲಿ ಜೊತೆಯಾಗಿಯೇ ಇದ್ದೆವು. ನಾನು, ವಯಸ್ಸಾದ ನನ್ನ ಹೆಂಡತಿ." ಮೊದಲಿನವನು ಹೇಳಿದ. "ಅವಳು ಇಲ್ಲೇ ಬರ್ತ್‌ನಲ್ಲಿ ಮಲಗಿದಾಳೆ. ಬಡಪಾಯಿ, ಸುಸ್ತಾಗಿದಾಳೆ. ಅಳೋಕೆ ನಮಗೇನೂ ಉಳಿದಿಲ್ಲ ಅನ್ನೊ ಹಾಗೆ ಅತ್ತಳು ಸ್ಮಶಾನದಲ್ಲಿ. ಸಮಾಧಿ ಮೇಲಿಯೇ ತನ್ನ ಮುಖ ಇಟ್ಕೊಂಡಿದ್ದಳು— ಅಲ್ಲಿಂದ ಅವಳನ್ನ ನೀವು ಬಲವಂತವಾಗಿ ಕರಕೊಂಡು ಬರೋಕೆ ಆಗ್ತಿರಲಿಲ್ಲ ! ನಾನವಳನ್ನ ಬೇಡಿಕೊಂಡೆ, 'ಎಲ್ಲದೂ ಮುಗಿಯ್ತಲ್ಲವೇ ? ನಿನ್ನ ಕಣ್ಣೀರು ಅವಳನ್ನ ಮತ್ತೆ ಬದುಕಿಸಿ ಕರಕೊಂಡು ಬರುತ್ತಾ ?' ನಾನು ಹೇಳಿದ ಮಾತನ್ನ ಕೇಳಿದಳೇನು ಅವಳು ? ಆದರೆ ಅಂಥದೊಂದು ದುರಂತ ನಡೆದಾಗ ನಾವೇನು ಮಾಡೋಕಾಗ್ತಿತ್ತು ! ಒಬ್ಬಳೇ ಒಬ್ಬಳು ಮಗಳು. ಒಂದು ಆಸ್ತಿ ಅನ್ನೋ ಹಾಗಿದ್ದಳು. ದೇವರು ಕರುಣಿಸಿರೋ ವರದಾನ ಅನ್ನೊ ಹಾಗೆ ಸುಂದರವಾಗಿದ್ದಳು. ಸರಳ ಸ್ವಭಾವದವಳು, ಹೈಸ್ಕೂಲು ಓದಿದ್ದಳು...ಇವಳು ಸತ್ತು ಎರಡು ವರ್ಷವಾಯಿತು. ಎಲ್ಲದೂ ಮರೆತುಹೋಗಿದೆ ಅಂತ ಯೋಚಿಸ್ತಿದೀರೇನೋ ನೀವು ? ಇಲ್ಲ !...ಆರೋಗ್ಯವಾಗಿ ಚೆನ್ನಾಗಿಯೇ ಇದ್ದಳು. ಅದನ್ನವಳು ತಾನೇ ಮಾಡಿಕೊಂಡಳು—ತನ್ನ ಸ್ವಂತ ಜೀವನ ಕೊನೆಯಾಗಿಸಿಕೊಂಡಳು..."

"ಇದೇನಾ ನಡೆದ ಸಂಗತಿ !"

ಅವರ ಮಾತುಕತೆಯಿಂದ ಅವರು ಮಾತನಾಡಿಕೊಳ್ಳುತ್ತಿರುವ ಜಾತ್ರೆಯ ವಿಷಯ ಯಾವುದೆಂದು ತಿಳಿಯಿತು. ಆಗ ಸೆಪ್ಟಂಬರ್ ತಿಂಗಳು. ಅದು ಜ್ಯೂಗಳ ಹೃದಯಕ್ಕೆ ತುಂಬಾ ಪ್ರಿಯವಾದ ದಿನಗಳ ಕಾಲ. ರೋಶ್ ಹಶೋನೊಗೆ ಮೊದಲಿನ

ವಾರಗಳಲ್ಲಿ ಸುತ್ತಿನ ಸೀಮೆಗಳಲ್ಲೆಲ್ಲಾ ಜನ್ಯಗಳು ಒಂದು ಪೇಟೆಯಿಂದ ಮತ್ತೊಂದು ಪೇಟೆಗೆ ಪ್ರಯಾಣ ಮಾಡುತ್ತಿದ್ದರು. ತಮ್ಮ ತಂದೆ–ತಾಯಿಯರು, ಅಕ್ಕ–ತಂಗಿಯರು, ಮಕ್ಕಳು ಮತ್ತು ಇತರೆ ಬಂಧುಬಾಂಧವರಿಗೆ ತಮ್ಮ ಗೌರವ ನೀಡಲು ದಿಕ್ಕಿಲ್ಲದ ತಾಯಂದಿರು, ಅನಾಥ ಹೆಣ್ಣುಮಕ್ಕಳು, ಒಬ್ಬಂಟಿಗರಾಗಿರುವ ಅಕ್ಕ–ತಂಗಿಯರು ಮತ್ತು ದುರದೃಷ್ಟದ ಹೆಂಗಸರುಗಳು ತಮಗೆ ಪ್ರೀತಿಪಾತ್ರರಾಗಿದ್ದವರ ಸಮಾಧಿಗಳ ಮೇಲೆ ಬಗ್ಗಿ ಬೀಳುತ್ತ ಒಂದಿಷ್ಟು ಹನಿ ಕಣ್ಣೀರು ಹನಿಸುತ್ತಿದ್ದರು. ತಮ್ಮೊಳಗಿನ ದುಃಖವನ್ನು ಹೊರಹಾಕಿಕೊಳ್ಳುತ್ತಿದ್ದರು. ಒಡೆದ ತಮ್ಮ ಆತ್ಮಗಳನ್ನು ಉಪಶಮನಮಾಡಿಕೊಳ್ಳುತ್ತಿದ್ದರು...

ನಾನು ಪ್ರವಾಸಿಯಾಗಿ ಹೋದದ್ದು ಅದೇ ಮೊದಲನೆಯ ವರ್ಷವಲ್ಲ. ಆದರೆ ಆ ಸೆಪ್ಟಂಬರ್‌ನಲ್ಲಿ ಕಂಡ ಇಂಥ ಒಳ್ಳೆಯ ಅಳುವವರ ಗುಂಪನ್ನು ಮತ್ತೆ ಕಂಡ ನೆನಪಾಗುತ್ತಿಲ್ಲ. ದೇವರ ಕೃಪೆಯಿಂದ ರೈಲು ರಸ್ತೆಗಳೂ ಹಣ ಮಾಡಿದ್ದವು. ಉದ್ದ ಮುಖದ, ಊದಿಕೊಂಡ ಕಣ್ಣುಗಳ, ಹೊಳಪಿನ ಮೂಗುಗಳ ಗಂಡಸರು ಮತ್ತು ಹೆಂಗಸರು ಎಲ್ಲಾ ಬೋಗಿಗಳಲ್ಲೂ ಭರ್ತಿಯಾಗಿ ತುಂಬಿರುತ್ತಿದ್ದರು. ಕೆಲವರು ಆಗತಾನೆ ಜಾತ್ರೆಗೆ ಹೋಗುತ್ತಿದ್ದರೆ ಮತ್ತೆ ಕೆಲವರು ಜಾತ್ರೆಗಳಿಂದ ಮರಳಿ ಬರುತ್ತಿದ್ದರು. ಹೊರಗಿನ ಶರದೃತುವಿನ ಘ್ರಾಣ ನಿಮ್ಮ ಹೃದಯದ ಅನುಭವಕ್ಕೆ ಲಭ್ಯವಾಗುತ್ತಿತ್ತು. ಮನೆ ಸೇರಲು ನಿಮಗೆ ಕಾತರವಾಗುತ್ತಿತ್ತು. ನೀವು ಮನೆಗಾಗಿ ಹಂಬಲಿಸುವಂತಾಗುತ್ತಿತ್ತು.

ಅವರಿಗೆ ಯಾವ ರೀತಿಯಲ್ಲಿಯೂ ನಾನು ನೆರವಾಗುವಂತಿರಲಿಲ್ಲ. ಇರಲಿ, ಅವರು ಮಾತಾಡಿಕೊಂಡ ಮಾತುಕತೆಯನ್ನು ಮುಂದುವರಿಸುತ್ತೇನೆ :

"ಈ ದುರಂತ ಈ ಕಾಲದ ದುರಂತಗಳ ಹಾಗಿದೆ ಅಂತ ಯೋಚಿಸ್ತಿದೀರೇನೋ ನೀವು ? ಕಪ್ಪು ಫೋಟೋಗಳು, ಕೆಂಪು ಬಾವುಟಗಳು, ಸೈಬೀರಿಯ ? ಸ್ವರ್ಗವೇ ಬೇಕಿಲ್ಲ ಇವರಿಗೆ !...ಇಷ್ಟಾದರೂ ದೇವರು ನಮ್ಮನ್ನ ಕಾಪಾಡಿದ್ದ, ನಾನೂ ಕಂಡಿದ್ದೆ ಇದನ್ನ ! ಇರಲಿ ಬಿಡಿ, ಇದಕ್ಕೆ ಒಂದು ಕಾರಣವೂ ಇದೆ. ನನಗಿದ್ದವಳು ಒಬ್ಬಳೇ ಮಗಳು. ದೇವರು ವರ ಕೊಟ್ಟಹಾಗಿದ್ದಳು. ಎಷ್ಟು ಸುಂದರವಾಗಿದ್ದಳು. ಸರಳ ಸ್ವಭಾವದವಳು. ಹೈಸ್ಕೂಲು ಓದಿದ್ದಳು !"

"ನಾನು ಅವಳಿಗೆ ಮಾಡಬೇಕಾದ್ದನ್ನೆಲ್ಲಾ ಮಾಡಿದ್ದೆ. ಅವಳು ಎಲ್ಲಿಗೆ ಹೋಗ್ತಾಳೆ, ಯಾರ ಜೊತೆ ಮಾತಾಡ್ತಾಳೆ, ಏನು ಹೇಳ್ತಾಳೆ, ಎಂಥ ಪುಸ್ತಕಗಳನ್ನ ಓದ್ತಾಳೆ ಅನ್ನೋದನ್ನೆಲ್ಲಾ ಗಮನಿಸ್ತಿದ್ದೆ. 'ನನ್ನ ಚಿನ್ನಾ', ನಾನು ಅವಳಿಗೆ ಹೇಳಿದೆ. 'ನೀನು ಪುಸ್ತಕಗಳನ್ನ ಓದೋದಾದರೆ ಸರಿಯಾಗಿರೋದನ್ನೇ ಓದತೀಯಾ ; ಆದರೂ ಇವು ಎಂಥವು ಅನ್ನೋದು ನನಗೂ ಗೊತ್ತಿರಲಿ. ಈಗ ಯಾವ ಪುಸ್ತಕ ಓದ್ತಿದೀಯಾ ನೀನು ?' ಇಂಥ ವಿಷಯಗಳು ನನಗೆ ಪೂರ್ತಿಯಾಗಿ ತಿಳಿದಿಲ್ಲ ಅನ್ನೋದು ನಿಜ. ಆದರೂ ಇಂಥವುಗಳ ಬಗ್ಗೆ ನನ್ನೊಳಗೆ ಒಂದು ಥರದ ಭಾವನೆಗಳಿದ್ದವು. ಯಾವುದೆ

ಪುಸ್ತಕವನ್ನಾದರೂ—ಅದು ಫ್ರೆಂಚ್ ಭಾಷೆಯಲ್ಲಿದ್ದರೂ—ಅದನ್ನ ನೋಡಿ, ಅದು ಯಾವ ಥರದ ಪುಸ್ತಕ ಅನ್ನೋದನ್ನ ನಿಮಗೆ ಹೇಳ್ತೀನಿ!"

"ಊಹಿಸಿಕೊಂಡು ಹೇಳ್ತೀರಿ!"

"ನನ್ನ ಮಗು ಬೆಂಕೀಲಿ ಆಡೋದು ನನಗೆ ಇಷ್ಟವಾಗ್ತಿರಲಿಲ್ಲ, ಹೆದರಿಕೆಯಾಗ್ತಿತ್ತು...ಆದರೆ ನಾನು ಬಲವಂತ ಮಾಡ್ತಿದ್ದೆ ಅಂತ ಭಾವಿಸಬೇಡಿ. ಸಭ್ಯನ ಹಾಗೆ ಇರ್‍ತಿದ್ದೆ. ಒಗಟಿನ ಹಾಗೆ ಹೇಳಿ ಅವಳಿಗೆ ಮಾಡಬಹುದಿದ್ದನ್ನೆಲ್ಲಾ ಮಾಡ್ತಿದ್ದೆ. 'ಮುದ್ದಿನ ಚಿನ್ನಾ' ನಾನು ಅವಳಿಗೆ ಹೇಳಿದ್ದೆ. 'ಗಾಲಿ ತನಗೆತಾನೆ ಹೇಗೆ ಉರುಳ್ತಿದೆ ನೋಡು. ಇದನ್ನ ನೀನೂ ನಿಲ್ಲಿಸೋಕೆ ಸಾಧ್ಯವಿಲ್ಲ. ನಾನೂ ನಿಲ್ಲಿಸೋಕೆ ಆಗೊಲ್ಲ...' ನಾನು ಅವಳ ಜೊತೆ ಮಾತಾಡ್ತಿದ್ದದ್ದೇ ಹೀಗೆ. ಇದಕ್ಕೆ ಅವಳು ಏನು ಹೇಳ್ತಿದ್ದಳು? ಒಂದು ಮಾತೂ ಇಲ್ಲ! ದೇವತೆ ಹಾಗೆ, ಪಾರಿವಾಳದ ಹಾಗೆ ಮೌನಿ...ಆಮೇಲೆ ದೇವರು ಸಹ ಏನು ಮಾಡಬಹುದಿತ್ತು? ಕೆಟ್ಟ ಕಾಲ ಉರುಳಿತ್ತು. ನಾವು ಉದ್ದಕ್ಕೂ ತೊಂದರೆಗಳಲ್ಲೇ ಬದುಕಿ ಬಂದಿದ್ದೆವು...ಕ್ರಾಂತಿಗಳು! ಸಂವಿಧಾನಗಳು! ಕಪ್ಪು ಫೋಷಾಗಳು, ಕೆಂಪು ಬಾವುಟಗಳು, ಕತ್ತರಿಸಿ ತೆಗೆದ ಉಣ್ಣೆ ತುಪ್ಪಟ, ಬಾಂಬ್‌ಗಳು ಹೀಗೆಯೇ ಇನ್ನೂ ಏನೇನೋ ಅನ್ನುವುದು ಆ ರಾಕ್ಷಸರಿಗೇ ಗೊತ್ತು! ಇಂಥ ವಿಷಯಗಳ ಕಾಲ ಮುಗಿದುಹೋಗಿತ್ತು ಅಂತ ತಿಳಿದುಕೊಳ್ಳಬಹುದು ನೀವು. ನಾನು ನನ್ನ ರಸಿಕತನವನ್ನ ಆಗಲೇ ಕಳೆದುಕೊಂಡಿದ್ದೆ. ನಾನು ಸರಿಯಾಗಿ ಪಡೆದುಕೊಂಡದ್ದು ಒಂದೇ ಅಲ್ಲವೇ? ಆದರೂ ಹೆದರಬೇಕಾದ್ದು ತುಂಬಾ ಇತ್ತು. ಒಬ್ಬಳೇ ಒಬ್ಬಳು ಮಗಳು. ದೇವರು ವರದಾನ ಕೊಟ್ಟಿರೋ ಹಾಗಿದ್ದಳು. ಸುಂದರವಾಗಿದ್ದಳು. ಸರಳ ಸ್ವಭಾವದವಳು. ಹೈಸ್ಕೂಲು ಓದಿದ್ದಳು!"

"ಏನು ನಡೆಯಿತು?"

"ದೊಡ್ಡ ಕತೇನ ಚಿಕ್ಕದಾಗಿ ಹೇಳ್ತೀನಿ...ದೇವರನ್ನ ಹೊಗಳಬೇಕು! ನಾವು ಅಂಥ ಭಾರಿ ತೊಂದರೆಗಳಲ್ಲೂ ಬದುಕಿ ಬಂದಿದ್ದೆವು. ಆಗ ದೇವರ ದಯದಿಂದ ಅವಳ ಮದುವೆ ಯೋಚನೆಗೆ ಶುರುಮಾಡಿದೆವು. ಒಂದು ವರ, ವರದಕ್ಷಿಣೆ? ಇದೇ ನನಗೆ ತೊಂದರೆ ಅನ್ನೊ ಹಾಗಿದ್ದದ್ದು. ಆ ದೇವರು ನಮಗಾಗಿ ಸರಿಯಾದ ಒಂದು ಗಂಡನ್ನ ಕಳಿಸಬೇಕಿತ್ತು! ಆಮೇಲೆ ಹುಡುಕಾಟ ಶುರುವಾಯ್ತು. ವರಸಾಮ್ಯ, ಹೊಂದಾಣಿಕೆ, ದಲ್ಲಾಳಿಗಳು, ವರಗಳು! ಆದರೆ ನನ್ನ ಮಗಳು ಮಾತ್ರ ಆಸಕ್ತಿನೇ ತೋರಿಸಲಿಲ್ಲ. ಅವಳಿಗೆ ಮದುವೆಯಾಗೋಕೆ ಇಷ್ಟವಿರಲಿಲ್ಲ ಅಂತ ಯೋಚಿಸ್ತಿದೀರೇನೋ ನೀವು? ಯಾರಿಗೆ ಗೊತ್ತು?...ಆಮೇಲೆ ಏನು ನಡೆಯ್ತು ಗೊತ್ತಾ? ಹೇಳ್ತಿನಿ ಕೇಳಿ,... ಅವಳು ಯಾಕೆ ಹಾಗಿದಾಳೆ ಅನ್ನೋದನ್ನ ಹುಡುಕಿದೆ. ಅವಳು ಒಂದು ಪುಸ್ತಕ ಓದ್ತಿದ್ದಳು—ಗುಟ್ಟಾಗಿ! ಒಬ್ಬಳೇ ಅಲ್ಲ, ಮೂರು ಜನ ಒಟ್ಟಿಗೆ ಓದತ್ತಿದ್ದರು. ಅವಳು, ಅವಳ ಇಬ್ಬರು ಗೆಳತಿಯರು. ಒಬ್ಬಳು ನಮ್ಮ ಸಿನಗಾಗ್‌ನ ಹಾಡುಗಾರನ ಮಗಳು—ಇವಳೂ ಅಂದವಾಗಿದ್ದಳು, ಹೈಸ್ಕೂಲು ಓದಿದ್ದಳು. ಇನ್ನೊಬ್ಬಳು

ಯಾರು ಗೊತ್ತೇ ?...ಯಾರೋ ಒಬ್ಬಳು. ಅ–ಷ್ಟೇ–ನೂ ಚೆನ್ನಾಗಿರಲಿಲ್ಲ. ದುಂಡು ಮುಖದ ತುಂಬ ಮೊಡವೆಗಳು, ಹೊಳಪೇ ಇಲ್ಲದ ಕಣ್ಣುಗಳು. ಒಂದಿಷ್ಟು ಚೆನ್ನಾಗಿ ಕಾಣಲಿ ಅಂತ ಬಂಗಾರದ ಕಡ್ಡಿ ಸುತ್ತಿರೋ ಕನ್ನಡಕ ಹಾಕಿಕೊಂಡಿರ್ತಿದ್ದಳು. ಬ್ರಹ್ಮನ ಅಸಹ್ಯದ ಸೃಷ್ಟಿ. ಇಷ್ಟು ಸಾಲದು ಅಂತ ಹಠಮಾರಿ ಬೇರೆ. ಇವಳಿಂದ ನೀವು ತಪ್ಪಿಸಿಕೊಳ್ಳೋಕೆ ಆಗ್ತಿರಲೇ ಇಲ್ಲ. ಇವರಿಬ್ಬರ ಹಿಂದೆ ಯಾವಾಗಲೂ ತೆವಳ್ತಿದ್ದಳು–ಹುಳದ ಹಾಗೆ! ಇವಳನ್ನ ನಾನು ಹುಳ ಅಂತ ಯಾಕೆ ಕರೆದೆ ಗೊತ್ತಾ ? ಹೇಳ್ತೀನಿ ಕೇಳಿ. ಜಗತ್ತಿನಲ್ಲಿ ಎಲ್ಲ ರೀತಿ ಜನಾನೂ ಇರ್ತಾರೆ. ಕೆಲವರು ಎತ್ತುಗಳ ಹಾಗೆ. ಕೆಲವರು ಕುದುರೆಗಳ ಹಾಗೆ. ಕೆಲವರು ನಾಯಿಗಳ ಹಾಗೆ. ಇನ್ನು ಕೆಲವರು ಹಂದಿಗಳ ಹಾಗೆಯೆ ಇರ್ತಾರೆ. ಇವಳು ಮಾತ್ರ ಹುಳದ ತರ. ಈಗ ನಿಮಗೆ ತಿಳಿಯಿತು ಅಲ್ಲವೇ ?"

"ಹೌದು, ಸ್ವಲ್ಪಮಟ್ಟಿಗೆ ತಿಳಿಯಿತು !"

"ಈ ಹುಳಕ್ಕೆ ತಾನು ಹೋಗೋ ದಾರೀಲಿ ಯಾವಾಗಲೂ ನನ್ನ ಮಗಳೇ ಯಾಕೆ ಸಿಕ್ಕೋದೋ ಗೊತ್ತಿಲ್ಲ. ಸಿನಗಾಗ್‌ನ ಹಾಡುಗಾರನ ಮಗಳ ಜೊತೆ ಇರ್ತಿದ್ದಳು. ಇವಳು ನಮ್ಮ ದಾಯಾದಿಗಳ ಮಗಳೇ. ಡಾಕ್ಟರೋ, ಲಾಯರ್ರೋ, ಏನೋ ಒಂದು ಆಗಬೇಕು ಅಂದುಕೊಂಡಿದ್ದು ಈ ರಾಕ್ಷಸಿಗೆ ಮಾತ್ರ ಗೊತ್ತಿತ್ತು. ಇವಳನ್ನ ನೋಡಿದಾಗ ನನಗೆ ಸಾವಿನ ದೇವತೆ ನೋಡಿದ ಹಾಗೆ ಆಗ್ತಿತ್ತು. ಮೊದಲಿನಿಂದಲೂ ಇವಳು ನನಗೆ ಹಿಡಿಸ್ತಿರಲಿಲ್ಲ. ಈ ಮಾತನ್ನ ನನ್ನ ಹೆಂಡತಿಗೂ ಹೇಳಿದ್ದೆ. ಆದರೆ ನನ್ನ ಹೆಂಡತಿ, 'ಎಂಥ ಸಣ್ಣತನದ ಭಾವನೆ ಇರಿಸಿಕೊಂಡಿದೀರಿ !' ಅಂದಿದ್ದಳು. ಆದರೂ ಇವಳ ಮೇಲೆ ನಾನು ಒಂದು ಕಣ್ಣು ಇಟ್ಟುಕೊಂಡಿದ್ದೆ. ನನ್ನ ಕಿವೀನ ತೆರಕೊಂಡು ಇರತಿದ್ದೆ. ಈ ಮೂವರು ಜನವೂ ಒಟ್ಟಿಗೆ ಓದೋದು, ಮಾತಾಡಿಕೊಳ್ಳೋದು, ಕುಳಿತುಕೊಳ್ತಿದ್ದದ್ದು, ಎಲ್ಲರಿಗೂ ಜ್ವರ ಬರ್ತಿದ್ದದ್ದು...

"ಒಂದು ಸಲ ಅನುಮಾನ ಬಂದು ಕೇಳಿದೆ, 'ನನ್ನ ಚಿನ್ನಾ, ನೀವು ಮೂರು ಜನವೂ ಒಟ್ಟಿಗೆ ಯಾವ ಪುಸ್ತಕ ಓದ್ತಿದೀರಿ. ಏನು ಕಾರ್ಯ ನಡೆಸ್ತಿದೀರಿ ?"

"'ಏನೂ ಇಲ್ಲ ಅಪ್ಪ. ಅದೊಂದು ಪುಸ್ತಕ, ಅಷ್ಟೆ'. ಅಂತ ಹೇಳಿದಳು ನನ್ನ ಮಗಳು."

"'ಹೌದೇ ! ಪುಸ್ತಕವಾ ! ಏನು ಪುಸ್ತಕ ಅದು ?' ನಾನು ಕೇಳಿದೆ."

"'ಎಂಥ ಪುಸ್ತಕ ಅಂತ ನಾನು ಹೇಳಿದರೂ ನಿನಗೆ ತಿಳಿಯುತ್ತಾ ?' ಅಂತ ಹೇಳಿದಳು."

"'ಯಾಕೆ ತಿಳಿಯೋಲ್ಲ ನನಗೆ ?' ಅಂದೆ ನಾನು. ಆಮೇಲೆ ನಕ್ಕು ಹೇಳಿದಳು. 'ಇದು ನೀನು ಹೆದರೋ ಅಂತ ಪುಸ್ತಕವಲ್ಲ ಅಪ್ಪ. ಇದು ಒಂದು ಸಾಮಾನ್ಯ ಪುಸ್ತಕ. ಇದರ ಹೆಸರು ಸನ್ಸ್. ಆರ್ಟ್ಸ್‌ಬಾಷಿ ಬರೆದಿರೋ ಕಾದಂಬರಿ.'"

"'ಆರ್ಜ್ ಬಾಷಿದಾ ?' ನಾನು ಅವಳಿಗೆ ಹೇಳಿದೆ. 'ಅವನು ಈ ಪೇಟೆಯಲ್ಲೇ ಇದ್ದ. ಅವನೊಬ್ಬ ಕುರುಡು ಮೇಷ್ಟ್ರು. ಅವನು ಸತ್ತು ಬಹಳ ಕಾಲವಾಯಿತು.'"

"ಅವಳು ಮತ್ತೆ ನಕ್ಕಳು. ನಾನು, 'ಅಯ್ಯೋ ನನ್ನ ಚಿನ್ನದಂತ ಮಗಳೇ, ನೀನು ನಗ್ತೀಯ, ಆದರೆ ನಿನ್ನ ಬಡಪಾಯಿ ಅಪ್ಪ ಒಳಗೇ ರಕ್ತ ಕಳಕೊಳ್ತಿದಾನೆ' ಅಂತ ಹೇಳಿಕೊಂಡೆ. ಹಳೇ ತೊಂದರೆಗಳು ಮತ್ತೆ ಶುರುವಾದವು ಅನ್ನೋ ಯೋಚನೆಯೂ ಬಂತು...ಆಮೇಲೆ ನಾನು ಆ ಪುಸ್ತಕವನ್ನ ಓದೋಕೆ ತಗೊಳ್ಳಲಿಲ್ಲ ಅಂತ ಯೋಚಿಸ್ತೀರೇನೋ ನೀವು ?"

"ಹೌದು ! ಖಂಡಿತವಾಗಿ !"

"ಖಂಡಿತವಾಗಿ ನಾನು ಓದೋಕೆ ತಗೊಳ್ಳಲಿಲ್ಲ...ಆದರೆ ಬೇರೆ ಯಾರಾದರೂ ಇದನ್ನ ನನಗಾಗಿ ಓದಲಿ ಅಂತ ತಗೊಂಡೆ. ನನ್ನ ಅಂಗಡೀಲಿ ಪ್ರಾಯದ ಹುಡುಗನೊಬ್ಬ ಗುಮಾಸ್ತನಾಗಿ ಕೆಲಸ ಮಾಡ್ತಿದ್ದ. ತುಂಬಾ ಚೆನ್ನಾಗಿದ್ದ, ರಷ್ಯನ್ ಭಾಷೆಯನ್ನ ಪ್ರೊಫೆಸರ್‌ಗಳ ಹಾಗೆ ಓದುತಿದ್ದ...ಒಂದು ದಿನ ಸಾಯಂಕಾಲ ನನ್ನ ಮಗಳ ರೂಮಿನಿಂದ ಈ ಪುಸ್ತಕವನ್ನ ಯಾರಿಗೂ ಕಾಣದ ಹಾಗೆ ತಗೊಂಡು ಬಂದು ಈ ಗುಮಾಸ್ತನಿಗೆ ಕೊಟ್ಟೆ. 'ಇಲ್ಲಿ ನೋಡು ಬೇರೆಲ್, ಇದನ್ನ ಪೂರ್ತಿ ಓದು. ನಾಳೆ ಈ ಪುಸ್ತಕ ಯಾವ ತರದ್ದು ಅಂತ ಹೇಳು.' ಅಂತ ಹೇಳಿದೆ. ಅವತ್ತು ಇಡೀ ರಾತ್ರಿ ನಾನು ಹೊದಿಕೆ ಹೊದ್ದುಕೊಳ್ಳದ ಹಾಗೆ ಕಳೆದೆ. ಮರುದಿವಸ ಬೆಳಿಗ್ಗೆ ಅವನು ಕೆಲಸಕ್ಕೆ ಬಂದಾಗ ಅವನ ಕೈ ಹಿಡಕೊಂಡು ಕೇಳಿದೆ, 'ಬೇರೆಲ್, ಆ ಪುಸ್ತಕ ಹೇಗಿದೆ ?' ಅವನು ಹೇಳಿದ, 'ಎಂಥ ಪುಸ್ತಕ ಅದು !' ಅವನ ಕಣ್ಣುಗಳು ಮುಖದಿಂದ ಉದುರಿ ಬೀಳೋ ಹಾಗಿದ್ದವು. 'ರಾತ್ರಿಯೆಲ್ಲಾ ನಾನು ಮಲಗಲೇ ಇಲ್ಲ. ನನ್ನ ಕಣ್ಣೀರನ್ನ ತಡೆದುಕೊಳ್ಳೋಕೆ ಆಗಲಿಲ್ಲ !' ಅಂತ ಹೇಳಿದ."

"'ಇಷ್ಟೇನಾ ? ಅದು ಏನು ಪುಸ್ತಕ ಅಂತ ಪೂರ್ತಿ ಹೇಳು !' ಅಂತ ಕೇಳಿದೆ. ಆಮೇಲೆ ಬೇರೆಲ್ ನನಗೆ ಈ ಕತೆ ಹೇಳಿದ...ನಾನಿದನ್ನ ನಿಮಗೆ ಹೇಗೆ ಹೇಳಲಿ ? ಇದು ತಿಳುವಳಿಕೆ ಇಲ್ಲದೆ ನಡದಿರೋ ಅಂಥದು." ಈ ಕತೆ ಕೇಳಿ :

"ಭೀಮನ ಹಾಗಿದ್ದ ಒಬ್ಬ ರಷ್ಯನ್ ಇದ್ದ, ಸನ್ನಿ ಅಂತ. ಇವನು ಯಾವಾಗಲೂ ವಿಸ್ಕಿ ಕುಡೀತಿದ್ದ, ಹುಳಿ ಉಪ್ಪಿನಕಾಯಿ ತಿನ್ನಿದ್ದ ! ಇವನಿಗೆ ಲೀದ ಅನ್ನೋ ತಂಗಿಯಿದ್ದಳು. ಇವಳು ಒಬ್ಬ ಡಾಕ್ಟರನ್ನ ಪ್ರೀತಿಸಿದ್ದಳು. ಆದರೆ ಮಿಲಿಟರಿ ಆಫೀಸರ್ ಜೊತೆ ಇದ್ದ ಒಂದು ರೀತಿ ಸಂಬಂಧದಿಂದ ಗರ್ಭಿಣಿಯಾದಳು. ಇಲ್ಲಿ ಒಬ್ಬ ವಿದ್ಯಾರ್ಥಿಯೂ ಇದ್ದ, ಯೂರ ಅಂತ. ಇವನು ಕ್ರಾಸವಿತ್ಸ ಅನ್ನೋ ಸ್ಕೂಲ್ ಟೀಚರ್ ಒಬ್ಬಳನ್ನ ಪ್ರೀತಿಸ್ತಿದ್ದ. ಇವಳು ಒಂದು ದಿನ ಸಾಯಂಕಾಲ ದೋಣಿಯಲ್ಲಿ ಹೋದಳು—ತನ್ನ ಗೆಳೆಯನ ಜೊತೆ ಹೋದಳು ಅಂತ ಯೋಚಿಸ್ತಿದೀರೇನೋ ನೀವು ? ಊಹ್ಞೂಂ ! ಇವಳು ಆ ಕುಡುಕ ಸನ್ನಿ ಜೊತೆ ಹೋಗಿದ್ದಳು !"

"'ಇಷ್ಟೇನಾ ?' ಅಂತ ಕೇಳಿದೆ ನಾನು."

"'ಒಂದು ನಿಮಿಷ ಇರಿ.' ಅಂದ ಬೇರೆಲ್ ಹೇಳಿದ. 'ಇಷ್ಟೇ ಅಲ್ಲ. ಇಲ್ಲಿ ಇನ್ನೊಬ್ಬ ಮೇಷ್ಟ್ರು ಸಹ ಇದ್ದ. ಇವಾನ್ ಅಂತ. ಈ ಇವಾನ್ ಒಂದು ದಿನ ಕುಡುಕನ ಜೊತೆಯಲ್ಲಿ ಹೋದ. ಬತ್ತಲೆ ಮೈಯಲ್ಲಿ ಸ್ನಾನ ಮಾಡ್ತಿದ್ದ ಹುಡುಗಿಯರನ್ನ ನೋಡಿದ.'"

"'ಏನು, ಏನಾಯ್ತು ?' ನಾನು ಕೇಳಿದೆ. 'ಇದು ಹೀಗೆ ಎಲ್ಲಿಗೆ ಹೋಗಿ ತಲುಪುತ್ತೆ ? ಹೀಗಾಗೋದಕ್ಕೆ ಏನು ಕಾರಣ ?'"

"'ಇಷ್ಟೆಲ್ಲಾ ಆಗೋಕೆ ಏನು ಕಾರಣವೆಂದರೆ', ಆ ಬೇರೆಲ್ ಹೇಳಿದ. 'ಈ ಕುಡುಕ ಸನ್ನಿಗೆ ಒಂದು ಚಟ ಇತ್ತು—ಇವನು ಕುದುರೆ ಹಾಗೆ ಅರಚತಿದ್ದ. ಒಂದು ದಿವಸ ತನ್ನ ಸ್ವಂತ ತಂಗಿ ಲೀದ ಜೊತೆ ಮನೆಗೆ ಬಂದ ಇವನು...'"

"'ನರಕಕ್ಕೆ ಹೋಗಲಿ ಇವನು.' ನನಗೆ ಸಿಟ್ಟು ಬಂದಿತ್ತು. 'ಇಷ್ಟೇನಾ ಈ ಕುಡುಕನ ಕತೆ ? ಮುಂದೆ ಏನಾಯ್ತು ಹೇಳು ? ಇದು ಹೇಗೆ ಮುಗಿಯುತ್ತೆ ?' ಅಂತ ಕೇಳಿದೆ."

"'ಇದು ಹೇಗೆ ಮುಗಿಯುತ್ತೆ ಅಂದರೆ!' ಬೇರೆಲ್ ಹೇಳಿದ. 'ಮಿಲಿಟರಿ ಆಫಿಸರ್ ತನ್ನನ್ನ ತಾನು ಶೂಟ್ ಮಾಡಿಕೊಳ್ಳುತಾನೆ. ಆ ವಿದ್ಯಾರ್ಥಿಯೂ ಶೂಟ್ ಮಾಡಿಕೊಳ್ಳತಾನೆ. ಕ್ರಾಸವಿತ್ಸ ವಿಷ ಕುಡಿಯುತಾಳೆ. ಆಮೇಲೆ, ಈ ಪುಸ್ತಕದಲ್ಲಿ ಒಬ್ಬ ಜ್ಯೂ ಇದಾನೆ, ಸೊಲೊವಿತ್ಸಿಕ್ ಅಂತ. ಇವನು ನೇಣು ಹಾಕಿಕೊಳ್ಳತಾನೆ.'"

"'ನೀನೂ ನೇಣು ಹಾಕಿಕೋ ಹೋಗು. ಅವರ ಜೊತೆ ನೀನೂ ನೇಣು ಹಾಕಿಕೋ ಹೋಗು.' ಅಂತ ಹೇಳಿದೆ ನಾನು ತಾಳ್ಮೆ ಕಳೆದುಕೊಂಡು. 'ಯಾಕೆ ಹೀಗೆ ಹೇಳತಿದೀರಿ. ಇದರಲ್ಲಿ ನನ್ನ ತಪ್ಪೇನಿದೆ ?' ಅಂತ ಕೇಳಿದ ಬೇರೆಲ್. 'ತಪ್ಪು ನಿನ್ನದಲ್ಲ, ಆ ಆರ್ಟ್ಸಿ ಬಾಷಿದು' ಅಂತ ಹೇಳಿದೆ. ಬೇರೆಲ್‌ನಿಗೆ ನಾನು ಹೀಗೆ ಹೇಳಿದರೂ ಆ ಕೊಳಕು ಮನುಷ್ಯನ ಬಗ್ಗೆ ಯೋಚಿಸ್ತಿದ್ದೆ. ಇವನನ್ನ ಯಮದೂತರು ಹಿಡಕೊಂಡು ಹೋಗಿದ್ದರು. ಒಂದು ಸಲ ನನಗೆ ಕಂಡಿದ್ದ ಈ ದೂತರಿಗೆ ಒಂದ ಪಕ್ಕಕ್ಕೆ ಕರಕೊಂಡು ಹೋಗಿ ಏನು ಹೇಳಿದ್ದೆ ಅಂದರೆ ?"...

"ಏನು ! ನೀವು ಹೀಗೆ ಮಾಡಿದ್ದಿರೇನು ?"

"ಹೌದು ! ಆಮೇಲೆ ನಾನು ಆ ದೂತರಿಗೆ ಹೇಳಿದ್ದೆ, 'ಇಲ್ನೋಡಿ ! ಈ ಭೂಮಿ ಮೇಲೆ ಎಲ್ಲಾದರೂ ಕೆಟ್ಟವರು ಕಂಡರೆ ಅವರನ್ನ ಹಿಡಕೊಂಡು ಹೋಗಿ."

"'ಕೆಟ್ಟವನೇನು ?' ಅಂದ ಬೇರೆಲ್ ಆಮೇಲೆ ತನ್ನ ಕನ್ನಡಕ ತಕೊಂಡು ನನ್ನನ್ನ ನೋಡ್ತಾ ಕೇಳಿದ. 'ಯಾರು ಕೆಟ್ಟವರು, ಯಾವುದು ಕೆಟ್ಟದು ?'"

"'ಈ ಆರ್ಟ್ಸಿ ಬಾಷಿ ಕತೆ. ಆ ಕುಡುಕ ಸನ್ನಿ.' ನಾನು ಹೇಳಿದೆ."

"'ಆ ಸನ್ನಿ ಕುಡುಕನಲ್ಲ' ಅಂದ ಬೇರೆಲ್."

"'ಹಾಗಿದ್ದರೆ ಏನು ?' ಅಂತ ಕೇಳಿದೆ. ಏನು ಅಂತ ತಿಳಿದುಕೊಳ್ಳಬೇಕು ಅನ್ನೋ ಆಸಕ್ತಿಯಿಂದ ಹೀಗೆ ಕೇಳಿದ್ದೆ."

"'ಆ ಸನ್ನಿ ಹೀರೋ. ನಾಯಕ.' ಅಂತ ಹೇಳಿದ ಪೇರೆಲ್."

"'ಆ ನಾಯಕ ಏನು ಮಾಡ್ತಾನೆ? ಬ್ರಾಂದೀಯನ್ನ ಟೀ ಲೋಟಗಳಲ್ಲಿ ಕುಡೀತಾನೆ. ಹುಳಿ ಉಪ್ಪಿನಕಾಯಿ ತಿನ್ತಾನೆ. ಕುದುರೆಗಳ ಹಾಗೆ ಅರಚ್ತಾನೆ ಹೌದಲ್ಲವೇ !' ಅಂತ ಕೇಳಿದೆ ನಾನು."

"ಪೇರೆಲ್‌ಗೆ ಸಿಟ್ಟು ಬಂದಿತ್ತು. ಹೊರಗೆ ತಕ್ಕೊಂಡಿದ್ದ ಕನ್ನಡಕವನ್ನ ಕೈಯಲ್ಲೇ ಹಿಡಕೊಂಡಿದ್ದ. ಕೆಂಪುಗಟ್ಟಿಕೊಂಡಿದ್ದ ಕಣ್ಣುಗಳಿಂದ ನನ್ನನ್ನ ನೋಡ್ತಾ ಹೇಳಿದ. 'ಅವನು ಕುದುರೆ ಹಾಗೆ ಅರಚೋ ನಾದವನ್ನ ನೀವು ಯಾವಾಗಲಾದರೂ ಕೇಳಿದಿರಾ ಅಂಕಲ್ ? ಕೇಳಿದ್ದರೂ ನಿಮಗೆ ಆ ಮಾತಿನ ಪದಗಳು ಗೊತ್ತಾಗಿಲ್ಲ. ಸನ್ನಿ ಪ್ರಕೃತಿ ದತ್ತವಾದ ಸ್ವಭಾವಗಳ ಮನುಷ್ಯ ! ಅವನೊಬ್ಬ ಸ್ವತಂತ್ರ ಮನುಷ್ಯ ! ಅವನಿಗೆ ಏನು ಅನ್ನಿಸ್ತಿತ್ತು ಅದನ್ನ ಹೇಳ್ತಿದ್ದ. ಏನು ಮಾಡಬೇಕು ಅನ್ನಿಸ್ತಿತ್ತೋ ಅದನ್ನ ಮಾಡ್ತಿದ್ದ.' ಆ ಪೇರೆಲ್ ಹೀಗೆ ಏನೇನನ್ನೋ ಹೇಳ್ತಾ ಗಾಳೀಲಿ ಕೈ ಬೀಸಿದ. ಸ್ವಾತಂತ್ರ್ಯ, ಪ್ರೀತಿ ಅಂದ. ಮತ್ತೆ ಪ್ರೀತಿ ಅಂತ ಹೇಳಿ ಪಾರಿವಾಳದ ಹಾಗಿರೋ ತನ್ನ ಎದೆಗೂಡಿನಿಂದ ಏನನ್ನೋ ತೆಗೆದ ಹಾಗೆ ಮಾಡಿದ. ಕೈಗಳನ್ನ ಯಾವು ಯಾವದೋ ಭಂಗಿಗಳಲ್ಲಿ ನಿಲ್ಲಿಸಿಕೊಂಡು ಬೋಧನೆ ಮಾಡೋಕೆ ಬರೋರ ಭಾಷೆ ಬಳಸಿದ."

"ಅವನ ಎದುರಿಗೆ ನಿಂತುಕೊಂಡಿದ್ದ ನಾನು ಯೋಚಿಸಿದೆ, 'ಸ್ವರ್ಗದಲ್ಲಿರೋ ನನ್ನ ತಂದೆಯೇ, ಏನಿದು, ಅರ್ಥವಿಲ್ಲದ ಮಾತುಗಳನ್ನ ಹೇಳ್ತಿದಾನೆ ಇವನು ? ಇವನ ಕೊರಳಪಟ್ಟಿ ಹಿಡಕೊಂಡು ಬಾಗಿಲಿನಿಂದ ಹೊರಗೆ ಎತ್ತಿ ಎಸೆದರೆ ತನ್ನ ಬಾಯಿ ಮುಚ್ಚಿಕೊಂಡು ಸುಮ್ಮನಾಗ್ತಾನೆ ಅಲ್ಲವೇ ?...ಈ ವಿಷಯಗಳ ಬದಲಿಗೆ ಇವನು ಬಾಂಬ್‌ಗಳ ವಿಷಯ ಮಾತಾಡಿದ್ದರೆ ಎಷ್ಟು ಚೆನ್ನಾಗಿರ್ತಿತ್ತು. ನನಗಿದ್ದ ಒಬ್ಬಳೇ ಒಬ್ಬಳು ಮಗಳು, ಕಣ್ಣೊಳಗಿನ ಗುಡ್ಡೆ ಹಾಗೆ ಇರೋಳನ್ನ ಬಾಂಬ್‌ಗಳಿಂದ ನಾನು ಕಳೆದುಕೊಂಡರೂ ನನ್ನ ಹೆಂಡತಿ ಜೊತೆ ನನ್ನ ವ್ಯಾಪಾರ, ಮನೆಗಳನ್ನೆಲ್ಲಾ ಮಾರಿ ಕೊಂಡು ಬೇರೆ ಪೇಟೆಗೆ ಹೋಗಿ ನನ್ನ ದುಃಖ, ಬೇಸರಗಳನ್ನ ನುಂಗಿಕೊಳ್ಳತಿದ್ದೆ. ಆದರೆ ಇದೆಲ್ಲಾ ಹೇಗೆ ಶುರುವಾಯಿತು. ಹೇಗೆ ಶುರುವಾಗಿ ಎಲ್ಲಿಗೆ ಬಂತು ಅನ್ನೋದನ್ನ ನಿಮಗೆ ಸರಿಯಾಗಿ ಹೇಳ್ತೀನಿ."

"ಇದು ಶುರುವಾದದ್ದು ಕ್ರಾಂತಿ ನಡೆದ ಕಾಲದಲ್ಲಿ. ಈ ಕ್ರಾಂತಿ ಶುರುವಾದಾಗ ಇದು ಜ್ಯೂಗಳನ್ನ ಮತ್ತೊಂದು ಹೆದರಿಕೆಯಲ್ಲಿ ಮುಳುಗಿಸಿ ಕೊನೆಯಾಗುತ್ತೆ ಅಂತ ಭಯಪಟ್ಟಿದ್ದೆವು. ಆದರೆ ದೇವರು ದಯ ತೋರಿಸಿದ್ದ. ಪವಾಡವೇ ನಡೆದ ಹಾಗಿತ್ತು. ಕೆಟ್ಟತನ ದೂರವಾಗಿತ್ತು. ದೂರದ ಫ್ರೆಂಚ್‌ರ ದೇಶದಿಂದ ಸೈನಿಕರ

ದಂಡುಗಳು ಬಂದಿದ್ದವು. ಎಲ್ಲ ತಣ್ಣಗಾಗಿ ಶಾಂತವಾಗಿತ್ತು. ಆದರೆ ಇದರ ಜೊತೆ ಆ ಸೈನಿಕರಿಂದ ಪೇಟೆ ಜೀವನದಲ್ಲಿ ಬೆಳವಣಿಗೆಯಾಗಿತ್ತು. ಎಂಥ ಸಣ್ಣ ಪೇಟೆಗಳಲ್ಲಿ ನೋಡಿದರೂ ಸೈನಿಕರ ಜೊತೆ ಡಾಕ್ಟರ್‌ಗಳು, ಆಫೀಸರ್‌ಗಳು, ಪೇದೆಗಳು, ಕಮಾಂಡರ್‌ಗಳು ಹೀಗೆ ನಮಗೆ ಹೇಳೋಕೆ ಬಾರದ ಯಾರುಯಾರೋ ಬಂದಿದ್ದರು ಅಲ್ಲವೇ?"

"ಹೌದು! ಹೌದು!"

"ಆದರೆ ಮುಂದೆ ನಡೆದದ್ದನ್ನ ಹೇಳ್ತೀನಿ ಕೇಳಿ. ಸಿನಗಾಗ್‌ನ ಹಾಡುಗಾರನ ಮಗಳು ಒಬ್ಬ ಆಫೀಸರ್‌ನ ಪ್ರೀತಿಯಲ್ಲಿ ಬಿದ್ದಳು. ಅವನನ್ನ ಮದುವೆಯಾಗೋಕೆ ಇವಳು ಮತಾಂತರ ಹೊಂದಬಹುದೇನೋ? ಅಂತಲೂ ತೀರ್ಮಾನಿಸಿಕೊಂಡಿದ್ದರು. ನಮ್ಮ ಪೇಟೆಯಲ್ಲಿ ಏನು ನಡೆಯಿತು ಅನ್ನೋದನ್ನ ನೀವೇ ಊಹಿಸಿಕೊಳ್ಳಿ. ಆದರೆ ಇದರಲ್ಲಿ ಯೋಚನೆ ಮಾಡೋ ಅಂಥದೇನೂ ಇರಲಿಲ್ಲ. ಹಾಡುಗಾರನ ಮಗಳು ಮತಾಂತರ ಹೊಂದಲಿಲ್ಲ, ಆಫೀಸರ್‌ನನ್ನೂ ಮದುವೆಯಾಗಲಿಲ್ಲ. ಯಾಕೆ ಅಂದರೆ ಕ್ರಾಂತಿ ಮುಗಿದು, ಬಂದಿದ್ದ ದಂಡು ವಾಪಸ್ಸು ಹೋಯಿತು. ಹೊರಡೋ ತರಾತುರಿಯಲ್ಲಿ ಈ ಆಫೀಸರ್ ತನ್ನನ್ನ ತುಂಬಾ ಪ್ರೀತಿಸ್ತಿದ್ದವಳಿಗೆ ಹೇಳಿ ಹೋಗೋದಕ್ಕೆ ಬರಲಿಲ್ಲ...ಆದರೆ ಈ ಹುಡುಗಿ ಮರೆಯಲಿಲ್ಲ. ಅವಳ ಅಪ್ಪ–ಅಮ್ಮ ದುಃಖದಲ್ಲಿ ಮುಳುಗಿದ್ದರು. ಆಗ ಏನು ನಡೆಯಿತು ಅನ್ನೋದನ್ನ ನೀವು ಊಹಿಸಿಕೊಳ್ಳಿ. ಇಡೀ ಪೇಟೆ ಮಾತಾಡಿಕೊಳ್ತಿತ್ತು: ಎಲ್ಲಿ ನೋಡಿದರೂ, ಯಾರ ಬಾಯಲ್ಲಿ ನೋಡಿದರೂ, 'ಹಾಡುಗಾರನ ಮಗಳು, ಹಾಡುಗಾರನ ಮಗಳು.' ಕೆಟ್ಟ ಬಾಯಿಗಳಿಗಂತೂ ಬಿಡುವಿರಲಿಲ್ಲ. ಯಾರೋ ಒಬ್ಬರು ಹುಡುಗಿ ಹತ್ತಿರಕ್ಕೆ ಸೂಲಗಿತ್ತಿಯನ್ನೂ ಕಳಿಸಿದ್ದರು. ಇನ್ನು ಕೆಲವರು ಇವಳ ಅಪ್ಪನ ಹತ್ತಿರ, 'ಮಗೂಗೆ ಏನು ಹೆಸರು ಇಡ್ತೀರ?' ಅಂತಲೂ ಕೇಳಿದ್ದರು. ಆದರೆ ಇದೆಲ್ಲಾ ಸುಳ್ಳುಸುದ್ದಿಯಾಗಿತ್ತು. ಒಂದು ಸಣ್ಣ ಪೇಟೆಯಲ್ಲಿ ಉದ್ದದ ನಾಲಿಗೆಗಳು ಎಂಥ ಒಡಕು ಹುಟ್ಟಿಸುತ್ತೆ ಎನ್ನುವುದು ನಿಮಗೆ ತಿಳಿದಿದೆಯಲ್ಲವೇ?"

"ಹೌದು, ಗೊತ್ತಿದೆ!"

"ಓ...ಈ ಮಾತುಗಳೆಲ್ಲಾ ಎಷ್ಟು ಮರುಕ ಹುಟ್ಟಿಸೋ ಹಾಗಿದ್ದವು! ಆದರೆ ನಾನು ಹಾಡುಗಾರನ ಎದುರಿಗೆ ಒರಟಾಗಿ ನಡೆದುಕೊಂಡೆ. ಯಾಕೆ ಅಂದರೆ—ಇದೆಲ್ಲಾ ನಿಮಗೆ ಗೊತ್ತಿದೆಯಲ್ಲವೇ? ನನ್ನ ಮಗಳಿಗೆ ನಾನು ಎಚ್ಚರದ ಮಾತು ಹೇಳಿದ್ದೆ. ಈ ಹುಡುಗಿಯರಿಬ್ಬರೂ ಎಷ್ಟೇ ಚೆನ್ನಾಗಿದ್ದರೂ ಅಲತ್ತಿನಿಂದ ಇವಳು ಆ ಹುಡುಗಿ ಜೊತೆ ಇದ್ದ ಸಂಬಂಧವನ್ನ ಬಿಡಲಿ ಅಂತ ಹಾಗೆ ಹೇಳಿದೆ—ಇಷ್ಟು ಹೇಳಿದ ಮೇಲೆ ಇನ್ನೇನು ಉಳಿದಿತ್ತು. ನನಗಿದ್ದವಳು ಒಬ್ಬಳೇ ಮಗಳು. ಒಬ್ಬ ತಂದೆ ಮಗಳಿಗೆ

ಕೊಡಬೇಕಾದ ಗೌರವವನ್ನ ಕೊಡ್ತಿದ್ದೆ ! ಆದರೆ ಇವಳು ಗುಟ್ಟಾಗಿ ತನ್ನ ಗೆಳತಿಯನ್ನ ನೋಡ್ತಿರೋದು ಹೇಗೆ ಗೊತ್ತಾಗಬೇಕು ನನಗೆ ? ಈ ವಿಷಯ ನನಗೆ ತಿಳಿಯುವ ಸಮಯಕ್ಕೆ ಎಲ್ಲಾ ಮುಗಿದಿತ್ತು..."

ಇದೇ ಹೊತ್ತಿಗೆ ಘಟ್ಟನೆ ಯಾರೋ ನನ್ನ ಹಿಂಭಾಗದಲ್ಲಿ ಕೆಮ್ಮಿದರು, ನಿದ್ದೆಯಲ್ಲಿಯೇ ನಿಟ್ಟುಸಿರಿಟ್ಟರು. ಕತೆ ಹೇಳುತ್ತಿದ್ದವನು ಮೌನ ತಾಳಿದ. ಕೆಲವು ನಿಮಿಷಗಳ ನಂತರ ಮೊದಲಿನ ದನಿಯನ್ನು ಇಳಿಸಿ ಮೆಲುದನಿಯಲ್ಲಿ ಕತೆಯನ್ನು ಮುಂದುವರಿಸಿದ.

"ಆಗ ರೋಣ್ ಹಪೋನೋಗೆ ಒಂದು ವಾರವಿತ್ತು. ನಿನ್ನೆ ತಾನೆ ನಡದಿರೋ ಹಾಗೆ ಎಲ್ಲರೂ ನೆನಪಿನಲ್ಲಿದೆ. ನಮ್ಮ ಸಿನಗಾಗ್‌ನ ಹಾಡುಗಾರನಲ್ಲೂ ನೀವು ಇಂಥ ನೆನಪನ್ನು ಕಾಣಬಹುದು. ಅವನ ಹತ್ತಿರ ಇದನ್ನೆಲ್ಲಾ ಕೇಳಿದರೆ ಬಿಕ್ಕಳಿಸಿ ಬಿಡ್ತಾನೆ. ಮರುಕ ಹುಟ್ಟಿಬರುತ್ತೆ. ಅವನ ಕೊರಗಂತೂ ಕಲ್ಲನ್ನೂ ಕರಗಿಸೋ ಹಾಗಿರುತ್ತೆ. ನಾನು ಆಗ ಹೀಗೆಲ್ಲಾ ಮಾಡಿದ್ದನ್ನ ಅವನು ಹೇಗೆ ಸಹಿಸಿಕೊಂಡ ಅನ್ನೋದು ಆ ದೇವರಿಗೇ ಗೊತ್ತು. ಎಲ್ಲಾ ಈ ಹೊಸಗಾಲದ ಮಕ್ಕಳಿಂದ ! ಇವರ ಅಪ್ಪ-ಅಮ್ಮಂದಿನ ಬಗ್ಗೆ ಕರುಣೆ ಮೂಡುತ್ತೆ...ಇರಲಿ ಮರುದಿವಸ ಬೆಳಿಗ್ಗೆ ಸಿನಗಾಗ್‌ನಿಂದ ಮನೆಗೆ ಹೋಗಿ ಆತುರವಾಗಿ ತಿಂಡಿ ತಿಂದೆ, ಬೀಗದ ಕೀಗಳ ಗೊಂಚಲನ್ನು ತಗೊಂಡು ನೇರವಾಗಿ ಮಾರ್ಕೆಟ್‌ಗೆ ಹೋಗಿ ಅಂಗಡಿ ಬಾಗಿಲು ತೆಗೆದೆ. ಬೇರೆಲ್ ಬರೋದನ್ನ ಕಾಯ್ತಾ ಕುಳಿತೆ. ಅರ್ಧಗಂಟೆಯಾಯ್ತು, ಒಂದುಗಂಟೆಯಾಯ್ತು. ಬೇರೆಲ್‌ನೂ ಇಲ್ಲ, ಗುಮಾಸ್ತನೂ ಇಲ್ಲ...ಕೊನೆಗೆ ಅವನು ಬರ್‍ತಿರೋದು ಕಾಣಿಸ್ತು. 'ಯಾಕಿಷ್ಟು ತಡವಾಯ್ತು ಬೇರೆಲ್ ?' ಅಂತ ಕೇಳಿದೆ. 'ನಾನು ಸಿನಗಾಗ್‌ನ ಹಾಡುಗಾರನ ಮನೆಗೆ ಹೋಗಿದ್ದೆ.' ಅಂದ ಬೇರೆಲ್, 'ಹೈಕಾಳಿಗೆ ಏನಾಗಿದೆ ಅನ್ನೋದನ್ನ ಕೇಳಿಲ್ಲವೇ ?' ಅಂತ ಕೇಳಿದ ನನ್ನನ್ನ. 'ಏನಾಯ್ತು ಹೈಕಾಳಿಗೆ ?' ಅಂದೆ. 'ಅವಳು ವಿಷ ಕುಡ್ಡಿದಾಳೆ' ಅಂದ."

"ನಾನೂ ಇದನ್ನ ಊಹಿಸಿದ್ದೆ."

"ಇದನ್ನ ಕೇಳಿದ ತಕ್ಷಣ ನಾನು ನೇರವಾಗಿ ಮನೆಗೆ ಹೋದೆ. ಇದನ್ನ ಕೇಳಿದರೆ ಏತ್ಕ ಏನು ಹೇಳ್ತಾಳೆ ? ಅಂತ ಯೋಚಿಸಿದೆ—ಏತ್ಕ ಅನ್ನೋದು ನನ್ನ ಮಗಳ ಹೆಸರು. ಮನೆಗೆ ಹೋಗಿ ನನ್ನ ಹೆಂಡತಿಯನ್ನ ಕೇಳಿದೆ, 'ಏತ್ಕ ಎಲ್ಲಿದಾಳೆ ?' 'ಏತ್ಕ ಇನ್ನೂ ಎದ್ದಿಲ್ಲ. ಹಾಸಿಗೇಲಿ ಮಲಗಿದಾಳೆ, ಏನು ವಿಷಯ ?' ಅಂದಳು ನನ್ನ ಹೆಂಡತಿ. 'ಏನು ವಿಷಯವಾ, ಹೈಕಾ ವಿಷ ಕುಡ್ಡಿದಾಳೆ.' ಅಂದೆ. ಇದನ್ನ ಕೇಳಿದ ತಕ್ಷಣ ನನ್ನ ಹೆಂಡತಿ ಎರಡು ಕೈನೂ ತಲೆಮೇಲೆ ಇಟ್ಟುಕೊಂಡು ಅಳೋಕೆ ಶುರು ಮಾಡಿದಳು. 'ಏನು ವಿಷಯ ?' ಅಂತ ಕೇಳಿದೆ. 'ನಿನ್ನೆ ರಾತ್ರಿ ಇವಳು ಹೈಕಾಳನ್ನ ನೋಡೋಕೆ ಹೋಗಿದ್ದಳು. ಇಬ್ಬರೂ ಜೊತೇಲಿ ಇದ್ದರು—ಸುಮಾರು ಎರಡು

ಗಂಟೆ! ಇದೆಲ್ಲಾ ಹ್ಯಾಗೆ ನಡೀತು!' ಅಂತ ಹೇಳಿದಳು ನನ್ನ ಹೆಂಡತಿ. 'ನನ್ನನ್ನ ಏನೂ ಕೇಳಬೇಡಿ. ಅವಳ ಜೊತೆ ಹೋಗ್ತೀನಿ ಅಂತ ಗೋಗರೆದಳು. ಅವರಿಬ್ಬರೂ ದಿವಸ ಒಬ್ಬರನ್ನೊಬ್ಬರು ನೋಡ್ತಿದ್ದರು. ನಿಮಗೆ ಹೇಳೋದು ಬೇಡ ಅಂತ ನನ್ನನ್ನ ಬೇಡಿಕೊಂಡಿದ್ದಳು...ಏನೋ ಆಗಬಾರದ್ದು ಆಗಿದೆ. ನನಗೆ ಗೊತ್ತು! ಖಂಡಿತವಾಗಿಯೂ ಏನೋ ಆಗಿದೆ...' ಅಂದವಳು ಓಡ್ತಾ ಐತ್ಕಳ ರೂಮಿಗೆ ಹೋದಳು. ನೆಲದ ಮೇಲೆ ಕುಸಿದು ಬಿದ್ದು ಪ್ರಜ್ಞೆ ಕಳಕೊಂಡಳು. ನಾನೂ ಇವಳ ಹಿಂದೆಯೇ ಹೋದೆ. ಹಾಸಿಗೆ ಹತ್ತಿರ ಹೋಗಿ ಕೂಗಿದೆ. 'ಐತ್ಕ!...' ಎಲ್ಲಿದ್ದಳು ಐತ್ಕ? ಐತ್ಕ ಅಂತ ಯಾರನ್ನ ಕರೆಯಬೇಕಿತ್ತು? ಅಲ್ಲಿ ಐತ್ಕ ಇರಲಿಲ್ಲ!"

"ಐತ್ಕ ಇರಲಿಲ್ಲ!?"

"ಅವಳು ಸತ್ತಿದ್ದಳು. ಹಾಸಿಗೆ ಮೇಲಿದ್ದ ಮುಖ ಕೆಳಗೆ ಜಾರಿತ್ತು—ಸತ್ತಿದ್ದಳು. ಅವಳ ಟೇಬಲ್ ಮೇಲೆ ಒಂದು ಬಾಟಲಿ ಇತ್ತು. ಹತ್ತಿರವಲ್ಲೇ ಒಂದು ಚೀಟಿನೂ ಇತ್ತು. ತನ್ನ ಕೈಯಿಂದಲೇ ಯಿಡ್ಡಿಶ್ ಭಾಷೆಯಲ್ಲಿ ಬರೆದಿದ್ದಳು. ತುಂಬಾ ಮುದ್ದಾಗಿ ಬರೆಯಬೇಕು ಅನ್ನಿಸಿದಾಗ ಅವಳು ಯಿಡ್ಡಿಶ್ ಭಾಷೆಯಲ್ಲಿ ಬರೆಯ್ತಿದ್ದಳು. 'ಚಿನ್ನದಂತ ಅಪ್ಪ ಮತ್ತು ಅಮ್ಮ.' ಅವಳು ಚೀಟಿಯಲ್ಲಿ ಬರೆದಿದ್ದಳು. 'ಇಂಥ ದುಃಖದ ಕೆಟ್ಟ ಕಾರ್ಯ ಮಾಡಿಕೊಳ್ಳೋ ನಿಮ್ಮ ಮಗಳ ಮೇಲೆ ಕ್ಷಮೆ ಇರಲಿ. ನನ್ನನ್ನ ಕ್ಷಮಿಸಿ, ಕ್ಷಮಿಸಿ. ಇದನ್ನ ಮಾಡಿಕೊಳ್ಳಬೇಕು ಅಂತ ನಾವು ಒಬ್ಬರಿಗೊಬ್ಬರು ಮಾತುಕೊಟ್ಟುಕೊಂಡಿದ್ದೀವಿ. ಹೈಕಾ ಮತ್ತು ನಾನು, ಒಂದೇ ದಿನ, ಒಂದೇ ಹೊತ್ತಿನಲ್ಲಿ, ಒಂದೇ ಕಾರಣಕ್ಕಾಗಿ ಹೀಗೆ ಮಾಡಿಕೊಳ್ತಿದೀವಿ. ಯಾಕೆ ಅಂದರೆ, ನಾವು ಒಬ್ಬರಿಲ್ಲದೆ ಮತ್ತೊಬ್ಬರು ಬದುಕಿರೋದಕ್ಕೆ ಆಗೋಲ್ಲ.' ಚಿನ್ನದಂತ ಅಕ್ಷರಗಳಲ್ಲಿ ನನ್ನ ಮಗಳು ಬರೆದಿದ್ದಳು. 'ನನ್ನ ಮುದ್ದಿನ ಅಪ್ಪ ಮತ್ತು ಅಮ್ಮ. ನಾನು ದೊಡ್ಡ ತಪ್ಪು ಮಾಡ್ತಿದೀನಿ. ಹೀಗೆ ಮಾಡಬಾರದು ಅಂತ ಇದರ ವಿರುದ್ಧ ತುಂಬಾ ಹೋರಾಡಿದೀನಿ. ಆದರೆ, ಇದು ಹೀಗೆ ಆಗಬೇಕಿತ್ತು. ಆಗಿದೆ. ನಾನು ನಿಮ್ಮನ್ನ ಕೇಳಿಕೊಳ್ಳೋದು ಒಂದೇ ಒಂದು ವಿಷಯ ಅಪ್ಪ. ನನ್ನ ಮೇಲೆ ನಿಮಗೆ ಪ್ರೀತಿ ಯಿದ್ದರೆ ನೀವು ನನ್ನನ್ನ ಹೈಕಾಳ ಪಕ್ಕದಲ್ಲೇ ಹೂಳಿ. ಅವಳ ಸಮಾಧಿ ಪಕ್ಕದಲ್ಲೇ ನನ್ನ ಸಮಾಧಿಯನ್ನೂ ಮಾಡಿ. ನೀವು ಚೆನ್ನಾಗಿರಿ ಅಪ್ಪ. ಆಮೇಲೆ ನನ್ನನ್ನ ಮರೆತುಬಿಡಿ—ಈ ಐತ್ಕಳಂತ ಮಗಳು ನಿಮಗೆ ಇರಲಿಲ್ಲ ಅಂದುಕೊಂಡುಬಿಡಿ. ಮರೆತುಬಿಡಿ...'"

"ಇದನ್ನ ನೀವೇ ಊಹಿಸಿಕೊಳ್ಳಿ. ಐತ್ಕಳಂತ ಮಗಳು ನಮಗೆ ಇರಲೇ ಇಲ್ಲ ಅಂತ ಮರೆಯೋಕೆ ಹೇಗೆ ಸಾಧ್ಯವಾಗುತ್ತೆ?"

ನನ್ನ ಹಿಂಭಾಗದಲ್ಲಿ ಯಾರೋ ಕಾಲೆಳೆದುಕೊಂಡು ಎದ್ದ ಸದ್ದಿನೊಂದಿಗೆ

ಪೆಟ್ಟಿಗೆಗಳ ಸಪ್ಪಳವೂ ಕೇಳಿಸಿತು. ಸಿಟ್ಟುಸಿರೊಡನೆ ಆಗತಾನೆ ನಿದ್ದೆಯಿಂದ ಎದ್ದಂತಿದ್ದ ಹೆಂಗಸೊಬ್ಬಳ ದನಿ ಕೇಳಿಸಿತು.

"ಅಮ್ರೋವ್ ! ಅಮ್ರೋವ್ !"

"ಹೌದು ಗೀತ್ಕ—ಏನಿದು ? ನೀನು ನಿದ್ದೆ ಮಾಡಿ ಆಯ್ತಾ ? ನಿನಗೀಗ ಟೀ ಬೇಕು ಅಲ್ಲವೇ ?...ಒಂದು ನಿಮಿಷ ತಾಳು...ಯಾವುದೋ ಸ್ಟೇಷನ್ ಬರ್‍ತಿದೆ. ಒಂದಿಷ್ಟು ಬಿಸಿನೀರು ತರ್‍ತೀನಿ. ಟೀ ಕೆಟಲ್ ಎಲ್ಲಿದೆ ?...ಎಲ್ಲಿಟ್ಟಿದಿಯಾ ಟೀಪುಡಿ ಸಕ್ಕರೆಯನ್ನ ?"

# ಈ ಭೂಮಿ ನಮ್ಮದು

ಇಂಗ್ಲೀಷ್ ಮೂಲ : ಸಾಲ್ ಬೆಲೊ
ಅನು : ಎ. ಎನ್. ಲಕ್ಷ್ಮೀನಾರಾಯಣ

[ಅಮೆರಿಕನ್ ಲೇಖಕ ಸಾಲ್ ಬೆಲೊ 1915ರಲ್ಲಿ ಕೆನಡಾದಲ್ಲಿ ಹುಟ್ಟಿದ. ನಂತರ ಬೆಳೆದದ್ದೆಲ್ಲ ಷಿಕಾಗೋದಲ್ಲಿ. ನಾರ್ತ್‌ವೆಸ್ಟರ್ನ್, ವಿಸ್‌ಕಾನ್‌ಸಿನ್ ವಿಶ್ವವಿದ್ಯಾಲಯಗಳಲ್ಲಿ ಅಭ್ಯಾಸ ಮಾಡಿ, ಮಾನವಶಾಸ್ತ್ರದಲ್ಲಿ ಪದವೀಧರನಾದ. ಆಮೇಲೆ ಅಮೆರಿಕದ ಅನೇಕ ವಿಶ್ವವಿದ್ಯಾಲಯಗಳಲ್ಲಿ ಪ್ರಾಧ್ಯಾಪಕನಾಗಿದ್ದ. ಯೂರೋಪಿನಲ್ಲೆಲ್ಲ ವ್ಯಾಪಕವಾಗಿ ಸುತ್ತಾಡಿರುವ ಬೆಲೊ ನೊಬೆಲ್ ಪಾರಿತೋಷಕ (1976)ವನ್ನೂ ಒಳಗೊಂಡು ಅನೇಕ ಪ್ರತಿಷ್ಠಿತ ಪುರಸ್ಕಾರಗಳನ್ನು ಪಡೆದಿದ್ದಾನೆ. ಮೊದಲ ಕಾದಂಬರಿ 'ಡ್ಯಾಂಗ್ಲಿಂಗ್ ಮ್ಯಾನ್' (1944). ಸೈನ್ಯದಿಂದ ಕರೆ ಬರುವುದೆಂದು ಕಾಯುತ್ತಿರುವ ನಾಯಕನ ನಿಷ್ಕ್ರಿಯ ಬದುಕೇ ಇಲ್ಲಿ ಧ್ವನಿಯಾಗಿದೆ. 'ದಿ ಅಡ್ವೆಂಚರ್ಸ್ ಆಫ್ ಆಗೀ ಮಾರ್ಚ್' (1953), 'ಹೆರ್‌ಜಾಗ್', 'ಸೀಜ್ ದಿ ಡೇ', 'ಮಿಸ್ಟರ್ ಸ್ಯಾಮ್ಲರ್ಸ್ ಪ್ಲಾನೆಟ್', 'ಹಂಬೋಲ್ಟ್ಸ್ ಗಿಫ್ಟ್', 'ಡೀನ್ಸ್ ಡಿಸೆಂಬರ್' ಮೊದಲಾದ ಅತ್ಯುತ್ತಮ ಕಾದಂಬರಿಗಳಲ್ಲಿ ಆಧುನಿಕ ಕಾಲದ ನಾಡಿಮಿಡಿತ ಕೇಳಿಸುತ್ತದೆ. ಮನುಷ್ಯರಲ್ಲಿ ಒಬ್ಬಂಟಿತನ ಹೆಚ್ಚಿದಂತೆ, ಶಿಕ್ಷಣ ಸಾಮರ್ಥ್ಯ ಬೆಳೆದಂತೆ ಮಹತ್ವದ ಪ್ರಶ್ನೆ-ಉತ್ತರಗಳೆಲ್ಲ ಆಂತರಿಕವಾಗಿಬಿಡುತ್ತವೆ ಎಂದು ಸೂಚಿಸುವಂತಿರುವ ಈ ಕೃತಿಗಳು ನಾಗರಿಕ ಜಗತ್ತಿನ ನಡುಕ ಹುಟ್ಟಿಸುವಂಥ ಸ್ಥಿತಿಯನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತವೆ. 'ಮೋಸ್‌ಬೀಸ್ ಮೆಮೋಯರ್ಸ್' ಶ್ರೇಷ್ಠ ಕಥಾಸಂಕಲನ.

—ಎಸ್. ದಿವಾಕರ್
(ಕಥಾಜಗತ್ತಿನಿಂದ)]

ಸ್ಯಾಮ್ಲರ್ ಎಂದಿನಂತೆ ನಲವತ್ತೆರಡನೆಯ ರಸ್ತೆಯ ಲೈಬ್ರರಿಯಿಂದ ಬಸ್ಸಿನಲ್ಲಿ ಬರುತ್ತಿದ್ದ. ಮಧ್ಯಾಹ್ನದ ಇಳಿಹೊತ್ತು. ಕಳ್ಳ ಕೊಲಂಬಸ್ ವೃತ್ತದಲ್ಲಿ ಹತ್ತಿದ. ಎಪ್ಪತ್ತೆರಡನೆಯ ರಸ್ತೆ ಬರುವ ಹೊತ್ತಿಗೆ ತನ್ನ ಕೈಚಳಕ ತೋರಿಸಿದ. ಕಳ್ಳ ಹತ್ತಿದ್ದನ್ನು ಸ್ಯಾಮ್ಲರ್ ಗಮನಿಸಿದ್ದ. ಎಲ್ಲರಿಗಿಂತ ಎತ್ತರವಾಗಿದ್ದುದರಿಂದ, ಒಂದು ಕಣ್ಣಿನ ದೃಷ್ಟಿ ಸರಿ ಇಲ್ಲದಿದ್ದರೂ ಅವನ ಕೃತ್ಯವನ್ನು ಗಮನಿಸುವುದು ಸಾಧ್ಯವಾಗಿತ್ತು. ಆದರೂ ತಾನು ಹತ್ತಿರದಿಂದ ನೋಡಿಬಿಟ್ಟೆನೇನೋ ಎಂದು ಆತಂಕವಾಯಿತು. ತಾನು ನೋಡಿದ್ದನ್ನು ಕಳ್ಳ ನೋಡಿದ್ದರೆ ಏನು ಗತಿ! ದೃಷ್ಟಿ ರಕ್ಷಣೆಗೆಂದು ತಂಪು ಕನ್ನಡಕ

ವನ್ನೇನೋ ಧರಿಸಿದ್ದ. ಆದರೆ ಅದರಿಂದಲೇ ಅವನು ಕುರುಡನೆಂದು ಯಾರೂ ಭಾವಿಸಲಾರರು. ಕೈಯಲ್ಲಿ ಬಿಳಿಕೋಲು ಇಲ್ಲ. ಬದಲು ಕೊಡೆಯಿದೆ. ಬ್ರಿಟಿಷರ ಸ್ಟೈಲು. ಇಲ್ಲ ಕಳ್ಳ ಅವನನ್ನು ಕುರುಡ ಎಂದು ಒಪ್ಪಲಾರ. ಕಳ್ಳನೂ ಕಪ್ಪು ಕನ್ನಡಕ ಹಾಕಿಕೊಂಡಿದ್ದ. ಒಳ್ಳೆ ಕಟ್ಟುಮಸ್ತಾದ ಸ್ಫುರದ್ರೂಪಿ ನೀಗ್ರೊ. ಒಂಟೆ ಚರ್ಮದ ಕೋಟು. ಸೊಗಸಾದ ಸೂಟು, ಟೈ.

ನೀಗ್ರೋ ಸ್ಯಾಮ್ಲರ್‌ನತ್ತ ಮುಖ ತಿರುಗಿಸಿದ. ಯಾವುದೋ ಮೃಗವನ್ನು ಕಂಡಂತೆ ಅನ್ನಿಸಿತು. ಸ್ಯಾಮ್ಲರ್ ಪುಕ್ಕಲ ಎಂದು ಹೇಳುವಂತಿಲ್ಲ. ಜೀವನದಲ್ಲಿ ಬೇಕಾದಷ್ಟು ತೊಂದರೆ ಅನುಭವಿಸಿದ್ದ. ಮತ್ತೆ ಅವನ್ನು ಮೈಮೇಲೆ ತಂದುಕೊಳ್ಳಲು ಸಿದ್ಧನಿರಲಿಲ್ಲ. ಎತ್ತರದ ಒಬ್ಬ ಬಿಳಿಮುದುಕ ತನ್ನ ಕೃತ್ಯವನ್ನು ವಿವರವಾಗಿ ನೋಡಿದ್ದಾನೆಂದು ಕಳ್ಳನಿಗೆ ಗೊತ್ತಾಗಿರಬೇಕೆಂದು ಅವನಿಗೆ ಅನ್ನಿಸಿತು. ಕಾಲಬುಡದಲ್ಲಿ ತೆರೆದ ಹೃದಯ ಶಸ್ತ್ರಚಿಕಿತ್ಸೆ ನಡೆಯುತ್ತಿದೆಯೇನೋ ಎನ್ನುವಂತೆ ಕೆಳಗೆ ದಿಟ್ಟಿಸಿ ನೋಡಿದ. ಕಳ್ಳ ಮತ್ತೆ ತನ್ನತ್ತ ನೋಡಿದಾಗ ಮುಖ ತಿರುಗಿಸಬಾರದೆಂದೂ ಅಂದುಕೊಂಡ. ಅವನ ವಯಸ್ಸಾದ ಗೌರವಸ್ಥ ಮುಖಕ್ಕೆ ರಕ್ತನುಗ್ಗಿ ಕೆಂಪಾಯಿತು. ನೆತ್ತಿಯ ತುಂಡುಗೂದಲು ಸೆಟೆದು ನಿಂತವು. ತುಟಿ–ಬಾಯಿ ಬಿಗಿದುಕೊಂಡವು. ನರ, ಮಾಂಸ, ಧಮನಿಗಳು ಹೆಣೆದುಕೊಂಡತ್ತಿರುವ ತಲೆಯ ಬುಡದ ಜಾಗದಲ್ಲಿ ಬಿಗಿತ ಕಾಣಿಸಿಕೊಂಡಿತು. ಯುದ್ಧ ಕಾಲದ ಪೋಲೆಂಡ್‌ನಲ್ಲಿ ಇರುವ ಅನುಭವ.

ಬಸ್‌ಗಳಲ್ಲಿ ಓಡಾಡುವುದನ್ನೆ ಬಿಡಬೇಕು. ಆದರೆ ಸಬ್‌ವೇನಲ್ಲಿ ಓಡಾಡುವುದು ಕಷ್ಟ, ಅದಕ್ಕೆ ಹೋಲಿಸಿದರೆ ಬಸ್‌ಗಳೇ ವಾಸಿ. ನ್ಯೂಯಾರ್ಕ್‌ನ ಎಪ್ಪತ್ತು ದಾಟಿದ ವೃದ್ಧರಂತೆ ತಪ್ಪು ಪಾಡು ತಾವು ನೋಡಿಕೊಳ್ಳುವುದನ್ನು ಬಿಟ್ಟು ಸ್ಯಾಮ್ಲರ್ ಏನೇನೋ ಮಾಡಹೊರಟಿದ್ದ. ಎಪ್ಪತ್ತು ತುಂಬಿದ್ದ ಸ್ಯಾಮ್ಲರ್‌ಗೆ ತನ್ನ ವಯಸ್ಸೆಷ್ಟು ಎಂದೇ ತಿಳಿಯದು. ನ್ಯೂಯಾರ್ಕ್‌ನಲ್ಲಿ ಐವತ್ತು ಸಾವಿರ ಡಾಲರುಗಳ ಆದಾಯ. ಕ್ಲಬ್‌ನ ಸದಸ್ಯತ್ವ. ಓಡಾಡಲು ಟ್ಯಾಕ್ಸಿ. ವಾಸಿಸಲು ಪ್ರವೇಶದ್ವಾರದಲ್ಲಿ ಕಾವಲಗಾರನಿರುವ ಫ್ಲಾಟು ಸ್ಯಾಮ್ಲರ್‌ಗೆ ಎಲ್ಲಿ ಬರಬೇಕು? ಬಸ್ಸು, ಗಜಿಬಿಜಿಯ ಸಬ್‌ವೇ, ಯಂತ್ರ ಬಡಿಸುವ ಊಟ. ಕೊರಗಲು ಕಾರಣವೇನೂ ಇಲ್ಲ. ನಿಜ. ಆದರೆ ಲಂಡನ್ನಿನಲ್ಲಿ, ಇಪ್ಪತ್ತು ವರ್ಷಗಳ ಕಾಲ, ವಾರ್‌ಸಾ ಪತ್ರಿಕೆಗಳಿಗೆ ವರದಿಗಾರನಾಗಿದ್ದವನಿಗೆ ನ್ಯೂಯಾರ್ಕ್ ಮುದುಕರ ಬುದ್ಧಿ ಬರುವುದು ಸಾಧ್ಯವೆ? ಆಕ್ಸ್‌ಫರ್ಡ್ ಮಾತು, ಆಕ್‌ಫರ್ಡ್ ನಡವಳಿಕೆ. ಥೇಟ್ ಬ್ರಿಟಿಷ್ ಮ್ಯೂಸಿಯಮ್‌ನ ಓದುಗನ ಮುಖ.

ಸ್ಯಾಮ್ಲರ್ ಕಳ್ಳನನ್ನು ನೋಡಿದ್ದು ಇದೇ ಮೊದಲಲ್ಲ. ರಿವರ್‌ಸೈಡ್ ಬಸ್ಸು ಕಳ್ಳನ ನಿಶ್ಚಿತ ಕಾರ್ಯಕ್ಷೇತ್ರ. ಅವನು ಜೇಬು ಕತ್ತರಿಸುತ್ತಿದ್ದುದನ್ನು ಸ್ಯಾಮ್ಲರ್ ಎಷ್ಟೋ ಬಾರಿ ನೋಡಿದ್ದ. ಪೊಲೀಸರಿಗೂ ದೂರು ಕೊಟ್ಟಿದ್ದ. ಅವರೇನೂ ಅಂಥಾ ಆಸಕ್ತಿ ತೋರಿಸಿರಲಿಲ್ಲ. ಆದರೂ ರಿವರ್‌ಸೈಡ್ ಡ್ರೈವ್ ಬಳಿ ಯಾವು

ದಾದರೂ ಟೆಲಿಫೋನು ಬೂತ್ ಇದೆಯೋ ಎಂದು ಹುಡುಕಿಕೊಂಡು ಹೊರಟ. ಅವನಿಗೆ ತಾನೊಬ್ಬ ಗಾಂಪ ಎನ್ನಿಸಿತು. ಮಾಮೂಲಿನಂತೆ ಫೋನನ್ನು ಯಾರೋ ಒಡೆದುಹಾಕಿದ್ದರು. ಪಬ್ಲಿಕ್ ಬೂತಿನ ಫೋನುಗಳಲ್ಲಿ ಬಹುಪಾಲಕ್ಕೆ ಇದೇ ಗತಿ. ಕಿವಿ ಇದ್ದರೆ ಬಾಯಿಲ್ಲ. ಬಾಯಿ ಇದ್ದರೆ ಕಿವಿ ಇಲ್ಲ. ಮೂತ್ರವಿಸರ್ಜನೆಗೆ ಪ್ರಶಸ್ತವಾದ ಜಾಗ. ನ್ಯೂಯಾರ್ಕ್ ನೇಪಲ್ಸ್‌ಗಿಂತ ಅಧ್ವಾನ. ಏಷ್ಯಾದ್ದೋ, ಆಫ್ರಿಕಾದ್ದೋ ಯಾವುದೋ ಊರಿನ ಥರ.

ಮೊಟ್ಟಮೊದಲ ಸಲ ನೋಡಿದ್ದು ಈಗಲೂ ನೆನಪಿದೆ. ಮಧ್ಯಾಹ್ನದ ಹೊತ್ತು. ಬಸ್ಸಿನಲ್ಲಿ ಯಾರದೋ ಹಿಂದಿನಿಂದ ಕರಿ ಕೈಯೊಂದು ಈಚೆ ಬಂತು. ಮೆಲ್ಲಗೆ ತೂರಿ ಅವಸರವಿಲ್ಲದೆ. ಹುಳ್ಳುಮನಸ್ಸಿನ ಕಂಪನವಿಲ್ಲದೆ ನೀಗ್ರೋ ಬೆರಳು ಸಾವಧಾನವಾಗಿ ಲೆದರ್ ಬ್ಯಾಗಿನಿಂದ ಪ್ಲಾಸ್ಟಿಕ್ ಫೋಲ್ಡರನ್ನು ತೆಗೆದು ಬಿಡಿಸಿತು. ಕ್ರೆಡಿಟ್ ಕಾರ್ಡ್‌ಗಳು, ಭದ್ರತಾ ಬಾಂಡುಗಳು, ಲಿಪ್‌ಸ್ಟಿಕ್, ಟಿಶ್ಯೂಪೇಪರ್, ಪರ್ಸು ಇತ್ಯಾದಿ. ಪರ್ಸಿನಲ್ಲಿ ಹಸಿರು ನೋಟುಗಳು. ಬೆರಳುಗಳು ನೋಟುಗಳನ್ನು ಸಾವಕಾಶವಾಗಿ ಹೊರಗೆಳೆದವು. ಡಾಕ್ಟರ್ ರೋಗಿಯ ಹೊಟ್ಟೆಯನ್ನು ಮುಟ್ಟಿದಷ್ಟೇ ಮೃದುವಾಗಿ. ಕಳ್ಳ ಲೆದರ್‌ಬ್ಯಾಗನ್ನು ಮುಚ್ಚಿ ಮೊದಲಿದ್ದಂತೆಯೇ ಇಟ್ಟುಬಿಟ್ಟ. ಸ್ಯಾಮ್ಲರ್‌ ತಲೆ ದಿಮ್ಮೆಂದಿತು. ತಲೆ ಬಿಗಿದು ಚಿಕ್ಕದಾದಂತೆನ್ನಿಸಿತು. ಹಣ ಕಳೆದುಕೊಂಡು ಆ ಪೆಂಗ ಮಹಿಳೆಯನ್ನು ಕಂಡು ರೇಗಿತು. ಅವಳಿಗೇನೂ ಗೊತ್ತೇ ಆಗಲಿಲ್ಲವಲ್ಲಾ ಎಂದು ಕಿರಿಕಿರಿಯಾಯಿತು. ಎಂಥಾ ಮಂಕುದಿಣ್ಣೆ. ತಲೇಲಿ ಏನು ಸಗಣಿ ತುಂಬಿಕೊಂಡು ಬಂದೀದಾಳೋ ಎನ್ನಿಸಿತು. ಅವಳಿಗೆ ನ್ಯೂಯಾರ್ಕ್ ಇನ್ನೂ ಅರ್ಥ ಆಗಿಲ್ಲ.

ಒಂಟೆ ಚರ್ಮದ ಕೋಟಿನ ಕಳ್ಳ ಆ ಮಹಿಳೆಯಿಂದ ದೂರ ಸರಿದ. ವಿಶಾಲವಾದ ಭುಜ. ಕಪ್ಪು ಕನ್ನಡಕ. ಬಲಿಷ್ಠ ಕಂಠಕ್ಕೆ ಟ್ಯಾಕ್ಸಿ ಹಳದಿ ಮತ್ತು ಚೆರ್ರಿ ವಗ್ಗನ ಕೆಂಪಿನ ಸಿಲ್ಕ್ ಟೈ. ಆಫ್ರಿಕನ್ ಮೂಗಿನ ಕೆಳಗೆ ಟ್ರಿಮ್ ಮಾಡಿದ ಮೀಸೆ ಹತ್ತಿರ ಬಂದರೆ ಬಹುಶಃ ಫ್ರೆಂಚ್ ಸುಗಂಧ ಮೂಗಿಗೆ ಬಡಿಯಲೂಬಹುದು ಅವನು ತನ್ನನ್ನು ನೋಡಿಬಿಟ್ಟಿದ್ದರೆ? ನನ್ನನ್ನು ಮನೆಯತನಕ ಹಿಂಬಾಲಿಸಿ ಬಂದಿದ್ದರೆ ಸ್ಯಾಮ್ಲರ್‌ಗೆ ಏನೂ ತೋಚಲಿಲ್ಲ. ಕಳ್ಳರ ರೀತಿನೀತಿಗಳಲ್ಲಿ, ಮಾತು ಕೃತ್ಯಗಳಲ್ಲಿ ಗ್ಲಾಮರ್ ಕಾಣುವುದು ಸ್ಯಾಮ್ಲರ್‌ನ ಸ್ವಭಾವ ಅಲ್ಲ. ಅವರನ್ನು ಸಾಮಾಜಿ ಹಿರೋಗಳೆಂದು ಕರೆಯುವುದೂ ಅವನ ಪಾಲಿಗೆ ಬೊಕಳೆ. ಹೀಗಿದ್ದರೂ ಕಳ್ಳನನು ಮತ್ತೆ ಮತ್ತೆ ನೋಡಬೇಕೆಂದು ಸ್ಯಾಮ್ಲರ್‌ಗೆ ಅನ್ನಿಸುತ್ತಿತ್ತು. ದಾಸ್ತೋಯಿವೆಸ್ಕಿಯ ರಾಸ್ಕೋಲ್‌ನಿಕೋವ್ ಮನಸ್ಸಿಗೆ ಬಂದ. ಬೊಕ್ಕತಲೆಯ ಆ ಮುದುಕಿ. ಅವ ಮುರುಕಲು ಜಡೆಕ್ಲಿಪ್ಪು. ಅರೆನೆರೆತ ಹಿಡಿ ಕೂದಲು. ಇಲಿ ಬಾಲದ ಜಡೆ. ಅದ ಮೇಲೆ ಬೀಳುವ ರಾಸ್ಕೋಲ್‌ನಿಕೋವ್‌ನ ಸುತ್ತಿಗೆ – ಎಲ್ಲಾ ವಿವರವಿವರವಾ ಕಣ್ಮುಂದೆ ಬಂದವು. ಆ ಭಯಾನಕ, ಕ್ರೂರ, ಕೊಲೆಯ ವಿವರಗಳು ದೈನಂದಿ ಜೀವನದ ಸಾಮಾನ್ಯ ಅನುಭವದ ವಿವರಗಳೆಂಬಂತೆ ಪದರಪದರವಾಗಿ ಕಣ್ಮುಂ

…ಳಿದವು. ಕಲೆಯಲ್ಲಿ ಮಾತ್ರವಲ್ಲ ಅಪರಾಧದಲ್ಲೂ ವಿಜ್ಞಾನದ ಬೆಳಕಿದೆ. ಚಾರ್ಲ್ಸ್ ಲ್ಯಾಂಬ್‌ನ ಕತೆಯಲ್ಲಿ ಬರುವ ಹಂದಿ ಸುಡುವ ಕ್ರಿಯೆಯಂತೆ. ಒಂದು ಹಂದಿ ಸುಡಲು ಮನೆಗೇ ಬೆಂಕಿ ಇಡುವಂತೆ. ಇಡೀ ದಹನ ಅಗತ್ಯವೆ? ಒಲೆಯ ಬೆಂಕಿ ಸಾಲದೆ? ಒಲೆಯ ಉಪಯೋಗ ಎಲ್ಲರಿಗೂ ಗೊತ್ತಾಗುವವರೆಗೂ ಮನೆಗೆ ಬೆಂಕಿ ಇಡಬೇಡಿ ಎಂದು ಹೇಳುವುದು ಮೂರ್ಖತನ. ಹೇಗೇ ಇರಲಿ, ಪೊಲೀಸರಿಗೆ ಫೋನು ಮಾಡಲು ಬಸ್ಸಿನಿಂದ ಇಳಿದ ಸ್ಕ್ಯಾಮ್ಲರ್‌ಗೆ ಕಳ್ಳನ ಕೃತ್ಯ ಅರಿವಿನ ಪರಿಧಿಯನ್ನು ಹಿಗ್ಗಿಸಿತ್ತು. ನಿರ್ಮಲ ಗಾಳಿ. ಇಳಿಹಗಲಿನ ನಿಚ್ಚಳ ಬೆಳಕು. ಪ್ರಪಂಚವನ್ನು, ರಿವರ್ ಸೈಡ್ ಡ್ರೈವ್ ಅನ್ನು ಬೆಳಗಿಸುತ್ತಿತ್ತು. ಈ ಶ್ರೀಮಾನ್ ಪರಿವೀಕ್ಷಕ ಆರ್ಟರ್ ಸ್ಕ್ಯಾಮ್ಲರ್‌ನನ್ನ ಬೆಳಕು ಕಿಚಾಯಿಸಿತು. ಪ್ರಪಂಚದ ವೇದಾಂತಿಗಳೇ ದಯವಿಟ್ಟು ಗಮನಿಸಿ. ಈಗ ಹೀಗಿದೆ. ಇದಕ್ಕಿಂತ ನಿಚ್ಚಳವಾಗಿ ಬೆಳಗುವುದು ಸಾಧ್ಯವಿಲ್ಲ.

ಟೆಲಿಫೋನ್ ಬೂತ್. ನೆಲಕ್ಕೆ ಲೋಹದ ಸೀಟು ಹಾಸಿದ್ದಾರೆ. ನಯವಾದ ತಿರುಗಣೆಯ ಮಡಿಸುವ ಬಾಗಿಲು. ನೆಲದ ಮೇಲೆ ಉಚ್ಚೆ ಕರಗಟ್ಟಿದೆ. ಪ್ಲಾಸ್ಟಿಕ್ ಟೆಲಿಫೋನ್ ಚೂರುಚೂರಾಗಿದೆ. ಟೆಲಿಫೋನಿನ ಕೇಬಲ್‌ಗೆ ರಿಸೀವರ್‌ನ ತುಂಡು ನೇತಾಡುತ್ತಿದೆ.

ಇಡೀ ಮೂರು ಬ್ಲಾಕ್‌ಗಳಲ್ಲೂ ಕೆಲಸಮಾಡುವ ಫೋನ್‌ಉಳ್ಳ ಒಂದೇ ಒಂದು ಬೂತ್ ಕೂಡ ಸಿಗಲಿಲ್ಲ. ಸ್ಕ್ಯಾಮ್ಲರ್ ತೆಪ್ಪಗೆ ಮನೆಗೆ ಹೋದ. ಪಡಸಾಲೆಯಲ್ಲಿ ಮನೆಯ ಮಾಲೀಕರು, ಟೆಲಿವಿಷನ್ ಪರದೆ ವ್ಯವಸ್ಥೆ ಮಾಡಿದ್ದರು. ಬಾಗಿಲು ಕಾಯುವವನಿಗೆ, ಕಳ್ಳರು ಬಂದರೆ ಕಾಣಲಿ ಎಂದು ಈ ಏರ್ಪಾಡು. ಆದರೆ ಕಾವಲುಗಾರ ಅಲ್ಲಿರುತ್ತಲೇ ಇರಲಿಲ್ಲ, ವೀಡಿಯೊ ಕ್ಯಾಮರಾದ ದೃಷ್ಟಿಹಾಯುವ ಪರಿಧಿಯಲ್ಲಿ ಯಾರೂ ಇರಲಿಲ್ಲ. ನೆಲಕ್ಕೆ ಹಾಸಿದ ಕಾರ್ಪೆಟ್ಟು ಕಂದುಬಣ್ಣಕ್ಕೆ ತಿರುಗಿತ್ತು. ಸ್ಕ್ಯಾಮ್ಲರ್ ಅಪಾರ್ಟ್‌ಮೆಂಟಿನ ಒಳಹೋಗಿ ಸೋಫಾದ ಮೇಲೆ ಕುಳಿತು, ಪೊಲೀಸರಿಗೆ ಫೋನು ಮಾಡಿದ.

'ಹಲೋ'

'ಹಲೋ, ನಾನು ಒಂದು ಅಪರಾಧದ ಬಗ್ಗೆ ವರದಿ ಮಾಡಬಯಸುತ್ತೇನೆ.'

'ಎಂಥಾ ಅಪರಾಧ ?'

'ಕಳ್ಳತನ–ಜೇಬುಗಳ್ಳತನ'

'ಸ್ವಲ್ಪ ಇರಿ–ಕನೆಕ್ಟ್ ಮಾಡುತ್ತೇನೆ'

ತುಂಬಾ ಹೊತ್ತು ಬಜ್ ಶಬ್ದ. ಒಂದು ಶುಷ್ಕ ಧ್ವನಿ, ಆಯಾಸದಿಂದ ಇಲ್ಲವೆ ನಿರಾಸಕ್ತಿಯಿಂದ ಜೀವಕಳೆದುಕೊಂಡ ಧ್ವನಿ.

'ಏಸ್ ?' ಎಂದಿತು.

ಸ್ಕ್ಯಾಮ್ಲರ್, ತನ್ನ ವಿದೇಶೀ–ಪೋಲಿಶ್-ಆಕ್ಸ್‌ಫರ್ಡ್ ಧಾಟಿಯಲ್ಲಿ ಪ್ರಾರಂಭಿ

ಸಿದ. ಆದಷ್ಟೂ ಸಂಕ್ಷಿಪ್ತವಾಗಿರಬೇಕು, ನೇರವಾಗಿ ಹೇಳಬೇಕು. ಸಮಯ ವ್ಯರ್ಥವಾಗಬಾರದು. ಅನವಶ್ಯಕ ವಿವರಣೆಗೆ ಎಡೆಕೊಡಬಾರದು ಎಂದುಕೊಂಡು.

'ರಿವರ್‌ಸೈಡ್ ಬಸ್‌ನಲ್ಲಿನ ಜೇಬುಗಳ್ಳನ ಬಗ್ಗೆ ವರದಿ ಮಾಡಬಯಸುತ್ತೇನೆ' ಎಂದ.

'ಓಕೆ'

'ಸಾರ್ ?'

'ಓಕೆ ಅಂದೆನಲ್ಲಾ.... ರಿಪೋರ್ಟ್ ಮಾಡಿ'

'ಒಬ್ಬ ನೀಗ್ರೋ. ಸುಮಾರು ಆರು ಅಡಿ ಎತ್ತರ. ಸುಮಾರು ಇನ್ನೂರು ಪೌಂಡ್ ತೂಕ. ಸುಮಾರು ಮೂವತ್ತೈದು ವರ್ಷ ಇರಬಹುದು. ನೋಡಲು ತುಂಬಾ ಸ್ಫುರದ್ರೂಪಿ. ಒಳ್ಳೆ ಬಟ್ಟೆ ಧರಿಸಿದ್ದಾನೆ.'

'ಓಕೆ ?'

'ನಿಮಗೆ ಫೋನ್ ಮಾಡೋಣ ಅನ್ನಿಸಿತು'

'ಓಕೆ'

'ನೀವು ಕ್ರಮ ತಗೊಂತೀರಾ ?'

'ನಾವಿರೋದೇ ಅದಕ್ಕೆ ಅಲ್ವೆ ?... ನಿಮ್ಮ ಹೆಸರೇನು ?'

'ಆರ್ಥರ್ ಸ್ಯಾಮ್ಲರ್'

'ಓಕೆ ಆರ್ಟ್.... ನಿಮ್ಮ ಮನೆ ಎಲ್ಲಿದೆ ?'

'ನೋಡಿ ಸಾರ್. ನಮ್ಮ ಮನೆ ಎಲ್ಲಿದೆ ಅಂತ ಹೇಳ್ತೀನಿ. ಏನೂ ತೊಂದ್ರೆ ಇಲ್ಲ. ಆದರೆ ಆ ಕಳ್ಳನ ಬಗ್ಗೆ ನೀವು ಏನು ಕ್ರಮ ತಗೊಂತೀರಾ ?'

'ನಾವು ಏನು ಮಾಡ್ಬೇಕೂ ಅಂತ ನಿಮ್ಮ ಇಷ್ಟ ?'

'ಅರೆಸ್ಟ್ ಮಾಡಿ'

'ಮೊದಲು ಕಳ್ಳನ್ನ ಹಿಡೀಬೇಕಲ್ಲಾ ?'

'ಬಸ್ಸಿಗೆ ಒಬ್ಬ ಪೇದೇನ ಕಳ್ಸಿ'

'ನಮ್ಮ ಹತ್ರ ಯಾರೂ ಇಲ್ವಲ್ಲಾ ? ಧಂಡಿಯಾಗಿ ಬಸ್ಸುಗಳೇನೋ ಇವೆ. ಆದರೆ, ಆರ್ಟ್, ನಮ್ಮ ಹತ್ರ ಸಾಕಷ್ಟು ಜನ ಪೇದೆಗಳಿಲ್ಲ. ನಾವು ತುಂಬಾ ಸಮಾರಂಭಗಳನ್ನು, ಸಂಕಿರಣಗಳನ್ನು ಕವರ್ ಮಾಡ್ಬೇಕು. ಆರ್ಟ್, ದೊಡ್ಡ ದೊಡ್ಡ ಮನುಷ್ಯರು, ಪುಢಾರಿಗಳು ಇದಾರೆ. ಲಾರ್ಡ್ ಅಂಡ್ ಟೇಲರ್ಸ್‌ನಲ್ಲಿ, ಬಾನ್‌ವಿಟ್ಸ್ ಮತ್ತು ಸಾಕ್ಸ್‌ನಲ್ಲಿ ತುಂಬಾ ಜನ ಮಹಿಳೆಯರು ಕುರ್ಚಿಗಳ ಮೇಲೆ ತಮ್ಮ ಪರ್ಸ್‌ಗಳನ್ನು ಇಟ್ಟುಬಿಟ್ಟು, ಷಾಪಿಂಗ್ ಮಾಡ್ತಾ ಇದಾರೆ. ಅವನ್ನೆಲ್ಲಾ ನೋಡ್ಕೋಬೇಕು.'

'ನಂಗೆ ಅರ್ಥ ಆಗುತ್ತೆ. ನಿಮ್ಮ ಹತ್ರ ಸಾಕಷ್ಟು ಜನ ಇಲ್ಲ. ಕೆಲವಕ್ಕೆ ನೀವು ಹೆಚ್ಚಿನ ಆದ್ಯತೆ ಕೊಡಬೇಕಾಗುತ್ತೆ. ರಾಜಕೀಯ ಒತ್ತಡ ಇರುತ್ತೆ. ಆದರೆ ಕಳ್ಳನ್ನ ನಾನು ತೋರಿಸ್ತೇನೆ'

'ಈಗ ಬೇಡ. ಇನ್ಯಾವಾಗಲಾದರೂ ನೋಡೋಣ'

'ನಾನು ಕಳ್ಳನ್ನ ಹಿಡಕೊಡೋದು ನಿಮಗೆ ಇಷ್ಟ ಇಲ್ವೆ ?'

'ಅಯ್ಯೋ ಖಂಡಿತವಾಗೂ ಇ ದೆ. ಆದರೆ ನಮ್ಮ ಹತ್ರ ವೇಟಿಂಗ್ ಲಿಸ್ಟ್ ಇದೆ'

'ಅಂದ್ರೆ ನನ್ನ ಹೆಸರನ್ನ ನಿಮ್ಮ ವೇಟಿಂಗ್ ಲಿಸ್ಟ್‌ಗೆ ಸೇರಿಸಿಕೊಳ್ತೀರಾ ?'

'ಹೌದು ಅಬೇ'

'ಅಬೇ ಅಲ್ಲ ಆರ್ಟರ್'

'ಹ್ಲ. ಅದೇ... ಆರ್ಥರ್'

ಮೋಟಾರ್ ಸೈಕಲ್ ಮೇಲೆ ಮುಂದಕ್ಕೆ ಬಾಗಿ, ಸೆಟೆದು ಕುಳಿತ ಸವಾರನಿಗೆ ಬೀದಿಯಲ್ಲಿ ಯಾರೋ ಹಣೆಗೆ ಗುರಿಯಿಟ್ಟು ಕಲ್ಲಿನಿಂದ ಹೊಡೆದರೆ ಹೇಗೋ ಹಾಗಾಯಿತು ಆರ್ಟರ್ ಸ್ಯಾಮ್ಲರ್‌ಗೆ. ಪ್ರಜ್ವಲ ಬೆಳಕಿನಲ್ಲಿ ಬಾಗಿ ಕುಳಿತು ತುಟಿ ಅರಳಿಸಿ ನಕ್ಕ.

'ವಿಶ್ವದಲ್ಲೇ ಅತ್ಯಂತ ಸ್ವಚ್ಛವೂ ಸ್ವರ್ಗಸಮಾನವೂ ಆದ ದೇಶ ಎಂದು ಡಂಗುರ ಹೊಡೆಯುತ್ತಾರೆ' ಎಂದು ತನಗೆ ತಾನೇ ಹೇಳಿಕೊಂಡ.

'ನೀವು ಹೇಳೋದು ಸರಿ, ನಂಗೆ ಅರ್ಥ ಆಯ್ತು ಇವರೇ.... ಮಿಸ್ಟರ್ ಪತ್ತೇದಾರ್ರೆ ? ಈ ಕಳ್ಳ ಇನ್ನೂ ಎಷ್ಟೋ ಜನರ ಜೇಬು ಕತ್ತರಿಸುತ್ತಾನೆ. ಆದರೆ ನೀವು ಈ ಬಗ್ಗೆ ಏನನ್ನೂ ಮಾಡೋಕೆ ತಯಾರಿಲ್ಲ ಅಂತಾ ತಾನೆ ನೀವು ಹೇಳ್ತಿರೋದು ? ಸರೀನಾ ನಾನು ಹೇಳಿದ್ದು ?'

ಆ ಕಡೆಯಿಂದ ಒಪ್ಪಿಗೆ ಬಂತು. ಅದು ಸಾಧಾರಣ ಒಪ್ಪಿಗೆಯಲ್ಲ. ಮೌನ ಸಮ್ಮತಿ.

'ಗುಡ್ ಬೈ ಸಾರ್' ಎಂದ ಸ್ಯಾಮ್ಲರ್.

ಇಷ್ಟಾದ ಮೇಲಾದರೂ ಸ್ಯಾಮ್ಲರ್ ಆ ಬಸ್ಸಿನಲ್ಲಿ ಓಡಾಡುವುದನ್ನು ಬಿಡಬೇಕಿತ್ತು. ಆದರೆ ಹಾಗೆ ಮಾಡಲಿಲ್ಲ. ಅದೇ ಬಸ್ಸಿನಲ್ಲಿ ಮೊದಲಿಗಿಂತ ಹೆಚ್ಚು ಸಲ ಓಡಾಡತೊಡಗಿದ. ಕಳ್ಳನಿಗೆ ಅದು ರೆಗ್ಯುಲರ್ ರೂಟ್. ಪ್ರಯಾಣಕ್ಕೆ ತನ್ನ ಕಸುಬಿಗೆ ಚೊಕ್ಕದಾದ ವೇಷ, ಸೊಗಸಾದ ಉಡುಪು. ಸ್ಯಾಮ್ಲರ್ ಒಂದು ಸಲ ಅವನ ಒಂದು ಕಿವಿಯಲ್ಲಿ ಚಿನ್ನದ ರಿಂಗ್ ಇದ್ದುದನ್ನು ಗಮನಿಸಿದ. ಒಂದು ಕ್ಷಣ ಅವಾಕ್ಕಾದ. ಅವನ ಶ್ರೀಮಂತಿಕೆಯಲ್ಲಿ ಆಶ್ಚರ್ಯವೇನೂ ಕಾಣಲಿಲ್ಲ. ಇನ್ನು ಸುಮ್ಮನಿರಬಾರದು ಎನ್ನಿಸಿತು. ಎಂದೂ ಇಂಥವ್ರ ಬಗ್ಗೆ ಮನೆಯಲ್ಲಿ ಚಕಾರವೆತ್ತಿದವನಲ್ಲ. ಮನೆಯೊಡತಿ – ತನ್ನ ಸೋದರನ ಮಗಳು ಮಾರ್ಗೋಟ್‌ಗೆ ಹೇಳಿದ. ತನ್ನ ಮಗಳು ಷೂಲಾಳಿಗೂ ಹೇಳಿದ. ಆ ಕಟ್ಟುಮಸ್ತಾದ ಸ್ಫುರದ್ರೂಪಿ, ಜಬರ್ದಸ್ತಿನ ಕಳ್ಳ, ಆಫ್ರಿಕಾದ ರಾಜಕುಮಾರ, ಮಹಾನ್ ಕರಿಮೃಗ, ಒಂದಲ್ಲ ಒಂದು ದಿನ, ಕೊಲಂಬಸ್ ವೃತ್ತ, ವರ್ದಿ ಚೌಕದ ಮಧ್ಯೆ ಎಲ್ಲೊ ಸಿಕ್ಕಿಹಾಕಿಕೊಳ್ಳಲೇಬೇಕು.

ಮಾರ್ಗೋಟ್ ಕಣ್ಣರಳಿಸಿ, ಕಿವಿಯಗಲಿಸಿ ಕೇಳಿದಳು. ಅಂಥ ವಿಷಯ ಸಿಕ್ಕರೆ ಅವಳು ಇಡೀ ದಿನ ಅದರ ಬಗ್ಗೆ ಮಾತನಾಡಲು ತಯಾರು. ಆ ಕರಿಯ ಯಾರು? ಎಲ್ಲಿಂದ ಬಂದೋನು? ಅವನ ವರ್ಗಧೋರಣೆ ಅಥವಾ ವರ್ಣೀಯ ದೃಷ್ಟಿ ಏನಿರಬಹುದು? ಮನಶ್ಶಾಸ್ತ್ರೀಯವಾಗಿ ಅವನ ಅಭಿಪ್ರಾಯಗಳೇನು? ಅವನ ಸ್ವಂತ ಭಾವನೆಗಳು ಹೇಗಿರಬಹುದು? ಸೌಂದರ್ಯದ ಬಗ್ಗೆ – ರಾಜಕೀಯದ ಬಗ್ಗೆ ಅವನ ವಿಚಾರ ಏನು? ಕ್ರಾಂತಿಕಾರಿಯೋ ಅವನು? ಅಥವಾ ಬ್ಲಾಕ್‌ಗೆರಿಲ್ಲಾ ಇದ್ದರೂ ಇರಬಹುದಲ್ಲವೆ? ಮಾರ್ಗೋಟ್‌ಗೆ ಇದು ಚರ್ಚೆಗೆ ಹೇಳಿಮಾಡಿಸಿದ ತಾತ್ವಿಕ ಪ್ರಶ್ನೆ.

ಅಂಕಲ್ ಅರ್ಥರ್ ತೂಗುಮಂಚದಲ್ಲಿ, ಮಂಡಿ ಮುಂದೆಮಾಡಿ ತೇಲುಗಣ್ಣಿನ ಮೇಲೆ ತಂಪುಕನ್ನಡಕ ಹೊದಿಸಿ ಕುಳಿತಿದ್ದ. ಹಣೆಯ ಮೇಲಿಂದ ಇಳಿದ ರಕ್ತನಾಳ ಕವಲೊಡೆದಿತ್ತು. ದೊಡ್ಡ ಬಾಯಿ ಮಾತನಾಡಬಾರದೆಂದು ಸಂಕಲ್ಪಿಸಿದಂತಿತ್ತು.

ಮಾರ್ಗೋಟ್ ಹೇಳಿದಳು. 'ಇಲ್ಲಿ ಏನಾಗಿದೆ ಅಂದ್ರೆ, ಇದರಲ್ಲಿ ಸ್ಪಿರಿಟ್ ಆಫ್ ಈವಿಲ್' ಏನೂ ಇಲ್ಲ. ಅಂದ್ರೆ ಉದ್ದೇಶಪೂರ್ವಕವಾಗಿ ಯಾರೂ ದುಷ್ಟತನ ತೋರಿಸಿಲ್ಲ. ಈ ಜನ ಅಲ್ಪರು ಅಷ್ಟೆ. ಇವರೆಲ್ಲಾ ತೀರಾ ಸಾಮಾನ್ಯರು. ಕೆಳವರ್ಗದವರು, ಗುಮಾಸ್ತರು. ಲುಂಪನ್ ಪ್ರಾಲಿಟೇರಿಯಟ್. ಈ ಕ್ಷುದ್ರ ಜನಗಳನ್ನೊಳಗೊಂಡ ನಮ್ಮ ಸಾಮಾನ್ಯ ಸಮಾಜ, ಮಹಾನ್ ಕಳ್ಳರನ್ನು ಸೃಷ್ಟಿಸಲಾರದು. ಶ್ರಮವಿಭಜನೆಯ ಆಧುನಿಕ ಸಮಾಜ, ಜವಾಬ್ದಾರಿಯನ್ನು ಛಿದ್ರಛಿದ್ರ ಮಾಡಿದೆ. ಯಾರೂ ಯಾವುದಕ್ಕೂ ಜವಾಬ್ದಾರರಲ್ಲ. ದೈತ್ಯಮರಗಳನ್ನು ಅರಣ್ಯ ಎನ್ನುತ್ತಿದ್ದೆವು. ಈಗ ನೋಡಿ! ಆಳಕ್ಕಿಳಿಯದ ಸಣ್ಣ ಬೇರುಗಳ ಗಿಡಗಳನ್ನೇ ಕಾಡು ಎನ್ನುತ್ತಿದ್ದೇವೆ. ಆಧುನಿಕ ನಾಗರಿಕತೆಯಲ್ಲಿ ಮಹಾನ್ ವ್ಯಕ್ತಿಗಳು ಹುಟ್ಟುವುದು ಸಾಧ್ಯವಿಲ್ಲ. ಏನೆನ್ನುತ್ತಿ ಅಂಕಲ್?'

ಇದಕ್ಕೆ ಉತ್ತರ ಕೊಡುವುದು ವ್ಯರ್ಥ. ಮತ್ತಷ್ಟು ಚರ್ಚೆ, ಮತ್ತಷ್ಟು ವಿವರಣೆ. ಅಂಕಲ್ ಸ್ಯಾಮ್ಲರ್ ಹಳೆಯ ಕಾಲದ ಮನುಷ್ಯ. ತಮ್ಮೊಡನೆ ಮಾತನಾಡುತ್ತಿರುವ ಈ ಜರ್ಮನ್ ಯಹೂದಿ ಮಹಿಳೆಗೆ ಸೌಜನ್ಯಕ್ಕಾದರೂ ಏನನ್ನಾದರೂ ಹೇಳಬೇಕೆಂದುಕೊಂಡ ಎಪ್ಪತ್ತರ ಆ ಮುದುಕ.

'ಇಡೀ ಶತಮಾನದಲ್ಲೇ ಅತ್ಯಂತ ದೊಡ್ಡ ಅಪರಾಧವನ್ನೂ 'ಅದೇನು ಮಹಾ' ಎಂಬಂತೆ ಕಾಣುವುದು ಸಾಮಾನ್ಯತನ ಅಲ್ಲದಿರಬಹುದು. ರಾಜಕೀಯವಾಗಿ, ಮಾನಸಿಕವಾಗಿ ಜರ್ಮನರಿಗೆ ಮಹಾಪುರುಷನ ಕಲ್ಪನೆ ಇದೆ. ಸಾಮಾನ್ಯತೆ ಎನ್ನುವುದು ಕೇವಲ ವೇಷ ಅಷ್ಟೆ. ಒಂದು ಕೊಲೆಯನ್ನು ಕೊಲೆಯಲ್ಲ ಎಂಬಂತೆ ಕಾಣಲು ಇರುವ ಅತ್ಯಂತ ಪ್ರಬಲ ವಿಧಾನ ಯಾವುದು? ಅದೇ ಸಾಮಾನ್ಯತನ. 'ಓ ಕೊಲೆ ತಾನೆ, ಬಿಡಿ ಬಿಡಿ' ಎಂದರೆ ತೀರಿತು. ಬುದ್ಧಿಜೀವಿಗಳಿಗೆ ಭಾವನೆ ಎನ್ನುವುದೇ ಇಲ್ಲ. ಇಂಥದನ್ನು ತಾತ್ಸಾರದಿಂದ ಕಾಣುವುದನ್ನು ಅವರು ಸಾಹಿತ್ಯದಿಂದ ಕಲಿಯುತ್ತಾರೆ. ಅವರಿಗೆ ಕೆಟ್ಟವನು ಎಂದರೆ ಮುಮ್ಮಡಿ ರಿಚರ್ಡ್‌ನ ಥರ ಇರಬೇಕು. ನಾಜಿಗಳನ್ನು

ನೋಡಿ. ಅವರಿಗೆ ಕೊಲೆಯ ಅರ್ಥ ಗೊತ್ತಿಲ್ಲ ಎಂದುಕೊಳ್ಳಬೇಡಿ. ಕೊಲೆ ಎಂದರೇ ನೆಂದು ಎಲ್ಲರಿಗೂ ಗೊತ್ತು. ನಮ್ಮ ಪರಿಶುದ್ಧರಲ್ಲಿ ಪರಿಶುದ್ಧರಾದವರಿಗೆ, ಅನಾದಿ ಕಾಲದಿಂದಲೂ ಜೀವನದ ಪವಿತ್ರತೆ ತಿಳಿದಿದೆ. ಈ ಹಳೆಯ ಕಾಲದ ನಂಬಿಕೆಯನ್ನು ಅಲ್ಲಗಳೆಯುವುದು ಸಾಮಾನ್ಯತನ ಅಲ್ಲ. ಆದರೇ ಜೀವನದ ಪವಿತ್ರತೆಯನ್ನು ನಾಶ ಮಾಡಲು ಒಂದು ದೊಡ್ಡ ಪಿತೂರಿಯೇ ನಡೆದಿದೆ. ಅಂತಸ್ಸಾಕ್ಷಿಯನ್ನು ನಿರ್ನಾಮ ಮಾಡಲು ನಾವು ಬುದ್ಧಿಪೂರ್ವಕವಾಗಿ ಬಳಸುವ ಹಗಲುವೇಷ ಈ ಸಾಮಾನ್ಯತನ. 'ಅದೇನು ಮಹಾ ಈಗ ಎಲ್ಲಾ ಕಡೆ ಇದೆ' ಎನ್ನುವ ಧೋರಣೆ. ಇದೇನು ಅಂಥಿಂಥಾ ಪಿತೂರಿಯೆ? ಜೀವನ ಕ್ಷುದ್ರವಾದಾಗ ಮಾತ್ರ ಅಪರಾಧ 'ಇದೇನು ಮಹಾ' ಎಂದಾಗುತ್ತದೆ.

ಸ್ವಲ್ಪ ದಿನ ಸ್ಕ್ಯಾಮ್ಲರ್ ಕಳ್ಳನನ್ನು ಮರೆತುಬಿಟ್ಟ. ಕೊಲಂಬಸ್ ವೃತ್ತಕ್ಕೆ ಹೋದಾಗ ಮಾತ್ರ ಅವನ ಜ್ಞಾಪಕ. ಕಳ್ಳ ಮೇಲೆ ಹೋಗುವ ಬಸ್ಸನ್ನು ಮಾತ್ರ ಹತ್ತುತ್ತಿದ್ದ. ಬರುವಾಗಿನ ಬಸ್ಸನ್ನು ಅಲ್ಲ. ಬಸ್ಸಿನ ಹಿಂಭಾಗದ ಮೂಲೆ ಅವನ ಜಾಗ. ಅದೇ ಒಂಟೆ ಚರ್ಮದ ಕೋಟು. ಬಸ್ಸಿನ ಇಡೀ ಮೂಲೆಯನ್ನು ಆಕ್ರಮಿಸಿ ನಿಲ್ಲುವ ರಾಕ್ಷಸದೇಹ. ಸ್ಕ್ಯಾಮ್ಲರ್ ಅತ್ತ ನೋಡಬಾರದೆಂದು ಎಷ್ಟೇ ಅಂದು ಕೊಂಡರೂ ಆಗದೆ ಅತ್ತ ನೋಡಿದ. ನೋಡಬಾರದೆಂದು ಅವನ ಇಷ್ಟ. ಆದರೆ ಒಳಮನಸ್ಸು ನೋಡು, ನೋಡು ಎಂದು ಚೀರುತ್ತಿತ್ತು. ವಿಧಿನಿಯಮದಂತೆ, ಪ್ರಕೃತಿಯ ಸಹಜತೆಯಂತೆ. ಮೇಲೆಸೆದ ಕಲ್ಲು ಕೆಳಗೆ ಬಿದ್ದೇಬೀಳುವಂತೆ, ಆವಿ ಮೇಲೇರುವಂತೆ, ಅಷ್ಟೇ ಸಹಜ, ಅಷ್ಟೇ ನಿಶ್ಚಿತ. ಕಳ್ಳ ಬಸ್ಸು ಹತ್ತುವುದು ಪ್ರಯಾಣ ಮಾಡಲು ಅಲ್ಲ, ಬೇಕಾದವರ ಮನೆಗೆ ಹೋಗಲೂ ಅಲ್ಲ. ತಾನು ಮನೆ ತಲುಪಲೂ ಅಲ್ಲ. ಬೇಕಿದ್ದರೆ ಟ್ಯಾಕ್ಸಿಯಲ್ಲಿ ಹೋಗಬಹುದು. ಅದು ಅವನಿಗೆ ಕಷ್ಟವೂ ಅಲ್ಲ. ಈಗ ಬಸ್ಸು ಹತ್ತಿದ್ದಾನೆ ಎಂದರೆ ಒಂದೇ ಉದ್ದೇಶ. ಸ್ಕ್ಯಾಮ್ಲರ್ ಕಳ್ಳನ ಕೈಯನ್ನೇ ಗಮನಿಸುತ್ತಿದ್ದ. ಕಳ್ಳನನ್ನು ಬಿಟ್ಟರೆ, ಬಸ್ಸಿನಲ್ಲೆಲ್ಲಾ ಅತ್ಯಂತ ಎತ್ತರದ ವ್ಯಕ್ತಿ ಅವನೇ. ಕಳ್ಳ ಬಸ್ಸಿನ ಹಿಂದೆ ಯಾರನ್ನೋ ಆರಿಸಿಕೊಂಡ. ಮುಂದೆ ಬಗ್ಗಿ, ತನ್ನ ಹರವಾದ ಬೆನ್ನನ್ನು ಅಡ್ಡಮಾಡಿ ತನ್ನ ಬೇಟೆಯನ್ನು ಇತರ ಪ್ರಯಾಣಿಕ ರಿಂದ ಮರೆಮಾಡಿದ. ಸ್ಕ್ಯಾಮ್ಲರ್ ಎತ್ತರವಾಗಿದ್ದುದರಿಂದ ಕಳ್ಳ ಮಾಡುವುದು ಕಾಣುತ್ತಿತ್ತು. ಅವನು ಆರಿಸಿಕೊಂಡ ಬೇಟೆ ಒಬ್ಬ ಮುದುಕ. ಕೃಶಕಾಯ ಭಯ ದಿಂದ ನೀರಾಡುವ ಕಣ್ಣುಗಳು. ಕೆಂಪುರೆಪ್ಪೆ, ಬಿಳಿರೆಪ್ಪೆ ಕೂದಲು. ತೆರೆದ ಬಾಯಿಂದ ಕಟ್ಟಿಸಿಕೊಂಡ ಹಲ್ಲು ವಸಡಿನಿಂದ ಇಳಿಬಿದ್ದಿತ್ತು. ಕೋಟು, ಜಾಕೆಟು, ಎರಡೂ ಗುಂಡಿ ಹಾಕಿರಲಿಲ್ಲ. ಶರ್ಟು ಹರಿದ ವಾಲ್‌ಪೇಪರಿನಂತೆ ಮುಂದೆ ಚಾಚಿತ್ತು. ಮೇಲಂಗಿಯ ಕೊನೆ ಹರಿದಿತ್ತು. ರೋಗಿಯನ್ನು ತಪಾಸಿಸುವ ಡಾಕ್ಟರಂತೆ ಕಳ್ಳ ಮುದುಕನ ಟೈ ಮತ್ತು ಸ್ಕಾರ್ಫ್‌ನ್ನು ಸರಿಸಿ ಕೋಟಿನಿಂದ ಹಣದ ಚೀಲ ತೆಗೆದು ಕೊಂಡ. ಸ್ವಲ್ಪ ಹಿಂದೆ ಸರಿದ. ಅವನ ಹಣೆಯಲ್ಲಿ ಗೆರೆ ಮೂಡಿದವು. ಕಾತರದಿಂದ

ಅಲ್ಲಿ, ಉದ್ದನೆಯ ವ್ಯಾಲೆಟ್ಟು. ಚರ್ಮ-ಪ್ಲ್ಯಾಸ್ಟಿಕ್‌ನಿಂದ ಮಾಡಿದ್ದು. ಕಳ್ಳ ಚೀಲದ ಬಾಯಿ ತೆರೆದ. ಒಂದೆರಡು ನೋಟುಗಳು, ಕೆಲವು ಕಾರ್ಡ್‌ಗಳು. ಕಳ್ಳ ಅವನ್ನು ಅಂಗೈಲಿರಿಸಿಕೊಂಡ. ತಲೆ ಓರೆಮಾಡಿ ಓದಿದ. ಹಸಿರುಬಣ್ಣದ ಚೆಕ್ ತೆಗೆದು ಪರೀಕ್ಷಿಸಿದ. ಯಾವುದೋ ಭದ್ರತಾ ಬಾಂಡ್ ಇರಬೇಕು.

ತಂಪು ಕನ್ನಡಕದ ಮೂಲಕ ದೃಷ್ಟಿಸಿ ನೋಡುವುದು ಕಷ್ಟವಾಯಿತು ಸ್ಕ್ಯಾಮ್ಲರ್‌ಗೆ. ಹೃದಯದಲ್ಲಿ ಅಡ್ರಿನಾಲಿನ್ ರಸದ ಸಂಚಾರ ಆತಂಕಪಡಿಸುವ ವೇಗದಲ್ಲಿ ಹೆಚ್ಚಾಗುತ್ತಿತ್ತು. ಸ್ಕ್ಯಾಮ್ಲರ್ ಹೊರಗೆ ಹೆದರಿಕೊಂಡಿರಲಿಲ್ಲ. ಆದರೆ ಹೃದಯ ಮಾತ್ರ ಹೆದರಿಕೆಯನ್ನು ದಾಖಲು ಮಾಡುತ್ತಿತ್ತು. ಹೌದು ಅದನ್ನು 'ಟ್ಯಾಕಿಕಾರ್ಡಿಯಾ' ಎನ್ನುತ್ತಾರೆ. ಉಸಿರಾಟ ಕಷ್ಟವಾಯಿತು. ಒಳಕ್ಕೆ ಉಸಿರೆಳೆದುಕೊಳ್ಳುವುದೂ ಸಾಧ್ಯವಾಗಲಿಲ್ಲ. ಬವಳಿ ಬಂದು ಬೀಳುವುದು ಎನ್ನಿಸಿತು. ಹೃದಯ ಸ್ತಂಭನ ಆಗಲಾರದಷ್ಟೆ! ನೋಟು, ಚೆಕ್ಕನ್ನು ಕಳ್ಳ ತನ್ನ ಜೋಬಿನಲ್ಲಿಟ್ಟುಕೊಂಡ. ಕಾರ್ಡುಗಳನ್ನು ಬಿಡಿ ಫೋಟೋಗಳಂತೆ ಒಂದೊಂದಾಗಿ ಕೆಳಗೆ ಹಾಕಿದ. ಕೆಲಸ ಮುಗಿಯಿತು. ವ್ಯಾಲೆಟ್ಟನ್ನೂ ಕಳ್ಳ ಮತ್ತೆ ಮುದುಕನ ಕೋಟಿನೊಳಕ್ಕೇ ಹಾಕಿದ. ಮಫ್ಲರನ್ನು ಮಧ್ಯದ ಬೆರಳಿಂದ ಸರಿಮಾಡಿದ. ಟೈಯನ್ನು ಮೊದಲಿದ್ದಂತೆ ಮೇಲಕ್ಕೆ ಸರಿಸಿದ. ಅಂದರೆ ಮೊದಲು ಹೇಗಿತ್ತೋ ಸರಿಯಾಗಿ ಹಾಗೇ ಅಲ್ಲ. ಅದಕ್ಕೆ ಹತ್ತಿರ ಹತ್ತಿರ. ಆಗಲೇ, ಕಳ್ಳ ಗರಕ್ಕನೆ ತಿರುಗಿನೋಡಿದ್ದು. ಸ್ಕ್ಯಾಮ್ಲರ್ ನೋಡುತ್ತಿದ್ದ. ಅವನು ಕಳ್ಳನಿಗೆ ಸಿಕ್ಕಿಬಿದ್ದಿದ್ದ ಅವನ ಹೃದಯ ಇನ್ನೂ ಜೋರಾಗಿ ಹೊಡೆದುಕೊಂಡಿತು. ಅದನಿಂದಲೇ ಓಡಿಹೋಗುತ್ತಿರುವಂತೆ ಅನ್ನಿಸಿತು. ನಾಲಿಗೆ, ಬಾಯಿ ಸಂಪೂರ್ಣವಾಗಿ ಒಣಗಿದವು. ಕಣ್ಣಲ್ಲಿ ನೋವು ಕಾಣಿಸಿಕೊಂಡಿತು. ಸ್ಕ್ಯಾಮ್ಲರ್ ಧೃತಿಗೆಡಲಿಲ್ಲ. ದೃಷ್ಟಿ ತಪ್ಪಿಸಲು ಕಿಟಕಿಯಿಂದ ರಸ್ತೆಯ ಕಡೆ ನೋಡಿದ. ತೊಂಬತ್ತಾರನೇ ರಸ್ತೆ ಬರುತ್ತಿತ್ತು. ದಾರಿಬಿಡಿಸಿಕೊಂಡು ಸರಸರನೆ ಬಾಗಿಲಿನತ್ತ ನಡೆದ. ಬೆಲ್ಲಿನ ದಾರ ಸಿಕ್ಕಿತು. ಜಗ್ಗಿದ. ಬಾಗಿಲಿನಿಂದ ನುಸುಳಿ ಕೆಳಗಿಳಿದು, ಕೊಡೆಯ ಬಟನ್ ಮೇಲೆ ಬೆರಳಿಟ್ಟು ಫುಟ್‌ಪಾತ್ ಮೇಲೆ ನಿಂತ. ಬಸ್ಸು ಹೊರಟುಹೋಯಿತು.

ಟ್ಯಾಕಿಕಾರ್ಡಿಯ ಈಗ ಸ್ಥಿಮಿತಕ್ಕೆ ಬಂದಿತ್ತು. ನಡೆಯತೊಡಗಿದ. ಮಾಮೂಲಿ ವೇಗದಲ್ಲಿ ನಡೆಯುವುದು ಸಾಧ್ಯವಾಗಲಿಲ್ಲ. ರಿವರ್‌ಸೈಡ್ ದಾಟಿ ಮೊದಲು ಸಿಗುವ ಕಟ್ಟಡದೊಳಕ್ಕೆ ನುಸುಳಬೇಕೆಂದು ಅಂದುಕೊಂಡ. ಅದೇ ಅವನ ಮನೆ ಎಂದು ಕಳ್ಳ ಅಂದುಕೊಳ್ಳಲಿ. ಬಸ್ಸಿನಿಂದಿಳಿಯುವಾಗಲೇ ಕಳ್ಳನನ್ನು ಹಿಂದೆ ಹಾಕಿದ್ದ ಅಥವಾ ಈ ಮುದುಕ ಯಾವ ಲೆಕ್ಕ ಎಂದು ಕಳ್ಳನೇ ಬೆನ್ನುಹತ್ತಿರಲಿಲ್ಲವ್ವೋ ಏನೋ. ಅವನಿಗೆ ಯಾರ ಹೆದರಿಕೆಯೂ ಇದ್ದಂತೆ ತೋರಲಿಲ್ಲ. ಜನ ಅಂಜುಬುರುಕರು, ಹೇಡಿಗಳು ಎಂದು ಅವನಿಗೆ ಚೆನ್ನಾಗಿ ಗೊತ್ತಿರಬಹುದು. ಹೇಗಾದರೂ ಇರಲಿ, ಒಳಗಡೆ ಪಡಸಾಲೆಯಲ್ಲಿ ಯಾರೂ ಕಾಣಲಿಲ್ಲ. ಎಲಿವೇಟರ್ ಬೇಡವೆಂದು ಮೆಟ್ಟಿಲು ಎಲ್ಲಿದೆಯೆಂದು ಹುಡುಕಿ, ಹತ್ತಿ ಮೊದಲ ಮಹಡಿಯ ಮೆಟ್ಟಿಲ ಮೇಲೆ

ಕುಳಿತ. ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡ ಮೇಲೆ ಶಕ್ತಿ ಮರಳಿ ಬಂದಂತಾಯಿತು. ಆದರೂ ಒಳಗೇ ಏನನ್ನೋ ಕಳೆದುಕೊಂಡಂತೆ, ಏನೋ ಕೃಶವಾದಂತೆ. ಆ ಕಟ್ಟಡಕ್ಕೆ ಹಿಂಬಾಗಲು ಇರಲಿಲ್ಲ. ಮತ್ತೆ ರಸ್ತೆಗೆ ಬರುವ ಮುಂಚೆ ಕೊಡೆಯನ್ನು ಕೋಟಿನೊಳಗೆ ಸೇರಿಸಿ ತೋಳಿಗೆ ಸಿಕ್ಕಿಸಿಕೊಂಡ. ಹ್ಯಾಟನ್ನು ಸ್ವಲ್ಪ ಅಮುಮಿ ಅದರ ಆಕಾರವನ್ನು ಬದಲಾಯಿಸಿಕೊಂಡ. ವೆಸ್ಟೆಂಡ್ ದಾಟಿ ಬ್ರಾಡ್‌ವೇಗೆ ನಡೆದ. ಮೊದಲು ಸಿಕ್ಕ ಹ್ಯಾಂಬುರ್ಗರ್ ಜಾಯಿಂಟ್‌ನಲ್ಲಿ ಹಿಂದೆ ಕುಳಿತು ಟೀ ತರಲು ಹೇಳಿದ. ದೊಡ್ಡ ಕಪ್ಪಿನ ತುಂಬಾ ಕೊಟ್ಟ ಟೀಯನ್ನು ಒಂದು ತೊಟ್ಟೂ ಬಿಡದೆ ಕುಡಿದ. ನೀರಿನ ಚೀಲದ ತಳದ ವಾಸನೆ ಬರುವ ತನಕ ಖಾಲಿಮಾಡಿದ. ಬಾಯಿ ಇನ್ನೂ ತುಂಬಾ ಆರಿದೆ ಎನ್ನಿಸಿ ಇನ್ನಷ್ಟು ನೀರು ತರಲು ಹೇಳಿದ. ಕಿಟಕಿಯಲ್ಲಿ ಕಳ್ಳನ ಮುಖ ಕಾಣಲಿಲ್ಲ. ಈಗ ಹಾಸಿಗೆಯನ್ನು ಕಂಡರೆ ಸಾಕೆನಿಸಿತು ಸ್ಯಾಮ್ಲರ್‌ಗೆ. ತಲೆ ಮರೆಸಿಕೊಳ್ಳುವ ಕಲೆ ಸ್ಯಾಮ್ಲರ್‌ಗೆ ತಿಳಿದಿತ್ತು. ಯುದ್ಧ ಕಾಲದಲ್ಲಿ, ಪೋಲೆಂಡ್‌ನಲ್ಲಿ, ಸೆಲರ್‌ಗಳಲ್ಲಿ, ಓಡಾಡುವ ಓಣಿಗಳಲ್ಲಿ, ಸ್ಮಶಾನಗಳಲ್ಲಿ ಮಲಗಿದ್ದ ಅವನಿಗೆ ಅದು ಕರಗತವಾಗಿತ್ತು. ರಸ್ತೆಗಿಳಿದರೆ ಗುಂಡಿಕ್ಕುವ, ಬಗ್ಗಿದರೆ ತಲೆಯೊಡೆಯುವ, ಗಲ್ಲಿಗಳಲ್ಲಿ ಸಿಕ್ಕರೆ ಇಲಿ ಹೊಡೆಯುವಂತೆ ಹೊಡೆದು ಸಾಯಿಸುವ ಸ್ಥಿತಿ ನಾಗರಿಕ ಜೀವನದಲ್ಲಿ ಇರುವುದಿಲ್ಲ ನಿಜ. ಆದರೆ ಸಂಪೂರ್ಣವಾಗಿ ಅಲ್ಲ ಎಂಬುದನ್ನು ಸ್ಯಾಮ್ಲರ್ ಬಲ್ಲ. ಆ ಗೆರೆ ಸ್ವಲ್ಪ ಅಳಿಸಿದರೂ ಸುರಕ್ಷತೆಗೆ ಚ್ಯುತಿ ಬಂದಂತೆಯೇ. ನ್ಯೂಯಾರ್ಕ್‌ಗೆ ಬಂದ ಮೇಲೆ ತಲೆ ಮರೆಸಿಕೊಂಡು ಮನೆ ತಲುಪುವ ಸ್ಥಿತಿ ಬಂದಿರಲಿಲ್ಲ. ಈಗ ಹಾಸಿಗೆ ಕಂಡರೆ ಸಾಕೆನಿಸುವಷ್ಟು ಮೈಮೂಳೆ ನೋಯುತ್ತಿದ್ದರೂ, ದಿಂಬಿಗೆ ತಲೆ ಕೊಟ್ಟರೆ ಸಾಕೆಂದು ಅನ್ನಿಸುತ್ತಿದ್ದರೂ ಸ್ಯಾಮ್ಲರ್ ಟೀ ಮುಂದಿಟ್ಟುಕೊಂಡು ಕುಳಿತಿದ್ದ. ಬಸ್ಸಿನಲ್ಲಂತೂ ಇನ್ನು ಮುಂದೆ ಓಡಾಡುವಂತಿಲ್ಲ. ಸಬ್‌ವೇನೇ ಗತಿ. ಅಬ್ಬಾ ಏನು ಹೊಲಸು!

ಸ್ಯಾಮ್ಲರ್‌ನ ಕ್ರಮದಿಂದ ಕಳ್ಳ ವಿಚಲಿತನಾಗಿರಲಿಲ್ಲ. ಅವನಿಗೆ ವೇಗವಾಗಿ ನಡೆಯಬಲ್ಲ ಶಕ್ತಿ ಇದ್ದೇ ಇತ್ತು. ಮಧ್ಯ ಎಲ್ಲೋ ಬಸ್ಸಿನಿಂದ ಇಳಿದು ಹಿಂದಕ್ಕೆ ಬಂದಿರಬೇಕು ಅಥವಾ ಈ ಮೊದಲೇ ಯಾವಾಗಲೋ ಸ್ಯಾಮ್ಲರ್‌ನನ್ನು ಹಿಂಬಾಲಿಸಿ ಮನೆಯನ್ನು ನೋಡಿರಬೇಕು. ಹೌದು, ಹಾಗೇ ಆಗಿರಬೇಕು, ಏಕೆಂದರೆ ಸ್ಯಾಮ್ಲರ್ ತನ್ನ ಮನೆಯ ಪಡಸಾಲೆಯೊಳಕ್ಕೆ ಕಾಲಿಡುತ್ತಿದ್ದಂತೆಯೇ ಹಿಂದಿನಿಂದ ಒಳನುಗ್ಗಿದ. ಅಷ್ಟೇ ಅಲ್ಲ, ಹಿಂದಿನಿಂದ, ಸ್ಯಾಮ್ಲರ್‌ನ ಬೆನ್ನಿಗೆ ಹೊಟ್ಟೆಯಿಂದ ಒತ್ತುತ್ತಾ ಒಳಕ್ಕೆ ದಬ್ಬಿಕೊಂಡೇ ಬಂದ. ಕೈ ಎತ್ತಿದ. ಆದರೆ ಹೊಡೆಯಲಿಲ್ಲ. ಕೈಯಿಂದ ನೂಕಿದ. ಫ್ಲಾಟಿನ ಕಾವಲುಗಾರ ಇರಲಿಲ್ಲ. ಬಾಗಲು ಕಾಯುವವನೇ ಎಲಿವೇಟರನ್ನು ನಡೆಸುವವನೂ ಸಹ. ಅವನೂ ಇರಲಿಲ್ಲ.

'ಏನು ಬೇಕು ನಿನಗೆ?' ಅಂದ ಸ್ಯಾಮ್ಲರ್.

ಆ ಕರಿಮುನಿ ಧ್ವನಿಯನ್ನು ಕೇಳುವ ಸೌಭಾಗ್ಯ ಸ್ಕ್ಯಾಪ್ಲರ್‌ಗೆ ಇರಲಿಲ್ಲ. ಪ್ರಾಯಶಃ ಕಳ್ಳ ಇಬ್ಬರೂ ಒಂದೆ. ಅವನು ಮಾಡಿದ್ದಿಷ್ಟೆ. ಅಲ್ಲಿ ಒಂದು ಕರಿಯ ಕೆತ್ತನೆಯ ದೊಡ್ಡ ಮೇಜಿತ್ತು. ಮೊದಲೇ ಹಾಳುಸುರಿಯುವಂತಿದ್ದ ಪಡಸಾಲೆ ಆ ಟೇಬಲ್‌ನಿಂದಾಗಿ ಇನ್ನಷ್ಟು ಮಂಕಾಗಿ ಕಾಣುತ್ತಿತ್ತು. ಅದರ ಪಕ್ಕ, ಕೆಂಪು ದೀಪದ ಕೆಳಗೆ, ಮೂಲೆಗೆ ಕಳ್ಳ ಸ್ಕ್ಯಾಪ್ಲರ್‌ನನ್ನು ತಳ್ಳಿ ಗೋಡೆಗೊತ್ತಿ ನಿಲ್ಲಿಸಿದ. ತೋಳಿಗಿದ್ದ ಕೊಡೆ ಬಿದ್ದು ಪಟಾರೆಂದು ಶಬ್ದವಾಯಿತು. ಕಳ್ಳ ಅದರ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ಒಂದು ಕೈಲಿ ಸ್ಕ್ಯಾಪ್ಲರ್‌ನ ತೋಳನ್ನು ಒತ್ತಿಹಿಡಿದು ಇನ್ನೊಂದು ಕೈಲಿ ತನ್ನ ಬಟ್ಟೆಯ ಗುಂಡಿ ಬಿಚ್ಚಿದ. ಪರ್ ಎಂದು ಅವನ ಪ್ಯಾಂಟಿನ ಜಿಪ್ ಎಳೆದದ್ದು ಸ್ಕ್ಯಾಪ್ಲರ್‌ಗೆ ಕೇಳಿಸಿತು. ಅವನ ತಂಪು ಕನ್ನಡಕವನ್ನು ತೆಗೆದು ಕಳ್ಳ ಟೇಬಲ್ ಮೇಲೆ ಎಸೆದ. ಸ್ಕ್ಯಾಪ್ಲರ್ ಕೆಳಗೆ ನೋಡಲೇಬೇಕಾಯಿತು. ನೋಡಿದ ಮೌನವಾಗಿ. ಎರಡು ದೊಡ್ಡ ಅಂಡಾಕೃತಿಗಳು, ತೆಳು ನೇರಳೆ ಬಣ್ಣದ ರಬ್ಬರ್ ಕೊಳವೆ, ಕಪ್ಪಾದ ರೋಮಗಳು, ಕಾಮನಬಿಲ್ಲಿನ ಬಣ್ಣದ ಚರ್ಮದ ಆನೆಯ ಸೊಂಡಿಲು. ಕಳ್ಳ ಸ್ಕ್ಯಾಪ್ಲರ್‌ನನ್ನು ಬಲವಾಗಿ ಒತ್ತಿ ಹಿಡಿದಿದ್ದ. ಹಾಗಿಲ್ಲದಿದ್ದರೂ ಸ್ಕ್ಯಾಪ್ಲರ್‌ಗೆ ಅದು ಕಾಣುತ್ತಿತ್ತು.

ಕಳ್ಳ ತುಂಬಾ ಹೊತ್ತು ಅದೇ ಭಂಗಿಯಲ್ಲಿದ್ದ. ಅವನ ದೃಷ್ಟಿಯಲ್ಲಿ ಕೆಟ್ಟತನಕ್ಕಿಂತ ಬಲಿಷ್ಠತನದ ಗಾಂಭೀರ್ಯವಿತ್ತು. ದರ್ಪವಿತ್ತು. ಅವನ ಕ್ರಿಯೆಯಲ್ಲಿ ಮನಸ್ಸಿಗೆ ಮಂಕುಹಿಡಿಸುವ ದೃಢತೆ ಇತ್ತು.

ಕಳ್ಳ ಜಿಪ್ ಮೇಲಕ್ಕೆಳೆದುಕೊಂಡ. ಗುಂಡಿಹಾಕಿಕೊಂಡ. ಸಾಧನೀಯವನ್ನು ಸಾಧಿಸಿ ತೋರಿಸಿಯಾಗಿತ್ತು. ಸ್ಕ್ಯಾಪ್ಲರ್‌ನ ಬಂಧವಿಮೋಚನೆಯಾಯಿತು. ಬಲಿಷ್ಠ ಕೈ ಸಿಲ್ಕ್ ಟೈಯನ್ನು ಬಲಿಷ್ಠ ಎದೆಯ ಮೇಲೆ ಎಳೆದು ಸಮವಾಡಿತು. ಕಪ್ಪು ಕಣ್ಣುಗಳು ದರ್ಪದ ಬೆಳಕನ್ನು ಸೂಸುತ್ತಾ ನಿಧಾನವಾಗಿ ಚಲಿಸಿದವು. ಶಾಸ್ತಿ, ಎಚ್ಚರಿಕೆ, ಮೌನ ಉಪದೇಶದ ಮುಖಾಮುಖಿ ಗೋಷ್ಠಿ ಮುಗಿದಿತ್ತು. ಕಳ್ಳ ಟೇಬಲ್ ಮೇಲಿಂದ ಕನ್ನಡಕ ತೆಗೆದು ಸ್ಕ್ಯಾಪ್ಲರ್‌ನ ಮೂಗಿನ ಮೇಲೆ ಇಟ್ಟ. ತನ್ನ ಕಪ್ಪು ಕನ್ನಡಕ ಬಿಡಿಸಿ ಏರಿಸಿಕೊಂಡ. ಚಿನ್ನದ ಕಟ್ಟಿನ, ಗುಂಡನೆಯ ಕಡುನೀಲಿ ಗಾಜು.

ಅವನು ಹೊರಟುಹೋದ. ಎಲಿವೇಟ್ ಸೆಲರ್‌ನಿಂದ ಢಪ್ ಎಂದು ಕೆಳಗಿಳಿದು ಹೊರಬಾಗಿಲು ತೆರೆದುಕೊಂಡಿತು. ಕೆಳಗೆ ಬಿದ್ದಿದ್ದ ಕೊಡೆಯನ್ನು ಸ್ಕ್ಯಾಪ್ಲರ್ ಕೈಗೆತ್ತಿಕೊಂಡು ಬಾಗಿಸಿಂತು ಮೇಲೇರಿದ. ಬಾಗಿಲು ಕಾಯುವವನು ಏನೂ ಮಾತನಾಡಲಿಲ್ಲ. ಅವನ ಅಸಾಮಾಜಿಕತೆಗಾಗಿ ಅವನಿಗೆ ಕೃತಜ್ಞನಾಗಿರಬೇಕು. ಪುಣ್ಯಕ್ಕೆ ಮಾರ್ಗ್ರೇಟ್ ಕೂಡ ಎಡತಾಗಲಿಲ್ಲ. ಹಾಸಿಗೆ ಮೇಲೆ ಉರುಳಿ ಕಾಲುಚಾಚಿದ. ಕ್ಷೀಣವಾದ ಉಸಿರಾಟ, ಎದೆಯಲ್ಲಿ ನೋವು, ಮಂಕುಬಡಿದ ಮನಸ್ಸು. ಚಿತ್ರವಿಲ್ಲದೆ ಗೊಂಯ್ ಎನ್ನುವ ಪಡಸಾಲೆಯ ಖಾಲಿ ಟೆಲಿವಿಷನ್‌ನ ಬಳಿ-ಬೂದು ಪರದೆಯಂತೆ. ಕತ್ತಲು ಕವಿದ ಆಟ್ಕೆ.

ದಿಂಬಿಗೆ ತಲೆ ಇಟ್ಟಾಗ ಮಧ್ಯೆ ಏನೋ ಸಿಕ್ಕಿತು. ಹಸಿರು ಬಣ್ಣದ ಹೊಳೆಯುವ ರಟ್ಟಿನ ಪುಸ್ತಕ. ಅದಕ್ಕೆ ಒಂದು ಚೀಟಿ ಅಂಟಿಸಿತ್ತು. ದೀಪದ ಹತ್ತಿರ ಹೋಗಿ, ಕಣ್ಣಿಗೆ ಹತ್ತಿರ ಹಿಡಿದು ಮನಸ್ಸಿನಲ್ಲೇ ಓದಿಕೊಂಡ ಸ್ಯಾಮ್ಲರ್. ಚೀಟಿಯನ್ನು ಬರೆದದ್ದು ಎಸ್. (ಅಂದರೆ ಷೂಲಾ ಅಥವಾ ಸ್ಯಾವ)

"ಡ್ಯಾಡಿ, ಚಂದ್ರನ ಮೇಲಿನ ಡಾ. ಟಿ. ಗೋವಿಂದಲಾಲ್ ಅವರ ಈ ಉಪನ್ಯಾಸಗಳನ್ನು ಅವರು ಕೆಲವೇ ದಿನಗಳ ಮಟ್ಟಿಗೆ ನಮಗೆ ಕೊಟ್ಟಿದ್ದಾರೆ. ಅವು 'ಮೆಮೋಯರ್ಸ್'ಗೆ ಸಂಬಂಧಪಟ್ಟವು." "ಅಂದರೆ ಎಚ್. ಜಿ. ವೆಲ್ಸರ ಚಂದ್ರನ ಮೇಲೆ 1900ರ ಬರಹ. "ಇದು ಇತ್ತೀಚಿನ ಕೃತಿ. ತುಂಬಾ ಚೆನ್ನಾಗಿದೆ. ಡ್ಯಾಡಿ, ನೀವು ಓದಲೇಬೇಕು. ಹೇಗಾದರೂ ಸರಿ. ಡಾ. ಲಾಲ್ ಕೊಲಂಬಿಯಾದಲ್ಲಿ ಈಗ ಗೆಸ್ಟ್ ಲೆಕ್ಚರ್ ಕೊಡುತ್ತಿದ್ದಾರೆ. ಪುಸ್ತಕ ಅವರಿಗೆ ವಾಪಸ್ ಕೊಡಬೇಕು."

ಸ್ಯಾಮ್ಲರ್‌ನ ಮುಖ ಗಂಟಿಕ್ಕಿತು. ತಾಳ್ಮೆ, ನಿಧಾನಗಳೆಲ್ಲಾ ಹಾರಿಹೋದವು. ಮಗಳ ಏಕನಿಷ್ಠೆಯ, ಸತತ-ಭಯಂಕರ ಆಸಕ್ತಿಯನ್ನು ಕಂಡು ಜಿಗುಪ್ಸೆ ಬಂತು. ಮೈಯನ್ನು ಸೆಟೆಸುವ, ಶ್ವಾಸಕೋಶವನ್ನೇ ಕೀಳುವಂತೆ ದೊಡ್ಡದಾಗಿ ಉಸಿರೆಳೆದು ಕೊಂಡ.

ಮತ್ತೆ ನೋಟ್ ಪುಸ್ತಕದ ಮೇಲೆ ಬಗ್ಗಿ ಇಂಕ್ – ಕೈಬರಹವನ್ನು ಓದಿದ. 'ಚಂದ್ರನ ಭವಿಷ್ಯ' ಮೊದಲನೆಯ ವಾಕ್ಯ "ಇನ್ನೂ ಎಷ್ಟು ಕಾಲ ಈ ಭೂಮಿ ಮಾನವನ ಏಕೈಕ ವಾಸಸ್ಥಾನವಾಗಿರಲು ಸಾಧ್ಯ ?" ಎಂದಿತ್ತು.

---

(Mr. Sammler's Plannet ಕಾದಂಬರಿಯ ಮೊದಲ ಅಧ್ಯಾಯದಿಂದ ಸಂಗ್ರಹಿಸಿದ್ದು)

ತ್ರೀಪ್ರ್ಗ

---

ಮೂಲ : ಮಾರ್ಟಿನ್ ಬೂಬರ್

ಅನು : ಬಿ. ವೈ. ಲಲಿತಾಂಬ

[ಮಾರ್ಟಿನ್ ಬೂಬರ್ – ಖ್ಯಾತ ಯೆಹೂದಿ ತತ್ತ್ವಜ್ಞಾನಿ ಹಾಗೂ ಧರ್ಮೋಪದೇಶಕ ಮತ್ತು 'ಹ್ಯಾಸಿಡಿಕ್ ರಹಸ್ಯವಾದ'ವನ್ನು ಜಗತ್ತಿಗೆ ಪರಿಚಯ ಮಾಡಿಸಿದ ವ್ಯಕ್ತಿ. ಹ್ಯಾಸಿಡಿಕ್ ಕತೆಗಳನ್ನು ಐತಿಹಾಸಿಕ ಹಾಗೂ ತತ್ತ್ವಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದ ವ್ಯಕ್ತಿ. 'ನಾನು ಮತ್ತು ನೀನು', ಮನುಷ್ಯ-ಮನುಷ್ಯರ ನಡುವೆ, ಮನುಷ್ಯ ಹಾಗೂ ದೇವರ ನಡುವೆ ಇರಬಹುದಾದ ಸಂಬಂಧಗಳ ಬಗ್ಗೆ ಚರ್ಚೆ ನಡೆಯಲೇಬೇಕೆಂದು ಪಟ ಹಿಡಿದ ವ್ಯಕ್ತಿ.]

ಒಮ್ಮೆ ಹೀಗಾಯಿತು – ಅದು ವಾರದ ನಾಲ್ಕನೆಯ ದಿನ. ಸಂಜೆಯ ಮೊದಲ ಗಂಟೆ. ಸೂರ್ಯ ಆಗಿನ್ನೂ ಕಣ್ಮರೆಯಾಗಿದ್ದ. ಆಗ ಬಾಲ್‌ಷೆಮ್ ತನ್ನ ಮನೆಯಿಂದ ಪ್ರಯಾಣಕ್ಕೆಂದು ಹೊರಹೊರಟಿದ್ದ. ಅವನು ಎಲ್ಲಿಗೆ ಹೊರಟಿದ್ದ ಎಂಬುದನ್ನು ತನ್ನ ಶಿಷ್ಯರಿಗಾಗಲಿ, ಮಿತ್ರರಿಗಾಗಲಿ ಸುಳಿವೇ ಕೊಟ್ಟಿರಲಿಲ್ಲ. ಸಂಗಾತಿಗಳು, ಶಿಷ್ಯರು ಯಾರಿಗೂ ಸುಳಿವು ಸಿಗದಿದ್ದಾಗ ಈ ಯಾತ್ರೆ ನಿಗೂಢವಾಗುತ್ತದೆ ಎಂದು ಅವನ ಅಭಿಪ್ರಾಯ. ಈ ಸಾರಿ ಕೂಡ ಬಹಳ ಕಡಿಮೆ ಅವಧಿಯಲ್ಲಿ ಅವನು ಸಾಕಷ್ಟು ದಾರಿ ಸವೆಸಿದ್ದ. ನಮಗೆಲ್ಲ ತಿಳಿದಿರುವಂತೆ ದೇಶ–ಕಾಲ ಅನ್ನುವುದು ಯಾರ ಹಿಡಿತಕ್ಕೂ ಒಳಪಡುವಂತಹ ವಸ್ತುಗಳಲ್ಲವಾದುದರಿಂದ ಅವು ಮುಂದೆ ಸರಿದಿದ್ದವು.

ಸುಮಾರು ಅರ್ಧರಾತ್ರಿಯ ವೇಳೆಗೆ ಬಾಲ್‌ಷೆಮ್ ಒಂದು ಹಳ್ಳಿ ತಲಪಿದ. ರಾತ್ರಿಯ ಕೆಲವು ಗಂಟೆಗಳನ್ನು ತಳ್ಳಬೇಕಾಗಿದ್ದುದರಿಂದ ಆತ ಒಬ್ಬ ತೆರಿಗೆಯ ಅಧಿಕಾರಿ ಹಾಗೂ ಪ್ರವಾಸಿಮಂದಿರದ ಮಾಲೀಕನ ಮನೆ ಮುಂದೆ ಬಂದು ನಿಂತುಕೊಂಡ. ಆ ಪ್ರವಾಸಿಮಂದಿರದ ಮಾಲೀಕನಿಗೆ ಬಾಲ್‌ಷೆಮ್ ಅವನ ಶಿಷ್ಯರು ಪ್ರತಿಯೊಬ್ಬರೂ ಅಪರಿಚಿತರಾಗಿದ್ದರು. ಆದ್ದರಿಂದ ಇವರುಗಳು ಎಲ್ಲಿಗೆ ಹೊರಟಿದ್ದಾರೆಂಬುದನ್ನು ತಿಳಿದುಕೊಳ್ಳುವ ಕುತೂಹಲ ಸಹಜವಾಗಿ ಅವನಲ್ಲಿ ಉದ್ಭವಿಸಿತು. ಆತ ಆ ಅರ್ಧ ರಾತ್ರಿಯಲ್ಲೇ ಇವರಿಗೆಲ್ಲ ಬಿಸಿ-ಬಿಸಿಯಾಗಿ ಅಡಿಗೆ ಮಾಡಿ ಉಣಬಡಿಸಿದ. ಮಲಗಲು ಹಾಸಿಗೆಗಳನ್ನು ಹಾಕಿಕೊಟ್ಟ. ನಂತರ ಅವರ ಜೊತೆ ಪ್ರಶ್ನೋತ್ತರಗಳ ಸುರಿಮಳೆ

ಯನ್ನೂ ಹಾಕಿದ. ಬಾಲ್‌ಷೆವ್ ಅವನ ಪ್ರಶ್ನೆಗಳಿಗೆಲ್ಲಾ ಸಮಾಧಾನದಿಂದ ಉತ್ತರ ಕೊಟ್ಟ. ತಾನೊಬ್ಬ ಪುರೋಹಿತನೆಂದು ತಿಳಿಸಿ ಮುಂದಿನ ಸಬ್ಬತ್ (ವಾರದ ಏಳನೆಯ ದಿನ – ವಿಶ್ರಾಂತಿಯ ದಿನ) ಬರ್ಲಿನ್ ನಗರದಲ್ಲಿ ಒಬ್ಬ ಹಣವಂತನ ಮದುವೆಯ ಸಂದರ್ಭದಲ್ಲಿ ಧರ್ಮಕಾರ್ಯಗಳನ್ನು ನಡೆಸಿಕೊಡುವುದಕ್ಕಾಗಿ ತಾನು ಅಲ್ಲಿಗೆ ಹೋಗುತ್ತಿರುವುದಾಗಿ ತಿಳಿಸಿದ.

ಇದನ್ನು ಕೇಳಿಸಿಕೊಂಡ ಆ ಆತಿಥೇಯ ದಿಗ್ಭ್ರಮೆಯಿಂದ ಕ್ಷಣಕಾಲ ಸುಮ್ಮನಿದ್ದ ನಂತರ, 'ಏನು ಸ್ವಾಮಿ, ನನ್ನ ಕುತೂಹಲವನ್ನು ನೋಡಿ ಗೇಲಿ ಮಾಡುತ್ತೀರಲ್ಲಾ ನಿಮ್ಮ ಹತ್ತಿರ ಉಳಿದಿರುವ ಇಷ್ಟು ಕಡಿಮೆ ಸಮಯದಲ್ಲಿ ನೀವು ಅಷ್ಟು ದೂರವನ್ನು ಹೇಗೆ ತಾನೇ ತಲುಪಲು ಸಾಧ್ಯ ? ನೀವು ಕುದುರೆ ಸವಾರಿಯನ್ನು ಬಾಡಿಗೆಗೆ ತೆಗೆದುಕೊಂಡರೂ ಮುಂದಿನ ವಾರಾಂತ್ಯದ ವೇಳೆಗೆ ಅಲ್ಲಿಗೆ ತಲಪಬಹುದು ಅಷ್ಟೆ' ಎಂದ.

ಬಾಲ್‌ಷೆವ್ ನಸುನಕ್ಕು ಹೇಳಿದ, 'ಇದಕ್ಕೆ ನಿನ್ನ ತಲೆಯೇಕೆ ಕೆಡಿಸಿಕೊಳ್ಳುತ್ತೀಯಪ್ಪಾ, ಅದು ನನ್ನ ಹಣೆಯ ಬರಹ. ನನ್ನ ಕುದುರೆಗಳ ಸಮಾಚಾರ ನನಗೆ ಗೊತ್ತು. ಈಗಾಗಲೇ ಅವು ನನಗಾಗಿ ಸಾಕಷ್ಟು ದುಡಿದಿವೆ.'

ಇಷ್ಟು ಮಾತು–ಕತೆ ನಡೆಸಿ ಬಾಲ್‌ಷೆವ್ ತಕ್ಷಣ ತನ್ನ ಹಿಂಬಾಲಿಗರೊಡಗೂಡಿ ನಿದ್ದೆ ಹೋದ. ಆದರೆ ಆ ಮನೆಯ ಯಜಮಾನ ಮಾತ್ರ ಎದ್ದೇ ಇದ್ದ. ಅವನಿಗೆ ಈ ಅಪರಿಚಿತ ಅತಿಥಿಯ ವ್ಯವಹಾರಗಳೆಲ್ಲ ಅತಿ ವಿಚಿತ್ರವಾಗಿ ಕಾಣುತ್ತಿದ್ದವು. ಹಾಗಿದ್ದೂ ಆತನಿಗೆ ಈ ಗುಂಪಿನ ನಾಯಕ ಒಬ್ಬ ಲಘು ವ್ಯಕ್ತಿಯೆಂದಾಗಲೀ, ಮೂರ್ಖನೆಂದಾಗಲೀ ಭಾವಿಸುವುದು ಸಾಧ್ಯವಾಗಲಿಲ್ಲ. ಆವನಿಗೆ ಈ ಅಪರಿಚಿತನ ಜಾಡನ್ನು ಪೂರ್ತಿಯಾಗಿ ತಿಳಿದುಕೊಳ್ಳಬೇಕೆಂದು ಆಸೆ ಉಂಟಾಯಿತು. ಅವನು ಅದರಿಂದ ಉಪಾಯವಾಗಿ ತಾನೂ ಬಾಲ್‌ಷೆವ್ ಜೊತೆ ಬರುವೆನೆಂದು ಹೊರಟ. ನಿಜವಾಗಿ ಹೇಳಬೇಕೆಂದರೆ, ಬರ್ಲಿನ್‌ನಲ್ಲಿ ತನ್ನ ವ್ಯಾಪಾರವನ್ನು ಇನ್ನೂ ಕುದುರಿಸಿಕೊಳ್ಳಬಹುವೆಂಬ ವಿಚಾರ ಕೂಡ ಅವನ ತಲೆ ಹೊಕ್ಕಿತ್ತು. ಬೆಳಗಾದ ಕೂಡಲೇ ಅತಿಥಿಯ ಜೊತೆ ಈ ವಿಷಯವನ್ನು ಮಾತನಾಡಬೇಕೆಂದು ಅವನು ನಿರ್ಧರಿಸಿದ.

ಬೆಳಗಾದ ಕೂಡಲೇ ಅತಿಥಿ, ಆತನ ಶಿಷ್ಯರು ಎಲ್ಲ ನಿದ್ದೆ ಕಳೆದು ಎದ್ದರು. ವಿಶ್ರಾಂತಿ ಗೃಹದ ಯಜಮಾನ ಅವರೊಂದಿಗೆ ತನ್ನ ಆಸೆಯನ್ನು ತೋಡಿಕೊಂಡ. ಬಾಲ್‌ಷೆವ್ ಅವನಿಷ್ಟದಂತೆ ತಮ್ಮ ಜೊತೆ ಅವನನ್ನೂ ಕರೆದೊಯ್ಯಲು ಸಮ್ಮತಿಸಿದ. ಆದರೆ ಬಾಲ್‌ಷೆವ್ ಅಲ್ಲಿಂದ ಹೊರಡಲು ತವಕಿಸಲೇ ಇಲ್ಲ. ಶಾಂತನಾಗಿ ಮನೆಯ ನಾಲ್ಕೂ ಕಡೆ ವೀಕ್ಷಿಸಿ ಶಿಷ್ಯರೊಡಗೂಡಿ ಪ್ರಾರ್ಥನೆ ಮಾಡಿದ, ನಂತರ ಹೊಟ್ಟೆ ತುಂಬುವ ಹಾಗೆ ಊಟ ಸಿದ್ಧಪಡಿಸುವಂತೆ ಗೃಹದ ಮಾಲೀಕನಿಗೆ ಆಜ್ಞಾಪಿಸಿದ. ಊಟವಾದ ಮೇಲೂ ಅವರು ವಿರಾಮವಾಗಿ ಕುಳಿತೇ ಇದ್ದರು. ಗೃಹದ ಯಜಮಾನ ಮಾತ್ರ ಮೇಲೆ-ಕೆಳಗೆ, ಹತ್ತಿ–ಇಳಿದು ಪರದಾಡುತ್ತಿದ್ದ.

ಸಂಜೆಯಾಗುತ್ತಿದ್ದಂತೆ ನಾಯಕ ಗಾಡಿಯನ್ನು ಸಿದ್ಧಪಡಿಸುವಂತೆ ಹೇಳಿ ಅದಕ್ಕೆ ಕುದುರೆಗಳನ್ನು ಜೋಡಿಸುವಂತೆ ಆಜ್ಞಾಪಿಸಿದ. ಅವರು ದೂರದೇಶಕ್ಕೆ ಪ್ರಯಾಣ ಆರಂಭಿಸಿದರು. ಬೇಗನೆ ರಾತ್ರಿಯಾಯಿತು. ಬಾಲ್‌ಷೆಮ್ ಹಾಗೂ ಅವನ ಶಿಷ್ಯಂದಿರು ಗಪ್‌ಚುಪ್ ಆಗಿ ಕುಳಿತಿದ್ದರು. ಗೃಹದ ಯಜಮಾನನಿಗೆ ಇದೇನೋ ವಿಚಿತ್ರವೆನಿಸಿತು ಹಾಗೂ ಅವನ ಒಂದೆಂದೂ ಇಂತಹ ಪ್ರಯಾಣ ಕೈಗೊಂಡಿರಲಿಲ್ಲವೆನಿಸಿತು. ಎಲ್ಲೆಲ್ಲೂ ಕಗ್ಗತ್ತಲು. ಕತ್ತಲೊಂದನ್ನು ಬಿಟ್ಟರೆ ಅಲ್ಲಿ ಏನೂ ಇರಲಿಲ್ಲವೆಂದು ಅವನಿಗೆ ಭಾಸವಾಯಿತು. ಕೆಲವೊಮ್ಮೆ ಅವನಿಗೆ ರಸ್ತೆಯ ತಳಭಾಗದಲ್ಲಿ ಮನುಷ್ಯರ ಕೆಳಗೆ ಮಾರ್ಗದಲ್ಲಿ ಉರುಳಿ ಹೋಗುತ್ತಿರುವ ಹಾಗೆ. ನಿಗೂಢತೆಯಿಂದ ಕೂಡಿರುವ ಹಾಗೆ ಅನ್ನಿಸಿತು. ಮರುಕ್ಷಣವೇ ಅವನಿಗೆ ಅತಿ ಹಗುರವಾಗಿ ಎಲ್ಲವೂ ಪಾರದರ್ಶಕವಾಗಿರುವ ಹಾಗೆ ಜನ-ಪ್ರಾಣಿ-ಜಾಗ ಯಾವುದೂ ಇಲ್ಲದ ಪ್ರಯಾಣದ ಹಾಗೆ ಕೂಡ ಅನಿಸಿತು. ಅವನು ತನ್ನ ಭಾವನೆಗಳನ್ನು ಅದುಮಿಟ್ಟುಕೊಳ್ಳಲು ಸಾಧ್ಯವಾಗಲೇ ಇಲ್ಲ: ತನ್ನೆಲ್ಲವೂ, ತನ್ನ ಸುತ್ತ ಇರುವುದೆಲ್ಲ ತೇಲಿಕೊಂಡು ಹೋಗುತ್ತಿರುವ ಹಾಗೆ ಅನಿಸಿತು.

ಇದ್ದಕ್ಕಿದ್ದ ಹಾಗೆ ಅವನ ಸುತ್ತಣ ಗಾಳಿ ತೀವ್ರವಾಗಿ, ಗಾಢವಾದ ಹಾಗೆ ಅವನಿಗೆ ಅನಿಸಿತು. ಮೊದಲ ಬೆಳಕು ತೆರೆಯಿತು. ಭೂಮಿಯ ಮೇಲೆ ಓಡುತ್ತಿದ್ದ ಗಾಡಿ ಅಲ್ಲಾಡಿದಾಗ ತಾನು ಅವರ ಕೆಳಗೆ ಎಲ್ಲೋ ಹುದುಗಿದ್ದೇನೆ ಎಂದು ಅವನಿಗೆ ಅನಿಸಿತು, ದೂರದಲ್ಲಿ ಒಂದು ನಾಯಿ ಬೊಗಳಿತು. ಎಲ್ಲೋ ಕೋಳಿ ಕೂಗಿತು. ಆಗ ಮುಂಜಾವಿನ ಬೆಳಕಿನಲ್ಲಿ ಅವನಿಗೆ ಒಂದು ಗುಡಿಸಲು ಕಾಣಿಸಿತು. ಹೀಗೇ ಮತ್ತೆ ಸ್ವಲ್ಪ ಹೊತ್ತಿನವರೆವಿಗೂ ಅವರು ಪ್ರಯಾಣ ಮಾಡಿದರು. ಇನ್ನು ಚೆನ್ನಾಗಿಯೇ ಬೆಳಕಾಯಿತು. ಸೂರ್ಯ ನಾಲ್ಕೂ ಕಡೆ ಆವರಿಸಿಕೊಂಡ. ಹೋಟೇಲಿನ ಯಜಮಾನನ ಕಣ್ಮುಂದೆ ಒಂದು ದೊಡ್ಡ ನಗರ ತೆರೆದುಕೊಂಡಿತು. ಇನ್ನು ಒಂದು ಗಂಟೆ ಕಳೆಯುವುದರೊಳಗಾಗಿ ಅವರು ಬರ್ಲಿನ್ ನಗರ ತಲುಪಿದ್ದರು.

ನಗರದ ಹೊರವಲಯದಲ್ಲಿದ್ದ ವಿಶ್ರಾಂತಿಧಾಮವನ್ನು ನಾಯಕ ತಂಗಲು ಆರಿಸಿಕೊಂಡ. ಅಲ್ಲಿ ಸುತ್ತ-ಮುತ್ತ ಹಳ್ಳಿಯ ಹಾಗೆ ಕೆಳಛಾವಣಿಯ ಮನೆಗಳಿದ್ದವು. ಮನೆಯ ಮುಂದೆ ಲತಾಗೃಹ ಒಂದಿತ್ತು. ನಾಯಕ ತನ್ನೆಲ್ಲ ಜೊತೆಗಾರರೊಡನೆ ಅಲ್ಲಿ ಕುಳಿತು ತಿಂಡಿ ತಿಂದ. ತಿಂಡಿಯ ನಂತರ ಅವರೆಲ್ಲ ಒಟ್ಟಿಗೆ ಕುಳಿತು ಪ್ರಾರ್ಥನೆ ಮಾಡಿದರು. ಈ ಗುಂಪಿನ ನಾಯಕ ಬರ್ಲಿನ್ ನಗರದಲ್ಲಿ ದೊಡ್ಡ ಮನುಷ್ಯನೊಬ್ಬನ ಮನೆಯಲ್ಲಿ ಮದುವೆಯ ಕಾರ್ಯ ನೆರವೇರಿಸಲು ಹೊರಟಿದ್ದೇನೆಂದು ಹೇಳಿದ್ದುದು ಹೋಟೇಲಿನ ಯಜಮಾನನಿಗೆ ನೆನಪಾಯಿತು. ಆ ಮದುವೆ ಆತ ಹೇಳಿದಂತೆ ಈ ದಿನ ಜರುಗಬೇಕಾಗಿತ್ತು. ಮದುವೆಯ ಮನೆಗೆ ಹೋಗಿ ಅತಿಥಿಗಳ ಜೊತೆ ಇರಬೇಕಾಗಿದ್ದ ಬಾಲ್‌ಷೆಮ್ ಇಲ್ಲಿ ನಿರ್ಲಿಪ್ತನಾಗಿ ಕಾಲ ಕಳೆಯುತ್ತಿರುವುದು ಅವನಿಗೆ ಸೋಜಿಗವೆನಿಸಿತು. ರಾತ್ರಿಯ ಅನುಭವಗಳನ್ನು ಅವನಿನ್ನೂ ಮರೆತಿರಲಿಲ್ಲ. ಈಗ ಈ

ಹೊಸ ಪ್ರಶ್ನೆ ಬೇರೆ ಹೊಕ್ಕು ಅವನ ತಲೆ ಕೆಡುತ್ತಿದೆ ಅನಿಸಿತು. ಬಾಲ್‌ಷೆಮ್ ಬಳಿ ಹೋಗಿ ಆತನನ್ನೇ ಕೇಳಿ ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳೋಣವೆಂದು ಹೊರಟ. ಆದರೆ ಬಾಲ್‌ಷೆಮ್‌ನ ಶಾಂತ ಮುಖಭಾವವನ್ನು ನೋಡಿದಾಕ್ಷಣ ಅವನಿಗೆ ಅವಮಾನ ವಾದ ಹಾಗೆ ಆಯಿತು. ಬಾಲ್‌ಷೆಮ್‌ನ ಈತನ ಮುಖವನ್ನು ದಯಾಭಾವದಿಂದ ನೋಡಿ ಮುಗುಳ್ನಕ್ಕ. ಇದನ್ನು ನೋಡಿದ ಮೇಲಂತೂ ಪ್ರಶ್ನೆ ಕೇಳುವ ಧೈರ್ಯ ವನ್ನೇ ಅವನು ಕಳೆದುಕೊಂಡ. ಕೊನೆಗೆ ಆ ಅಪರಿಚಿತ ನಗರದಲ್ಲಿ ಸ್ವಲ್ಪ ದೂರ ಅಡ್ಡಾಡಿ ಬರುವೆನೆಂದು ಹೊರಟ.

ಹೀಗೆ ಅವನು ಸುಮಾರು ಒಂದು ಗಂಟೆಯ ಕಾಲ ನಡೆದಿರಬಹುದು. ಆಗ ರಸ್ತೆಯಲ್ಲಿ ಒಂದು ಕಡೆ ಜನ ಗುಂಪು ಕಟ್ಟಿಕೊಂಡು, ಕುತೂಹಲದಿಂದ ಚರ್ಚಿಸುತ್ತಾ, ಗುಸು-ಗುಸು ಮಾತನಾಡುತ್ತಾ ನಿಂತಿರುವುದನ್ನು ಕಂಡ. ಅವನೂ ಅಲ್ಲಿ ನಿಂತು ವಿಷಯವೇನೆಂದು ವಿಚಾರಿಸಿಕೊಂಡ. ಸುದ್ದಿ ಹೀಗಿತ್ತು : ಒಬ್ಬ ಹಣವಂತ ಯಹೂದಿಯ ಮನೆಯಲ್ಲಿ ಈ ದಿನ ಮದುವೆ ನೆರವೇರಬೇಕಾಗಿತ್ತು. ಮದುವೆಯ ಹುಡುಗಿ ಇಡೀ ರಾತ್ರಿ ಸಂತೋಷದಿಂದ, ಚಟುವಟಿಕೆಯಿಂದ ಕೆಲಸಗಳನ್ನು ಮಾಡಿ, ಒಡವೆ-ವಸ್ತು ಎಲ್ಲ ಜೋಡಿಸಿಕೊಂಡು ಸಮಾರಂಭಕ್ಕೆ ಸಿದ್ಧತೆಗಳನ್ನು ಮುಗಿಸಿ ಸಮಾಧಾನದಿಂದ ನಿದ್ದೆ ಹೋದಳು. ಬೆಳಗಾಗುವ ವೇಳೆಗೆ ನೋಡಿದರೆ ತೀರಿ ಕೊಂಡಿದ್ದಳು. ಯಾವುದೇ ಬಾಹಿಲೆ ಕೂಡ ಅವಳಿಗಿರಲಿಲ್ಲ, ದಷ್ಟಪುಷ್ಟಳಾಗಿದ್ದ ಹೆಣ್ಣು.

ಮದುವೆಯ ಹುಡುಗಿಯ ಮನೆಯ ಕಡೆ ಅವರು ಬೆರಳು ಮಾಡಿ ತೋರಿಸಿ ದರು. ಈತ ಆ ಮನೆಯ ಒಳಹೊಕ್ಕ; ಇವನು ಆ ಮನೆಯನ್ನು ಪ್ರವೇಶಿಸಿದಾಗ, ಹುಡುಗಿಯ ಶವದ ಸುತ್ತ ದುಃಖತಪ್ತರಾಗಿ ಅತಿಥಿಗಳು ನಿರಾಶರಾಗಿ ನಿಂತಿದ್ದುದನ್ನು ಕಂಡ. ಹುಡುಗಿಯ ಶವ ಹಾಸಿಗೆಯ ಮೇಲಿತ್ತು, ಮುಖ ಬಾಡಿದ್ದರೂ ವಿಕಾರ ವಾಗಿರಲಿಲ್ಲ, ಡಾಕ್ಟರರೂ ಅನುಮಾನಿಸುತ್ತಿದ್ದಂತೆನಿಸಿತು. ಹಾಗಿದ್ದರೂ ಅವರು ಹುಡುಗಿ ಸತ್ತಿರುವ ವಿಷಯವನ್ನು ಒಪ್ಪಿಕೊಳ್ಳಲೇಬೇಕೆಂದು ಯಜಮಾನನಿಗೆ ತಿಳಿಸಿ ಇನ್ನೇನು ಹೊರಡುವುದರಲ್ಲಿದ್ದರು, ವರ ಮೌನವಾಗಿ ಕಪ್ಪು ಮುಸುಕು ಧರಿಸಿ ಕಲ್ಲಾಗಿದ್ದ. ಈತ ಕೂಡ ಮಿಕ್ಕವರ ಜೊತೆ ಅವನಿಗೆ ಸಮಾಧಾನ ಹೇಳಲು ಬಳಿ ಸಾರಿದರು. ತನಗೆ ಏನೂ ಕೇಳಿಸದೆ ಇರುವವನ ಹಾಗೆ ಅವನು ತಟಸ್ಥನಾಗಿ ನಿಂತಿದ್ದ. ಹೋಟೆಲ್ ಮಾಲೀಕ ಅವನ ಬಳಿ ಸಾರಿ ಹಿಂದಿನ ರಾತ್ರಿ ತಾನು ಆ ಪುರೋಹಿತನ ಜೊತೆ ಪ್ರಯಾಣ ಮಾಡಿದ್ದನ್ನು ತಿಳಿಸಿದ. ಇಂತಹ ಅದ್ಭುತ ಪ್ರಯಾಣವನ್ನು ಆಗ ಮಾಡಿಸಿದವನು ಎಷ್ಟೋ ಅಸಂಭವಗಳನ್ನು ನಡೆಸಿಕೊಡುವ ಸಾಧ್ಯತೆ ಇರುವುದ ರಿಂದ ಅವನ ಬಳಿ ಹೋಗಿ ದುಃಖವನ್ನು ತೋಡಿಕೊಳ್ಳುವಂತೆ ಸಲಹೆ ಮಾಡಿದ. ವರನಾದವನು ಈ ಅಪರಿಚಿತನ ಕೈ ಹಿಡಿದು ತನ್ನನ್ನು ಆ ವಿಶ್ರಾಂತಿಧಾಮಕ್ಕೆ ಕರೆದೊಯ್ಯುವಂತೆ ಬೇಡಿಕೊಂಡ. ಅವನು ಪ್ರಮುಖನ ಬಳಿ ಸಾರಿ ಆ ದಯನೀಯ

ಸ್ಥಿತಿಯನ್ನು ವಿವರಿಸಿ ಸತ್ತ ಹುಡುಗಿಯನ್ನು ನೋಡಲು ಬರುವಂತೆ ಬೇಡಿಕೊಂಡ. ಬಾಲ್‌ಷೆಮ್ ಅಂತೆಯೇ ಅವರ ಜೊತೆ ಸತ್ತ ಹುಡುಗಿಯ ಬಳಿಗೆ ಬಂದು ಅವಳ ಶಾಂತ ಮುಖಭಾವವನ್ನು ದಿಟ್ಟಿಸಿ ನೋಡಿದ.

ಎಲ್ಲರೂ ಮೌನವಾಗಿ ಅವನು ಏನು ಹೇಳುವನೋ ಎಂದು ಕಾತರರಾಗಿ ಕಾದರು. ಆದರೆ ಆತ ಮಾತ್ರ ಅಲ್ಲಿ ನೆರೆದಿದ್ದ ಪುರುಷರ ಕಡೆಯಿಂದ ವಿಮುಖನಾಗಿ, ಮಹಿಳೆಯರ ಕಡೆ ತಿರುಗಿ, 'ಈ ಶವಕ್ಕೆ ಹೆಣದ ಬಟ್ಟೆಯನ್ನು ಸುತ್ತಿ ನಿಮ್ಮ ಪದ್ಧತಿಯಂತೆ ಕರ್ಮಗಳನ್ನು ಮಾಡಿ ಮುಗಿಸಿ' ಎಂದು ಆಜ್ಞಾಪಿಸಿದ. ನಂತರ ವರನ ಕಡೆ ತಿರುಗಿ, 'ನಿನ್ನ ಜನರನ್ನು ಸ್ಮಶಾನಕ್ಕೆ ಕಳುಹಿಸಿ. ನೀನೂ ಹೋಗಿ ಇವಳಿಗಾಗಿ ಗುಳಿ ತೋಡಿಸಿ ಸಿದ್ಧಪಡಿಸು' ಎಂದು ಹೇಳಿದ. ವರ ಹಾಗೆಯೇ ಎಲ್ಲರನ್ನೂ ಕಳುಹಿಸಿ ದುಃಖತಪ್ತನಾಗಿ ಹುಡುಗಿಯ ಶವದ ಕಡೆ ತಿರುಗಿ, 'ನಿನ್ನ ಅಂತಿಮ ಯಾತ್ರೆಯ ಮೆರವಣಿಗೆಯ ಜೊತೆ ನಾನೂ ಹೊರಟು ಬರುತ್ತೇನೆ' ಎಂದು ಹೇಳಿದ. ಪ್ರಮುಖ ಅವನಿಗೆ, 'ಆದರೆ ನೀನು ಮದುವೆಗಾಗಿ ಆರಿಸಿಕೊಂಡಿರುವ ಉಡುಪುಗಳು, ಮುಸುಕು, ಇವೆಲ್ಲವನ್ನೂ ಸ್ಮಶಾನಕ್ಕೆ ತೆಗೆದುಕೊಂಡು ಬಾ' ಎಂದು ಆಜ್ಞಾಪಿಸಿದ. ಹೀಗೆ ಎಲ್ಲವೂ ಸಿದ್ಧಪಡಿಸಿಯಾದ ನಂತರ ಹೆಣವನ್ನು ತೆರೆದ ಪೆಟ್ಟಿಗೆಯಲ್ಲಿಟ್ಟುಕೊಂಡು ಹೊರಟರು. ಬಾಲ್‌ಷೆಮ್ ಹೆಣದ ಪೆಟ್ಟಿಗೆಯ ಮುಂದೆ ಮುಂದೆ ನಡೆದ. ನಂತರ ಅನೇಕರು ನಿಟ್ಟುಸಿರು ಬಿಡುತ್ತಾ ಅವನನ್ನು ಹಿಂಬಾಲಿಸಿದರು.

ಸ್ಮಶಾನವನ್ನು ತಲಪಿದ ನಂತರ ಬಾಲ್‌ಷೆಮ್ ಮುಚ್ಚಳ ತೆರೆದಿಟ್ಟಿದ್ದ ಹೆಣದ ಪೆಟ್ಟಿಗೆ - ಆ ಹುಡುಗಿಯ ಮುಖ ನೇರವಾಗಿ ಆಕಾಶದ ಕಡೆಗಿರುವಂತೆ, ಸ್ವರ್ಗದ ಕಡೆಗೆ ನೋಡುತ್ತಿರುವಂತೆ, ಎಲ್ಲರಿಗೂ ಕಾಣಿಸುವ ಹಾಗೆ ಇರಬೇಕೆಂದು ಆದೇಶವಿತ್ತ. ತನ್ನ ಬಳಿ ಇಬ್ಬರು ಸಹಾಯಕರು ನಿಂತಿದ್ದು ತನ್ನ ಆಜ್ಞೆಗಾಗಿ ಕಾಯುವಂತೆ ಆದೇಶ ನೀಡಿದ. ನಂತರ ಆತ ಗುಳಿಗೆ ಕಾಲಿಟ್ಟ. ತನ್ನ ಸಹಾಯಕರ ಆಸರೆ ಪಡೆದು ಹೆಣವನ್ನು ದಿಟ್ಟಿಸಿ ನೋಡಿದ; ಕೆಲಕಾಲ ಅಲುಗಾಡದೆ ನಿಂತಿದ್ದ. ಅವನನ್ನು ಈ ಸ್ಥಿತಿಯಲ್ಲಿ ನೋಡಿದವರಿಗೆ ಅವನು ಸಂಜ್ಞಾಶೂನ್ಯನಾಗಿರುವ ಹಾಗೆನಿಸುತ್ತಿತ್ತು, ತನ್ನ ಪ್ರಾಣಶಕ್ತಿಯನ್ನು ಆತ ಎಲ್ಲಿಗೋ ಕಳುಹಿಸಿಕೊಟ್ಟಿರುವ ಹಾಗೆನಿಸುತ್ತಿತ್ತು. ಆ ಗುಳಿಯ ಸುತ್ತ ಜನ ದೂರ-ದೂರದ ವರೆಗೆ ಮುತ್ತಿಕೊಂಡಿದ್ದರು. ಕೆಲವು ಸಮಯ ಹೀಗೆ ಕಳೆಯಿತು. ಆತ ನಂತರ ಆ ಇಬ್ಬರು ಸಹಾಯಕರನ್ನು ತನ್ನ ಬಳಿಗೆ ಬರುವಂತೆ ಸಂಕೇತ ಮಾಡಿದ. ಅವರು ಆತನ ಬಳಿಗೆ ಬಂದು ನೋಡಿದಾಗ ಹೆಣದ ಮುಖ ಕೆಂಪಾಗಿತ್ತು, ಜೀವಕಳೆ ಮೂಡಿಬಂದಿತ್ತು, ನಂತರ ಆಕೆಯ ಬಾಯಿಂದ ಉಸಿರಾಟ ಆರಂಭವಾಯಿತು. ಬಾಲ್‌ಷೆಮ್ ಆಕೆಯನ್ನು ಗುಳಿಯಿಂದ ಮೇಲೆತ್ತುವಂತೆ ಆ ಇಬ್ಬರು ಸಹಾಯಕರಿಗೆ ಆದೇಶ ನೀಡಿದ. ನಂತರ ವರನ ಕಡೆ ತಿರುಗಿ, ಆತ ಆ ಕ್ಷಣ ಏನೊಂದೂ ಮಾತನಾಡದೆ ಮದುವೆಯ ಉಡುಪು ತೊಡಿಸಿ, ಮುಖದ ಮುಸುಕು

ಹಾಕಿ, ಅವಳನ್ನು ಮದುವೆಯ ಮಂಟಪಕ್ಕೆ ಕರೆದೊಯ್ಯಬೇಕೆಂದೂ, ನಡೆದ ಯಾವುದೇ ಘಟನೆಯನ್ನೂ ಅವಳೊಂದಿಗೆ ಉಸಿರಬಾರದೆಂದೂ ಆದೇಶವಿತ್ತ. ವರ ಆಗ ಮಾತ್ರ ಬಾಲ್‌ಷೆವ್‌ನೇ ಬಂದು ಅವರ ಮದುವೆಯನ್ನು ನೆರವೇರಿಸಿಕೊಡಬೇಕೆಂದು ಬೇಡಿಕೊಂಡ.

ನಂತರ ಸಿದ್ಧಳಾಗಿದ್ದ ವಧುವನ್ನು ಮದುವೆಯ ಮಂಟಪಕ್ಕೆ ಕರೆದೊಯ್ದರು. ಬಾಲ್‌ಷೆವ್ ಮದುವೆಯ ಮುಹೂರ್ತದ ಮಂತ್ರಗಳನ್ನು ಜೋರಾಗಿ ಪಠಿಸಲು ಆರಂಭ ಮಾಡಿದಾಗ ಮಾತ್ರ ಆ ವಧು ತನ್ನ ಮುಖದ ಮುಸುಕನ್ನು ಕಿತ್ತೆಸೆದು, 'ಈತನೆ ನನಗೆ ಬಿಡುಗಡೆ ಕೊಡಿಸಿದವನು' ಎಂದು ಉಲ್ಲಾಸದಿಂದ ಕೂಗಿದಳು.

ಬಾಲ್‌ಷೆವ್ ಅವಳನ್ನು ಶಾಂತಳಾಗಿರುವಂತೆ ಎಚ್ಚರಿಸಿದ. ಆ ಹುಡುಗಿ ಅಂತೆಯೇ ಶಾಂತಳಾದಳು. ಜನ ಏನಾಯಿತೆಂದು ಇನ್ನೂ ಅರ್ಥ ಮಾಡಿಕೊಳ್ಳುವುದಕ್ಕೂ ಮುಂಚೆ ಬಾಲ್‌ಷೆವ್ ಮದುವೆಯ ಮಂಟಪದಿಂದ ದೂರ ಹೊರಟು ಹೋಗಿದ್ದ.

ಅತಿಥಿಗಳೆಲ್ಲ ಊಟಕ್ಕೆ ಕುಳಿತಿದ್ದಾಗ, ಇನ್ನೇನು ಕಳೆದ ಕ್ಷಣಗಳೂ ಮರೆಯಾಗತೊಡಗಿದವು. ಆಗ ಮಧುವಣಗಿತ್ತಿ ಸ್ವತಃ ತನ್ನ ಕತೆಯನ್ನು ಹೇಳತೊಡಗಿದಳು.

ಅವಳ ಗಂಡನಿಗೆ ಈಗಾಗಲೇ ಒಂದು ಸಾರಿ ಮದುವೆಯಾಗಿತ್ತೆಂದೂ, ವಿಧುರನಾದ ನಂತರ ಈಗ ಈಕೆಯನ್ನು ಎರಡನೆಯ ಹೆಂಡತಿಯಾಗಿ ಆತ ಪಡೆಯಬಯಸಿದ್ದನೆಂದು ಆಕೆ ವಿವರಿಸಿದಳು. ಆತನ ಮೊದಲ ಹೆಂಡತಿ ಸಂಬಂಧದಲ್ಲಿ ಈಕೆಯ ಚಿಕ್ಕಮ್ಮ ಆಗಿದ್ದಳು. ಆ ಹುಡುಗಿ ಅನಾಥಳಾಗಿದ್ದುದರಿಂದ ತನ್ನ ಬಳಿ ಇಟ್ಟುಕೊಂಡು ಸಾಕಿ ಸಲಹಿದ್ದಳು ಆಕೆ ಒಮ್ಮೆ ಅನಾರೋಗ್ಯಕ್ಕೆ ತುತ್ತಾದಳು. ಆಕೆಗೆ ಸಹಾಯಕರು ಕೂಡ ಯಾರೂ ಇರಲಿಲ್ಲ. ಕೊನೆಗಾಲ ಸಮೀಪಿಸುತ್ತಿದ್ದಾಗ ಆಕೆಗೆ ಚಿಕ್ಕ ಪ್ರಾಯದ ತನ್ನ ಗಂಡ ಮರು ವಿವಾಹವಾಗಬಹುದೆಂಬ ಚಿಂತೆ ಪ್ರಾರಂಭವಾಯಿತು. ಮನೆಯಲ್ಲಿ ವಯಸ್ಸಿಗೆ ಬಂದ ಈ ಹುಡುಗಿಯನ್ನು ನೋಡಿ ಅವನು ಆಕರ್ಷಿತನಾಗುತ್ತಾನೆಂದು ಅವಳಿಗೆ ಖಚಿತವಾಯಿತು. ಆಕೆಗೆ ತನ್ನ ಗಂಡನೆಂದರೆ ತುಂಬಾ ಪ್ರೀತಿ. ಮುಂದೆ ಆಗಬಹುದಾದುದರ ಕಲ್ಪನೆಯಿಂದಷ್ಟೆ ಅವಳಿಗೆ ಹೊಟ್ಟೆಕಿಚ್ಚು ಆವರಿಸಿತು. ಕೊನೆಗಾಲ ಬಂದಾಗ ಆಕೆ ಇವರಿಬ್ಬರನ್ನೂ ತನ್ನ ಬಳಿ ಕರೆದು ಇಬ್ಬರೂ ಮದುವೆ ಮಾಡಿಕೊಳ್ಳಬಾರದೆಂದು ಅವರಿಂದ ವಚನ ಪಡೆದುಕೊಂಡಳು. ಇವರಿಬ್ಬರೂ ಆಕೆಯನ್ನು ಬಹಳ ಪ್ರೀತಿಸುತ್ತಿದ್ದುದರಿಂದ ಆಕೆಯ ಈ ದುಃಸ್ಥಿತಿಯನ್ನು ನೋಡಿ ಅವರಿಗೂ ದುಃಖ ಉಮ್ಮಳಿಸಿ ಬಂತು. ಸಾವಿನ ದವಡೆಯಲ್ಲಿದ್ದ ಆ ಹೆಂಗಸಿಗೆ ವಚನ ಕೊಡುವುದೇನೂ ಇವರಿಗೆ ಕಷ್ಟವೆನಿಸಲಿಲ್ಲ. ಅವರು ಹಾಗೆಯೇ ಮಾಡಿದರು.

ನಂತರ ಆಕೆ ಸತ್ತುಹೋದಳು. ಆಕೆಯ ದಫನ್ ಆದ ನಂತರ ಆಕೆಯ ಸ್ಥಾನ ರಿಕ್ತವಾಗಿತ್ತು. ಆ ಕೊಠಡಿಯಿಂದ ಆಕೆಯ ನೆರಳು ಕೂಡ ಮರೆಯಾಗಿಹೋಯಿತು.

ಆಗ ಅಲ್ಲಿ ಪ್ರಾಣವಂತರಾದ ವ್ಯಕ್ತಿಗಳು ಮಾತ್ರ ಉಳಿದಿದ್ದರು. ಅವರ ಸುತ್ತ ಜೀವಕಳೆ ಹರಿದಾಡುತ್ತಿತ್ತು. ಅವರು ಪರಸ್ಪರ ಆಕರ್ಷಿತರಾದರು. ಒಬ್ಬರನ್ನೊಬ್ಬರು ಬಿಟ್ಟಿರುವುದು ಅಸಾಧ್ಯವೆಂದು ಅವರಿಗೆ ಅರಿವಾಯಿತು. ತಾವು ಕೊಟ್ಟಿದ್ದ ವಚನವನ್ನು ಮರೆತು ಅವರಿಬ್ಬರೂ ಮದುವೆಯಾಗಲು ಆಗ ನಿರ್ಧರಿಸಿದರು.

ಮದುವೆಯ ದಿನ ಸಂತೋಷದಲ್ಲಿ ಮೈಮರೆತಿದ್ದಾಗ ಸತ್ತ ವ್ಯಕ್ತಿಯ ನೆನಪು ಯಾರಿಗೂ ಇರಲಿಲ್ಲ. ಆಗ ಸತ್ತ ಹೆಂಗುಸಿನ ಆತ್ಮಶಕ್ತಿ ಜಿಗಿದೆದ್ದು ಬಂದು ತನ್ನ ಅಧಿಕಾರಗಳನ್ನು ಹಿಂದಿರುಗಿಸಬೇಕೆಂದು ಹಟ ಹಿಡಿಯಿತು. ಆಕೆಯ ವಿಚಿತ್ರಪ್ರಕಾ ಶಕ್ತಿಯ ಹಿಡಿತದಲ್ಲಿ ವಧುವಿನ ಶರೀರ ಛಿದ್ರ-ಛಿದ್ರವಾಯಿತು. ನಂತರ ಹುಡುಗಿಯ ಆತ್ಮ ಆ ಸತ್ತ ಹಳೆಯ ಆತ್ಮದ ಜೊತೆ ಹೋರಾಟ ನಡೆಸಿತು.

ಸ್ಮಶಾನಕ್ಕೆ ಆಕೆಯನ್ನು ಕರೆದೊಯ್ದಾಗ ಎರಡೂ ಆತ್ಮಗಳು ತೀರ್ಪಿಗಾ ಹಾಜರಾದವು. ಆಗ ಅಲ್ಲಿ ಪುರುಷಧ್ವನಿಯೊಂದು ಅವರಿಗೆ ತೀರ್ಪು ನೀಡಿತು. ಆತನ ಎದುರು ಅವರಿಬ್ಬರೂ ತೀರ್ಪನ್ನು ಕುರಿತು ಹೊಡೆದಾಡಿದರು. ತೀರ್ಪಿನ ಧ್ವನಿ ಆಗ, 'ಸತ್ತ ವ್ಯಕ್ತಿಗೆ ಇನ್ನೂ ಭೂಮಿಯ ಪಾಲು ದಕ್ಕುವುದಿಲ್ಲ. ಅವಳಿಗೆ ಮುಂದುವರಿಯಲು ಅವಕಾಶ ಮಾಡಿಕೊಡು. ಬದುಕಿರುವವರಿಗೆ ನ್ಯಾಯ ಸಿಗಲೇಬೇಕು ತಾವು ಮಾಡುವುದಿಲ್ಲವೆಂದು ಹೇಳಿದ ಕೆಲಸವನ್ನು ಕೂಡ ಆತ್ಮತೃಪ್ತಿಗೆ ಬೆಲೆಕೊಟ್ಟು ಅವರು ಮಾಡಲೇಬೇಕಾಗುತ್ತದೆ.' ಎಂದು ಹೇಳಿತು. ಸತ್ತ ವ್ಯಕ್ತಿ ಅಷ್ಟಾದರೂ ವಧುವಿನ ಆತ್ಮದ ಶೋಷಣೆಯನ್ನು ಬಿಡದಿದ್ದಾಗ ಆ ಧ್ವನಿ ಮತ್ತೆ, 'ಅವಳನ್ನು ಹೋಗಲು ಬಿಡು, ಅವಳಿಗೆ ಈಗ ಮದುವೆಯ ಮುಹೂರ್ತವಿದೆಯೆಂಬುದು ನಿನಗೆ ಗೊತ್ತಿಲ್ಲವೇ ? ಮದುವೆಯ ಮಂಟಪ ಅವಳಿಗಾಗಿ ಕಾದಿದೆ' ಎಂದು ಎಚ್ಚರಿಸಿತು ಆಗ ಮಾತ್ರ ವಧುವಿಗೆ ಮತ್ತೆ ಪ್ರಾಣ ಬಂತು. ಹೆಣ ಹೂಳುವ ಗುಳಿಯಿಂ ಆಕೆಯನ್ನು ಹೊರಕ್ಕೆ ತೆಗೆದ ಮೇಲೆ ವಧುವಿನ ವೇಷ ಧರಿಸಿ, ಮುಸುಕು ಹಾಕಿಕೊಂಡ ಮಿಕ್ಕ ಹೆಂಗಸರ ಜೊತೆಗೂಡಿ ಆಕೆ ಮದುವೆಯ ಮಂಟಪಕ್ಕೆ ಹೋದಳು.

'ಪುರೋಹಿತ ಮದುವೆಯ ಮಂತ್ರಗಳನ್ನು ಉಪದೇಶಿಸುತ್ತಿದ್ದಾಗ ನನ ತೀರ್ಪು ನೀಡಿದ ಧ್ವನಿ ಕೂಡ ಅದೇ ಆಗಿತ್ತೆಂದು ನನಗಾಗ ತಿಳಿಯಿತು' ಎಂದು ಆ ಹುಡುಗಿ ತನ್ನ ಪತಿ ಹಾಗೂ ಅತಿಥಿಗಳಿಗೆ ವಿವರಿಸಿದಳು.

# ಯೆಹೂದ್ಯರ ಕತೆಗಳು

ಅನು : ಸಂಧ್ಯಾ ಎಸ್.

[ಬಾಲ್‌ಶೆವ್‌-ಟೋವ್ ಅಥವಾ ಬೆಶ್ಟ್ 18ನೇ ಶತಮಾನದ ಪೋಲೆಂಡ್‌ಗೆ ಸೇರಿದವ. ಚಿಕ್ಕಂದಿನಲ್ಲೇ ಅನಾಥನಾದ ಕಾರಣ ಅಲೆಮಾರಿಯಾಗಿ, ಅವರಿವರ ಹಂಗಿನಲ್ಲಿದ್ದುಕೊಂಡು ಬೆಳೆದ ಈತ ಮೊದಲಿಂದಲೂ ಸಾಮಾನ್ಯನಂತಿರಲಿಲ್ಲ ; ದೊಡ್ಡವನಾದಂತೆ ವಿಚಿತ್ರ ರೀತಿಗಳಲ್ಲಿ ಪರೋಪಕಾರ ಕೆಲಸದಲ್ಲಿ ತೊಡಗಿರುತ್ತಿದ್ದ. ಹಾಗಾಗಿ ಜನ ಅವನನ್ನು ಸಾಧು ಎಂದು ಭಾವಿಸಿ, ಬಾಲ್‌ಶೆವ್‌-ಟೋವ್ ಅಥವಾ 'ದೇವರ ಹೆಸರಿಗೆ ತಕ್ಕನಾದವ' ಎಂಬ ಹೆಸರಿನಿಂದ ಅವನನ್ನು ಕರೆಯತೊಡಗಿದರು. ಅವನ ಪ್ರಕಾರ ದೇವರು ಎಲ್ಲೆಲ್ಲೂ ಇರುವುದರಿಂದ ಯಾವ ರೀತಿಯಲ್ಲಾದರೂ ನಾವು ದೇವರನ್ನು ಆರಾಧಿಸಬಹುದು. 'ಹಾಸಿಡಿಸಂ' ಎಂಬ ಪಂಥ ಆರಂಭವಾಗಿದ್ದು ಇವನಿಂದಲೇ.]

ಬೆಶ್ಟ್ ಎಂದೂ ಏನನ್ನೂ ಬರೆದಿಟ್ಟಿಲ್ಲ. ಅವನು ಹೇಳಿದ ಕತೆಗಳೆಂದು ಜನಪದದಲ್ಲಿ ಈ ಕೆಲವು ಕತೆಗಳು ರೂಢಿಯಲ್ಲಿವೆ.

(1) ಒಮ್ಮೆ ಬೆಶ್ಟ್ ತನ್ನ ಮಗನ ಜೊತೆ ಅಸ್ವಸ್ಥರಾಗಿದ್ದ ಮೆಡ್ಜಿಬೋಜ್‌ನ ರಬ್ಬಾಯ್‌ರನ್ನು ನೋಡಲು ಹೋದನು. ಆ ರಬ್ಬಾಯಿ ಕೊಂಚ ಮಟ್ಟಿಗೆ ಲೌಕಿಕನಾದ ಕಾರಣ ಅವರ ಮನೆಯೊಳಗೆ ಒಂದು ಕಪಾಟಿನ ತುಂಬ ಬೆಳ್ಳಿ ಸಾಮಾನುಗಳನ್ನು ಅಂದವಾಗಿ ಜೋಡಿಸಿಟ್ಟಿದ್ದರು. ಮಗ ಹಿರ್ಶ್ ಅವುಗಳಿಂದ ಆಕರ್ಷಿತನಾಗಿಬಿಟ್ಟ. ಅದನ್ನು ನೋಡಿದ ಬೆಶ್ಟ್ ಹೇಳಿದರು : "ಮಗನೆ, ಆ ಬೆಳ್ಳಿ ಸಾಮಾನುಗಳು ತಕ್ಕನಾದ ಜಾಗದಲ್ಲಿಲ್ಲ ; ನಮ್ಮ ಮನೆಯೇ ಅವಕ್ಕೆ ತಕ್ಕನಾದ ಜಾಗ ಎಂದು ಯೋಚಿಸುತ್ತಿದ್ದೀಯ ಅಲ್ಲವೆ ? ನಿನ್ನ ಆಲೋಚನೆಗಳಲ್ಲಿ ಅರ್ಧ ಸರಿ, ಇನ್ನರ್ಧ ಸರಿಯಿಲ್ಲ. ಆ ಬೆಳ್ಳಿ ಸಾಮಾನುಗಳು ತಕ್ಕನಾದ ಜಾಗದಲ್ಲಿಲ್ಲ ಎನ್ನುವುದು ಸರಿ. ಆದರೆ ನಮ್ಮ ಮನೆಯಲ್ಲಿ ಇಲ್ಲವಲ್ಲ ಎಂಬ ಕಾರಣದಿಂದ ಅಲ್ಲ. ಕೇವಲ ಅಲಂಕಾರವಾಗಿ ಇಲ್ಲಿ ಫಳಫಳಿಸುವಂತೆ ಇಡುವುದರ ಬದಲು ಆ ಬೆಳ್ಳಿಯನ್ನು ಬಡವರಿಗಾಗಿ ವಿನಿಯೋಗಿಸುವುದೇ ಅದಕ್ಕೆ ತಕ್ಕನಾದದ್ದು."

(2) ಬೆಶ್ಟ್‌ನನ್ನು ಯಾರೋ ಒಬ್ಬರು ಕೇಳಿದರು : "ಬೈಬಲ್‌ನಲ್ಲಿ ಸಜ್ಜನರು ಮಾಡಿದ ತಪ್ಪುಗಳನ್ನು ಯಾಕೆ ಹೇಳುತ್ತಾರೆ ? ಸಜ್ಜನರು ಎಂದೂ ತಪ್ಪು ಮಾಡಿ

ಪಾಪರಹಿತ ಎಂದು ಹೇಳಿದರೆ ಸಜ್ಜನಿಕೆಯನ್ನು ಹೆಚ್ಚು ಪ್ರೋತ್ಸಾಹಿಸಿದಂತಾಗುವುದಲ್ಲವೆ ?"

ಜೆಸ್ಟ್ ಹೇಳಿದರು : "ಸಜ್ಜನರು ಮಾಡಿದ ಸಣ್ಣಪುಟ್ಟ ತಪ್ಪುಗಳನ್ನು ಬಹಿರಂಗ ಮಾಡದಿದ್ದರೆ ಅವರ ಸಜ್ಜನಿಕೆ ಬಗ್ಗೆ ನಮಗೆ ನಂಬಿಕೆಯುಂಟಾಗುವುದಿಲ್ಲ. ಒಂದು ಕತೆ ಹೇಳುತ್ತೇನೆ, ಕೇಳಿ :

"ಒಂದು ಸಿಂಹ ತನ್ನ ಮರಿಗಳಿಗೆ ಭೂಮಿಯ ಮೇಲೆ ತಾವೇ ಅತ್ಯಂತ ಬಲಿಷ್ಠ ಪ್ರಾಣಿಗಳಾದ್ದರಿಂದ ತಾವು ಯಾರಿಗೂ ಹೆದರಬೇಕಾಗಿಲ್ಲ ಎಂದು ಹೇಳಿಕಳಿಸಿತ್ತು. ಒಂದು ದಿನ ಸಿಂಹದ ಮರಿಗಳು ಒಂದು ಪಾಳುಬಿದ್ದ ಕೋಟೆ ಹತ್ತಿರ ಬಂದವು. ಆ ಕೋಟೆಯ ಗೋಡೆಯ ಮೇಲೆ ಸ್ಯಾಮ್ಸನ್ ಒಂದು ಸಿಂಹದ ಮರಿಯನ್ನು ಮೆಟ್ಟಿ ನಿಂತಿರುವ ಚಿತ್ರ ಕಾಣಿಸಿತು. ಮರಿಗಳು ಹೆದರಿ ತಂದೆಯ ಬಳಿಗೆ ಓಡಿಹೋಗಿ ಹೇಳಿದವು. 'ನಮಗಿಂತಾ ಶಕ್ತಿಶಾಲಿಯಾದವನನ್ನು ನಾವೀಗ ನೋಡಿಬಂದೆವು. ಅವನಿಗೆ ನಾವು ಹೆದರಲೇಬೇಕಾಗಿದೆ'. ತಂದೆ ಆ ಮರಿಗಳು ಕಂಡಿದ್ದೇನೆಂದು ವಿಚಾರಿಸಿ, ನಂತರ ನಿಧಾನವಾಗಿ ಹೇಳಿತು : 'ಆ ಚಿತ್ರ ನೋಡಿದ ಮೇಲೆ ನಿಮಗೆ ಸಿಂಹಗಳು ಮಾತ್ರ ಬಲಿಷ್ಠ ಪ್ರಾಣಿಗಳು ಎನ್ನುವ ಮಾತು ಮನದಟ್ಟಾಗಬೇಕು. ಯಾಕೆಂದರೆ ಒಂದು ಸಿಂಹಕ್ಕಿಂತಾ ಬಲಿಷ್ಠ ಪ್ರಾಣಿ ಯಾರಾದರೂ ಇದ್ದರೆ, ಅದೊಂದು ಪವಾಡ ಎನ್ನುವಂತೆ ಚಿತ್ರಿಸಲಾಗುತ್ತದೆ. ಚಿತ್ರದಲ್ಲಿದ್ದ ಆ ಒಬ್ಬ ಮನುಷ್ಯ ಅಪವಾದ, ಯಾಕೆಂದರೆ ಸಿಂಹಗಳು ಯಾವಾಗಲೂ ಹೆಚ್ಚು ಬಲಿಷ್ಠ."

(3) ಒಮ್ಮೆ ಜೆಸ್ಟ್ ಒಬ್ಬನನ್ನು ಹೀಗೆ ಕೇಳಿದರು : "ವೇಗವಾಗಿ ಓಡುವ ಕುದುರೆ ಮಂದಗತಿಯ ಕುದುರೆಗಿಂತ ಹತ್ತುಪಟ್ಟು ವಾಸಿ ಎನ್ನುತ್ತಾರೆ, ಯಾಕೆ ?"

ಅವನು ಉತ್ತರಿಸಿದ : "ಅದು ಹತ್ತುಪಟ್ಟು ವೇಗವಾಗಿ ಓಡುತ್ತೆ, ಅದಕ್ಕೆ."

"ಒಂದುವೇಳೆ ಅದು ದಾರಿ ತಪ್ಪಿದರೆ ಹತ್ತುಪಟ್ಟು ಹಿಂದೆ ಬೀಳುತ್ತಲ್ಲ ?"

"ಹೌದಲ್ಲ ! ? ! " ವ್ಯಕ್ತಿ ತಬ್ಬಿಬ್ಬಾದ.

"ಆದರೆ ಅದು ಮತ್ತೆ ಸರಿಯಾದ ದಾರಿ ಹಿಡಿದರೆ ನಷ್ಟವಾದ ಸಮಯವನ್ನು ಹತ್ತುಪಟ್ಟು ವೇಗದಲ್ಲಿ ಕ್ರಮಿಸಿ, ಗಳಿಸುತ್ತದೆ ಎಂದು ಮರೆಯಬೇಡ. ತನ್ನ ತಪ್ಪನ್ನು ಅರಿತುಕೊಂಡ ಸಜ್ಜನ ಮಂದಬುದ್ಧಿಯವನಿಗಿಂತ ಬೇಗ ಸಜ್ಜನಿಕೆಯ ಗುರಿ ಮುಟ್ಟುತ್ತಾನೆ."

(4) ಜೆಸ್ಟ್ ಬಳಿ ಬಂದ ಒಬ್ಬ ಸಾಧು ಹೇಳಿದ : "ದೇವರ ಸೇವೆಯಲ್ಲಿ ನಾನು ಬಳಲಿ ಬೆಂಡಾಗಿ ಹೋಗಿದ್ದೇನೆ. ಆದರೆ ನನಗಿನ್ನೂ ಒಳ್ಳೆಯದಾಗಿಲ್ಲವಲ್ಲ. ನಾನಿನ್ನೂ ಸಾಮಾನ್ಯ ಹಾಗೂ ಅಜ್ಞಾನಿ..."

ಜೆಸ್ಟ್ ಉತ್ತರಿಸಿದರು : "ನೀನು ಸಾಮಾನ್ಯ ಹಾಗೂ ಅಜ್ಞಾನಿಯಾಗಿದ್ದೀಯ ಎನ್ನುವಷ್ಟು ಜ್ಞಾನವನ್ನು ಪಡೆದಿದ್ದೀಯಲ್ಲ, ಇಷ್ಟು ಜ್ಞಾನ ಸಂಪಾದನೆಯೂ ಶ್ಲಾಘನೀಯ !"

ಇಸ್ರೇಲ್‌ನ ಜನಪದದಲ್ಲಿ ಬಳಕೆಯಲ್ಲಿರುವ ಮಿದ್ರಾಶ್ ಪಂಥದ ಸಿನಗಾಗ್‌ಗಳಲ್ಲಿ ರಬ್ಬಾಯಿಗಳು ಬೈಬಲ್ಲಿನ ಸಾಲುಗಳು ಅಥವಾ ಅಧ್ಯಾಯಗಳನ್ನು ವಿವರಿಸುತ್ತಾ ಉಲ್ಲೇಖಿಸಿದ ಕತೆಗಳಲ್ಲಿ ಕೆಲವು :

(1) ಸಾಮ್ರಾಟ್ ಹಾಡ್ರಿಯನ್ ಇಡೀ ಜಗತ್ತನ್ನು ಗೆದ್ದಮೇಲೆ ಒಂದು ದಿನ ತನ್ನ ಆಸ್ಥಾನಿಕರನ್ನು ಉದ್ದೇಶಿಸಿ ಹೇಳಿದ : "ಇನ್ನು ಮುಂದೆ ನಾನೇ ದೇವರು ; ನೀವೆಲ್ಲ ಇನ್ನು ಮುಂದೆ ನನ್ನನ್ನು ದೇವರಂತೆ ಕಾಣಬೇಕು."

ಒಬ್ಬ ಎದ್ದು ನಿಂತು ಹೇಳಿದ : "ಬಹಳ ಸಂತೋಷ ದೊರೆಗಳೆ. ಹಾಗಿದ್ದ ಮೇಲೆ ನಮ್ಮ ಕಷ್ಟಕಾಲದಲ್ಲಿ ನಿಮ್ಮ ಸಹಾಯ ಅತ್ಯಗತ್ಯವಾಗಿದೆ. ಸಹಾಯಮಾಡಿ."

"ಏನಾಗಬೇಕು ."

"ನನ್ನ ಸಂಪತ್ತನ್ನೆಲ್ಲ ತುಂಬಿಕೊಂಡಿರುವ ನನ್ನ ಹಡಗು ತೀರದಿಂದ ಮೂರು ಮೈಲಿ ದೂರದಲ್ಲಿ ಮುಳುಗುವ ಹಂತದಲ್ಲಿದೆ. ಕೃಪೆ ಮಾಡಬೇಕು."

"ಆಯಿತು. ಹಡಗನ್ನು ರಕ್ಷಿಸಲು ನೌಕಾಪಡೆಯವರನ್ನು ಕಳಿಸುತ್ತೇನೆ."

"ಪಡೆಯ ಅವಶ್ಯಕತೆ ಇಲ್ಲ ದೊರೆಗಳೆ. ಸ್ವಲ್ಪ ಗಾಳಿ ಎಬ್ಬಿಸಿ ಸಾಕು."

"ಗಾಳಿಯನ್ನು ಎಬ್ಬಿಸುವುದು ನನ್ನಿಂದ ಹೇಗೆ ಸಾಧ್ಯ ?"

"ಸಾಧ್ಯವಿಲ್ಲದಿದ್ದರೆ ಗಾಳಿಯನ್ನು ಸೃಷ್ಟಿಸಿದ ದೇವರೇ ತಾವೆಂದು ಹೇಗೆ ಹೇಳಿಕೊಂಡಿರಿ ?"

ಸಾಮ್ರಾಟ್‌ನ ಕಣ್ಣು ತೆರೆದವು.

(2) ಆಂಟೋನಿನಸ್ ಒಮ್ಮೆ ರಬ್ಬಾಯ್ ಯುದಾಹ–ನಸಿ ಅವರನ್ನು ಕೇಳಿದ

"ಪ್ರತಿ ಗಂಟೆಗೂ ಒಮ್ಮೊಮ್ಮೆ ದೇವರ ಪ್ರಾರ್ಥನೆ ಮಾಡುವುದರ ಬಗ್ಗೆ ನಿಮ್ಮ ಅಭಿಪ್ರಾಯವೇನು ?"

"ಕೂಡದು. ಮನುಷ್ಯ ವಿನಾಕಾರಣ ದೇವರನ್ನು ಕರೆಯುವುದನ್ನು ರೂಢಿ ಮಾಡಿಕೊಂಡುಬಿಡುತ್ತಾನೆ."

ಆಂಟೋನಿನುಸ್‌ಗೆ ರಬ್ಬಾಯಿ ಕೊಟ್ಟ ಉತ್ತರದಿಂದ ಸಮಾಧಾನವಾಗಲಿಲ್ಲ.

ರಬ್ಬಾಯಿಯವರು ಮರುದಿನ ಮುಂಜಾನೆಯಿಂದ ಪ್ರತೀ ಗಂಟೆಗೆ ಒಮ್ಮೆ ಅವನ ಬಳಿ ಹೋಗಿ, "ರಾಜನೇ ನಿನಗೆ ಒಳ್ಳೆಯದಾಗಲಿ" ಎಂದು ಹೇಳಿ ಬರ ತೊಡಗಿದರು.

ಆಂಟೋನಿನಸ್‌ಗೆ ಸಿಟ್ಟು ನೆತ್ತಿಗೇರಿ, "ಸಾಮ್ರಾಟನನ್ನು ಛೇಡಿಸುವಷ್ಟು ಧೈರ್ಯವೆ ನಿನಗೆ ?" ಎಂದು ಗದರಿಸಿದ.

ರಬ್ಬಾಯಿ ಯುದಾ ಶಾಂತವಾಗಿ ಹೇಳಿದರು, "ಕೇವಲ ಲೌಕಿಕರ ರಾಜನಾದ ನಿನಗೆ ಗಂಟೆಗೊಮ್ಮೊಮ್ಮೆ ವಂದನೆ ಸ್ವೀಕರಿಸಲು ಇಷ್ಟೊಂದು ಸಿಟ್ಟು ಬರುತ್ತದೆ ಎಂದಮೇಲೆ ರಾಜರ ರಾಜನಾದ ದೇವರಿಗೆ ಹೇಗಾಗಬೇಡ ! ?"

(3) ರಬ್ಬಾಯಿ ಸೀಮಿಯನ್ ಬೆನ್ ಯೊಹಾವಸ್ ಹೇಳಿದ ಕತೆ :

ಒಂದು ದೋಣಿಯಲ್ಲಿ ಎಂಟು ಹತ್ತು ಮಂದಿ ಪ್ರಯಾಣ ಮಾಡುತ್ತಿದ್ದರು. ಅವರಲ್ಲಿ ಒಬ್ಬ ಇದ್ದಕ್ಕಿದ್ದಂತೆ ಒಂದು ಈಟಿ ತೆಗೆದು ತಾನು ಕುಳಿತಿದ್ದ ಜಾಗದಲ್ಲಿ ಒಂದು ತೂತು ಕೊರೆಯತೊಡಗಿದ. ಅವನ ಜೊತೆಗಾರರು ಅದೇನು ಮಾಡುತ್ತಿದ್ದಾನೆಂದು ಕೇಳಿದರು.

"ನಾನೇನಾದರೂ ಮಾಡುತ್ತೇನೆ, ನಿಮಗೇನು ? ನನ್ನ ಅಂಡು ಕೆಳಗಿನ ಜಾಗ ವನ್ನು ನಾನು ಕೊರೆದುಕೊಂಡರೆ ನಿಮಗೂ ಅದಕ್ಕೂ ಏನು ಸಂಬಂಧ ?"

"ಖಂಡಿತಾ ಸಂಬಂಧವಿದೆ. ಆ ತೂತಿನಿಂದ ನೀರು ಒಳಕ್ಕೆ ನುಗ್ಗಿದರೆ ಇಡೀ ದೋಣಿ ಮುಳುಗುತ್ತೆ, ನಾವೆಲ್ಲ ಮುಳುಗುತ್ತೇವೆ."

(4) ರಬ್ಬಾಯಿ ಇದಿ ಅವರು ಹೇಳಿದ ಕತೆ :

ಸಿದಾನ್‌ನಲ್ಲಿ ಹತ್ತು ವರ್ಷವಾದರೂ ಮಕ್ಕಳಾಗದ ದಂಪತಿಗಳು ರಬ್ಬಾಯಿ ಸೀಮಿಯನ್ ಬೆನ್ ಯೊಹಾವಸ್ ಅವರ ಬಳಿ ಬಂದು, ಆ ಕಾರಣದಿಂದ ತಮಗೆ ವಿವಾಹ ವಿಚ್ಛೇದನ ಕೊಡಬೇಕೆಂದು ಕೇಳಿಕೊಂಡರು.

"ನೀವಿಬ್ಬರೂ ಸಂತೋಷಕೂಟದ ಮೂಲಕ ಒಂದಾದಿರಿ. ಹಾಗೇ ಇನ್ನೊಂದು ಸಂತೋಷಕೂಟದ ನಂತರ ಬೇರೆಯಾಗಿ" ಎಂದು ರಬ್ಬಾಯಿ ಹೇಳಿದರು.

ಅದರಂತೆ ಅವರಿಬ್ಬರೂ ಒಂದು ಸಂತೋಷಕೂಟ ನಡೆಸಿದರು. ಆ ದಿನ ಅವಳು ತನ್ನ ಗಂಡ ಚೆನ್ನಾಗಿ ಕುಡಿಯುವಂತೆ ಮಾಡಿದಳು. ಅಮಲಿನಲ್ಲಿ ಅವನು ಹೇಳಿದ, "ನನ್ನ ಮನೆಯಲ್ಲಿ ಅತ್ಯಮೂಲ್ಯವಾದದ್ದು ಏನನ್ನಾದರೂ ನೀನು ನಿನ್ನ ಜೊತೆ ತಂದೆ ಮನೆಗೆ ತೆಗೆದುಕೊಂಡು ಹೋಗು."

ಅವನು ನಿದ್ದೆ ಹೋದಮೇಲೆ ಆಳುಗಳನ್ನು ಕರೆದು ಅವಳು ಅವನನ್ನು ತನ್ನ ತಂದೆ ಮನೆಗೆ ಸಾಗಿಸಿಬಿಟ್ಟಳು. ಮಧ್ಯರಾತ್ರಿ ಅವನಿಗೆ ಎಚ್ಚರವಾಗಿ ಎದ್ದುಕೂತು, ಅವಳನ್ನು ಕೇಳಿದ, "ಎಲ್ಲಿಗೆ ಕರಕೊಂಡು ಬಂದಿದ್ದೀಯ ನನ್ನನ್ನು ?"

"ನನ್ನ ತಂದೆ ಮನೆಗೆ."

"ಯಾಕೆ ?"

"ನೀವೇ ಹೇಳಲಿಲ್ಲವೆ, ನನಗೆ ಅತ್ಯಮೂಲ್ಯವೆನಿಸಿದ್ದನ್ನು ಆ ಮನೆಯಿಂದ ತೆಗೆದುಕೊಂಡು ಹೋಗಬಹುದೆಂದು ? ಆ ಮನೆಯಲ್ಲಿ ಇರಲಿ, ಈ ಪ್ರಪಂಚಲ್ಲೇ ನಿಮಗಿಂತ ಅಮೂಲ್ಯವಾದದ್ದು ನನಗೆ ಇನ್ಯಾವುದೂ ಇಲ್ಲ."

ಇಬ್ಬರೂ ರಬ್ಬಾಯಿ ಹತ್ತಿರ ಹೋಗಿ ನಡೆದದ್ದನ್ನು ಹೇಳಿದರು. ರಬ್ಬಾಯಿ ಅವರಿಗಾಗಿ ಪ್ರಾರ್ಥಿಸಿದರು. ಮುಂದೆ ಅವರಿಗೆ ಮಗು ಆಯಿತು.

(5) ಬರೀ ಮಹಿಳೆಯರಿದ್ದ ಒಂದು ರಾಜ್ಯಕ್ಕೆ ಸಾಮ್ರಾಟ್ ಅಲೆಕ್ಸಾಂಡರ್ ಬಂದ. ಅವರ ಮೇಲೆ ಯುದ್ಧ ಸಾರಬೇಕೆಂದುಕೊಂಡ. ಆದರೆ ಅವರು ಹೇಳಿದರು :

"ನೀನು ನಮ್ಮನ್ನು ಸೋಲಿಸಿದರೆ ಜನ, 'ಅವನು ಹೆಂಗಸರನ್ನು ಸೋಲಿಸಿದ' ಎಂದು ಹೇಳುತ್ತಾರೆ ; ನಮ್ಮಿಂದ ಸೋಲನ್ನು ಅನುಭವಿಸಿದರೆ ಜನ 'ಎಂಥಾ ಸಾವಕ್ರಾಟ ಅವನು, ಹೆಂಗಸರಿಂದ ಸೋತುಹೋದ' ಅನ್ನುತ್ತಾರೆ."

ಯುದ್ಧದ ವಿಷಯ ಕೈಬಿಟ್ಟು ಅಲೆಕ್ಸಾಂಡರ್ "ಆಯಿತು, ನನಗೆ ತಿನ್ನಲು ರೊಟ್ಟಿ ಕೊಡಿ" ಎಂದ.

ಚಿನ್ನ ಮಣೆಯ ಮೇಲೆ ಚಿನ್ನದ ರೊಟ್ಟಿಯನ್ನು ತಂದು ಅವನ ಮುಂದೆ ಇರಿಸಲಾಯಿತು.

"ಚಿನ್ನವನ್ನು ಎಲ್ಲಾದರೂ ತಿನ್ನಲು ಸಾಧ್ಯವೇನು ?"

"ನಿನಗೆ ತಿನ್ನಲು ರೊಟ್ಟಿ ಬೇಕಿದ್ದರೆ ನಿಮ್ಮ ರಾಜ್ಯದಲ್ಲಿ ಸಿಗುತ್ತಿರಲಿಲ್ಲವೆ ? ಇಷ್ಟು ದೂರ ರೊಟ್ಟಿ ಹುಡುಕಿಕೊಂಡು ಬರಬೇಕಿತ್ತೆ ?"

ಅಲೆಕ್ಸಾಂಡರ್ ಕಣ್ಣು ತೆರೆದು, ಅಲ್ಲಿಂದ ಹೊರಟ. ಹೋಗುವಾಗ ಊರಿನ ಹೆಬ್ಬಾಗಿಲ ಮೇಲೆ ಬರೆದ :

"ನಾನು ಅಲೆಕ್ಸಾಂಡರ್ ಅಜ್ಞಾನಿಯಾಗಿದ್ದೆ. ಆಫ್ರಿಕಾದ ಹೆಂಗಸರಿಂದ ಬುದ್ಧಿ ಕಲಿಯಬೇಕಾಯ್ತು."

# ಪರಿತಪ್ತ

ಮೂಲ : ಇಸ್ರೇಲ್ ಜೋಷುವಾ ಸಿಂಗರ್
ಅನು : ಶೈಲಜಾ ದೇವರಾಜ್

[ಇಸ್ರೇಲ್ ಜೋಷುವಾ ಸಿಂಗರ್, 189 ನೇ ಇಸವಿಯಲ್ಲಿ, ಪೋಲೆಂಡ್ ದೇಶದಲ್ಲಿ ಹುಟ್ಟಿದ ಯೆಹೂದಿ. ಇವರು ಐಸಾಕ್ ಬಾಷೇವಿಕ್ ಸಿಂಗರ್‌ನ ಸಹೋದರ. 'The Brother Ashakenaze' ಎಂಬ ಇವರ ಕೃತಿ ಇಡ್ಡಿಷ್ ಸಾಹಿತ್ಯದಲ್ಲಿ ಅತ್ಯಂತ ಜನಪ್ರಿಯವಾಗಿತ್ತು. ಷೋಲೆಮ್ ಆಷ್‌ನ ಜೊತೆಗೆ, ಇಡ್ಡಿಷ್ ಸಾಹಿತ್ಯದ ಯೆಹೂದಿ ಸಾಮಾಜಿಕ ಕಾದಂಬರಿಕಾರರಲ್ಲಿ ಅತ್ಯಂತ ಶ್ರೇಷ್ಠ ಬರಹಗಾರ ಈತ. ಇಸ್ರೇಲ್ ಜೋಷುವಾ 20ನೇ ಶತಮಾನದ ಮೊದಲ ಎರಡು ದಶಕಗಳ, ಯೆಹೂದೀಯರ ಸಾಮಾಜಿಕ ಪರಿಸ್ಥಿತಿಯನ್ನು ಸಮರ್ಥವಾಗಿ ಅಭಿವ್ಯಕ್ತಿಸಿರುವ, ಹಿರಿಯ ಬರಹಗಾರ ಎಂಬುದರಲ್ಲಿ ಸಂಶಯವಿಲ್ಲ. 1933ರಲ್ಲಿ, ನ್ಯೂಯಾರ್ಕಿನ ಇಡ್ಡಿಷ್ ರಂಗಭೂಮಿಯಲ್ಲಿ ಪ್ರದರ್ಶಿತಗೊಂಡ ಇವರ 'Yoshe kalb' ಅತ್ಯಂತ ಯಶಸ್ವೀ ಪ್ರಯೋಗವಾಗಿತ್ತು. ಮುಂದೆ ಜೋಷುವಾ, ನ್ಯೂಯಾರ್ಕ್ ನಗರದಲ್ಲಿ ನೆಲಸಿ, 'ಜ್ಯೂಯಿಷ್ ಡೈಲಿ ಫಾರವರ್ಡ್'ಗೆ ಲೇಖನಗಳನ್ನು ಬರೆಯುತ್ತಿದ್ದರು. ಈತ 1944ರಲ್ಲಿ ನ್ಯೂಯಾರ್ಕಿನಲ್ಲಿ ನಿಧನರಾದರು.]

ಕೊಜಾಮಿರ್ ಪ್ರಾಂತ್ಯದ ರೇಬಿ ಎಜಕಿಲ್ ಮತ್ತು ಅವನ ಅನುಚರರು. ಪರಿವರ್ತಿತ ಯೆಹೂದೀಯರ, ಪವಿತ್ರ ಆನಂದಮಾರ್ಗದ ಅನುಯಾಯಿಗಳು. ಇವರೆಲ್ಲ ಕಟ್ಟಾ ಸಂಪ್ರದಾಯವಾದಿ ಯೆಹೂದೀಯರ ಆಚರಣೆಗೆ ಬೇಸತ್ತು, ಅವರಿಂದ ಬೇರ್ಪಟ್ಟು ಈ ಆನಂದಮಾರ್ಗದಲ್ಲಿ ಮುಕ್ತಿ ಕಾಣ ಹೊರಟ ಪವಿತ್ರಾತ್ಮರು. ಇವರಿಗೆಲ್ಲ ಪ್ರಧಾನ ಆಚಾರ್ಯ ರೇಬಿ ಎಜಕಿಲ್. ಇವನು ವಿಶಾಲ ಎದೆಯುಳ್ಳ ಎತ್ತರದ ವ್ಯಕ್ತಿ. ಆಜಾನುಬಾಹು. ತನ್ನ ಭಕ್ತ ಸಮೂಹದಲ್ಲಿ, ಬೆಳ್ಳಿ ಜರಿಯ ನವಿರು ನೇಯ್ಗೆಯ ಚಿತ್ತಾರವುಳ್ಳ ಪ್ರಾರ್ಥನಾ ಮೇಲುಹೊದಿಕೆಯನ್ನು ಹೊದ್ದು ಎತ್ತರದ ಜಗುಲಿಯ ಮೇಲೆ ಕುಳಿತಿರುತ್ತಿದ್ದನು. ಅಲ್ಲಿಗೆ ಬರುವ ಎಲ್ಲ ಅನುಚರರ ಯೋಗಕ್ಷೇಮ ವಿಚಾರಿಸುತ್ತ ಅವರನ್ನು ಆದರದಿಂದ ಕಾಣುತ್ತಿದ್ದನು. ರೇಬಿ ಎಜಕಿಲ್ ಮತ್ತು ಅವನ ಅನುಯಾಯಿಗಳು ಪವಿತ್ರಾನಂದದಲ್ಲಿ ಮಾತ್ರವಲ್ಲದೆ, ತಾವು ದಿನನಿತ್ಯ ತಿನ್ನುವ ಅನ್ನ ಆಹಾರಗಳಿಂದ ದೇಹವನ್ನು ಸಂತೃಪ್ತಿಗೊಳಿಸುವುದೂ ಆನಂದ

ಮಾರ್ಗದ ಒಂದು ಹಾದಿ ಎಂದು ನಂಬಿದ್ದರು. ಆನಂದ ಮಾರ್ಗದಲ್ಲಿ ವರ್ಷವಿಡೀ ಪವಿತ್ರ ಉಪವಾಸದ ದಿನಗಳು ಹಲವು ಇದ್ದರೂ, ಇವರು ಮಾತ್ರ ಪವಿತ್ರ ಪ್ರಾಯಶ್ಚಿತ್ತದ ದಿನದಂದು ಮಾತ್ರ ಉಪವಾಸ ಮಾಡುತ್ತಿದ್ದರು. ಈ ರೀತಿ ಉಪವಾಸಗಳಿಂದ, ವಿನಾಕಾರಣ ದೇಹವನ್ನು ದಂಡಿಸುವುದರಲ್ಲಿ ಅರ್ಥವಿಲ್ಲವೆಂದು, ಇವರೆಲ್ಲರೂ ನಂಬಿದ್ದರು. ಇವರಲ್ಲಿ ಯಾರಿಗಾದರೂ ಉಪವಾಸ ಮಾಡಬೇಕೆಂದು ಕನಸು ಬಿದ್ದರೂ ಸರಿ, ಅವರನ್ನು ಊರಾಚೆ ವಿಸ್ತುಲಾ ನದಿಯ ಆಚೆ ದಂಡೆಗೆ ಕಳುಹಿಸಲಾಗುತ್ತಿತ್ತು.

ಇಂದು ರೇಬಿ ಎಜಕಿಲ್, ಬರಿಯ ನೆನಪು ಮಾತ್ರ. ಆದರೆ, ಅಂದು ಅವನು ಬಳಸುತ್ತಿದ್ದ ಬೆಳ್ಳಿಯ ಹಿಡಿಯುಳ್ಳ ಊರುಗೋಲು, ಬಿಳಿಯ ಸಿರಿಚಿನ್ ಬಟ್ಟೆಯ ಅರ್ಥ ತೋಳಿನ ಈಜಾಡುವ ಉದ್ದನೆಯ ಹೊರವಸ್ತ್ರ ಅದಕ್ಕೆ ಹಾಕಿದ್ದ ಬೆಳ್ಳಿಯ ಕೊಕ್ಕೆ—ಇವು ಇಂದಿಗೂ ಆ ಪ್ರಾರ್ಥನಾ ಮಂದಿರದಲ್ಲಿಡಲಾಗಿದೆ. ಆದರೆ ಅಷ್ಟು ದೊಡ್ಡ ಹಿಡಿಕಟ್ಟನ್ನು ಹಿಡಿದು ನಡೆದಾಡುವ ಎತ್ತರದ ದೊಡ್ಡ ವ್ಯಕ್ತಿ ಮಾತ್ರ ಅವನ ವಂಶಸ್ಥರಲ್ಲಿ ಇಂದು ಯಾರೂ ಇಲ್ಲ. ಆದರೂ ಪವಿತ್ರ ದಿನಗಳಲ್ಲಿ ವಿಶೇಷ ಹುಲ್ಲಿನ ಆವರಣವುಳ್ಳ ವೇದಿಕೆಯ ಮೇಲೆ ಈ ಉದ್ದನೆಯ ನಿಲುವಂಗಿಯನ್ನು ಧರಿಸಿ, ಅವನ ಮೊಮ್ಮಕ್ಕಳು ವರ್ಷಾರಂಭದ ದಿನದಲ್ಲಿ, ಟಗರಿನ ಕೊಂಬಿನ ಕಹಳೆಯೂದುತ್ತಾ, ಬರುವುದು ಒಂದು ಪದ್ಧತಿಯಾಗಿದೆ.

ರೇಬಿ ಎಜಕಿಲ್‌ನ ಭವ್ಯ ಬಂಗಲೆಯ ಆವರಣ ದೊಡ್ಡ ಆಸ್ಥಾನದಂತಿದ್ದು ಪ್ರಾರ್ಥನಾ ಮಂದಿರವೂ ಆಗಿತ್ತು. ಅಲ್ಲಿ ಹಾಡುವ, ನರ್ತಿಸುವ ಹಾಗೂ ದ್ರಾಕ್ಷಾರಸ ಹೀರುತ್ತಿರುವ ಅನೇಕ ಪರಿವರ್ತಿತ ಪವಿತ್ರಾತ್ಮರು ಸದಾಕಾಲ ತುಂಬಿರುತ್ತಿದ್ದರು.

"ಯಾವುದೇ ನಿಯಮದ ಸೊಗಸು ಅದರ ಬರಿಯ ಆಚರಣೆಯಲ್ಲಿಲ್ಲ. ಆಚರಿಸುವವನ ರೀತಿಯ ಆಂತರಿಕ ಹೊಳಹಿನಲ್ಲಿದೆ. ಅಂತೆಯೇ ಪ್ರಾರ್ಥನೆಯ ಹಿರಿಮೆ, ಅದರ ಮಂತ್ರಗಳ ಉಚ್ಚಾರಣೆಯಲ್ಲಿಲ್ಲ, ತನ್ಮಯಗೊಂಡ ಮನಸ್ಸಿನಿಂದ ಹೊಮ್ಮುವ ಧ್ವನಿಯ ಮಾಧುರ್ಯದಲ್ಲಿದೆ"—ಎಂದು ರೇಬಿ ಎಜಕಿಲ್, ಅವನ ಮಕ್ಕಳು ಹಾಗೂ ಅವನ ಅನುಚರರು ದೃಢವಾಗಿ ನಂಬಿ, ಅದನ್ನು ಆಚರಿಸುತ್ತಿದ್ದರು.

ಒಂದು ದಿನ, ಪರಿವರ್ತಿತ ಪವಿತ್ರ ಯೆಹೂದೀಯರ ಆಚರಣೆಯನ್ನೂ, ರೇಬಿ ಎಜಕಿಲ್‌ನನ್ನೂ ಕಟುವಾಗಿ ಟೀಕಿಸುತ್ತಿದ್ದ, ವಿರೋಧೀ ಗುಂಪಿನ ಹಿರಿಯ ಕಟು ಸಂಪ್ರದಾಯವಾದಿ ರೇಬಿ ನೆಫಥಲಿ, ತಮ್ಮ ಊರಿಗೆ, ಕೊಜಮಿರ್ ಪ್ರಾಂತ್ಯಕ್ಕೆ, ಧಾರ್ಮಿಕ ವಿಶ್ರಾಂತಿ ದಿನದ ಆಚರಣೆಯನ್ನು ವೀಕ್ಷಿಸಲು ಬರುತ್ತಿರುವನೆಂಬ ಸಂಗತಿ, ಇವರಿಗೆಲ್ಲ ತಿಳಿದು ಅಚ್ಚರಿ ಮೂಡಿಸಿತು. ಇದೇನು ವಿಚಿತ್ರವೆಂದು ಎಲ್ಲರೂ ಹುಬ್ಬೇರಿಸಿದರು !

ಎಲುಬು ಚರ್ಮದ ಗೂಡಿನಂತಿರುವ, ಕುಬ್ಜ ದೇಹದ ಬಲಹೀನ ವ್ಯಕ್ತಿ ರೇಬಿ ನೆಫಥಲಿ. ಜೋರಾಗಿ ಗಾಳಿ ಬೀಸಿದರೆ ಎಲ್ಲಿ ಹಾರಿಹೋಗುವನೋ ಎನ್ನುವಷ್ಟು

ದುರ್ಬಲ ದೇಹಿ. ಇಂತಹ ವ್ಯಕ್ತಿ ಪ್ರತಿದಿನ ಸಂಜೆ ಹೊತ್ತಿನಲ್ಲಿ ಒಂದು ಬಟ್ಟಲು ಸೂಪ್ ಕುಡಿಯುವುದನ್ನು ಬಿಟ್ಟರೆ ಮತ್ತಾವ ಆಹಾರವನ್ನೂ ಸೇವಿಸುತ್ತಿರಲಿಲ್ಲ. ಅಲ್ಲದೆ ವಾರದ ಎಲ್ಲ ದಿನಗಳೂ ಪವಿತ್ರ ಉಪವಾಸದ ದಿನವೇ ಎಂದು ನಂಬಿ ವಿಶ್ರಾಂತಿಯ ದಿನವಾದ ಶನಿವಾರದಂದು ಮಾತ್ರ ಕೊಂಚ ಮಾಂಸದೊಂದಿಗೆ ಮೀನಿನ ಕಣ್ಣನ್ನು ಮಾತ್ರ ಸೇವಿಸುತ್ತಿದ್ದನು. ಇವುಗಳಿಂದ ಎಲ್ಲಿ ನಾಲಿಗೆ ರುಚಿ ಬಯಸುವುದೋ ಎಂದು ಕುಡಿಯುವ ಸೂಪಿಗೆ ಅಗತ್ಯಕ್ಕಿಂತ ಒಂದು ಹಿಡಿ ಉಪ್ಪನ್ನು ಹೆಚ್ಚಿಗೆ ಬೆರೆಸಿ ಸೇವಿಸುತ್ತಿದ್ದನು. ಹೀಗೆ ದಂಡಿಸಿದ ಸವಕಲು ದೇಹದಲ್ಲಿ ಉಬ್ಬಿದ ಗಂಟಲಿನಿಂದ, ಅವನು ನುಂಗುವ ತುಣುಕು ಮಾಂಸವೂ ಗಂಟಲಿನೊಳಗೆ ಇಳಿಯುವುದನ್ನು ಕಾಣಬಹುದಾಗಿತ್ತು. ಇಷ್ಟು ಸಾಲದೆಂದು ರೇಬಿ ನೆಫಥಲಿ ದಿನದಲ್ಲಿ ಎರಡು ಗಂಟೆಗಳು ಮಾತ್ರ ನಿದ್ರಿಸುತ್ತಿದ್ದನು. ಉಳಿದ ಸಮಯದಲ್ಲಿ ಸದಾ ಪವಿತ್ರ ಗ್ರಂಥಗಳನ್ನು ಪಠಿಸುತ್ತಿದ್ದನು. ಜಡ ದೇಹ ಪೋಷಣೆಯಾಗಲಿ, ಐಹಿಕ ಸುಖದಿಂದಾಗಲಿ ನೆಮ್ಮದಿ ಇಲ್ಲವೆಂದು ನಂಬಿದ್ದ ರೇಬಿ ನೆಫಥಲಿ, ತನ್ನ ಹೆಂಡತಿ ಹಾಗೂ ಸಂಸಾರವನ್ನು ತ್ಯಜಿಸಿ ಬಂದಿದ್ದನು. ಈಗ ಅವಳು ಎಲ್ಲಿ ? ಹೇಗೆ ? ಜೀವಂತ ಇರುವಳೇ ಎಂಬ ಸಂಗತಿಯೂ ಇವನಿಗೆ ತಿಳಿಯದು. ಈ ಐಹಿಕ ಸುಖದಿಂದ ದೂರ ಬಂದಿರುವೆನೆಂದು ಹೇಳುತ್ತ, ಕ್ಷಣಿಕವಾದ ದೇಹವನ್ನು ದಂಡಿಸುತ್ತ, ಭಕ್ತಿ ಗ್ರಂಥಗಳನ್ನು ಓದುತ್ತಾ ತನ್ನನ್ನು ತಾನು ಮರೆಯಲು ಪ್ರಯತ್ನಿಸುತ್ತಿದ್ದರೂ, ಆ ಸುಖ ಸಂತೋಷಗಳ ಆಮಿಷ ಅವನ ಅಂತರಂಗದಲ್ಲಿ ಕಾಡುತ್ತಲೇ ಇತ್ತು. ಕತ್ತಲೆಯಾದೊಡನೆ ದೇಹದ ಹಸಿವು ಅವನನ್ನು ಕಾಡುತ್ತಿತ್ತು. ರಾತ್ರಿ ನಿದ್ರೆಯಲ್ಲಿ ಮಾತ್ರವಲ್ಲ ನಿಂತಲ್ಲಿ, ಕೂತಲ್ಲಿ, ಹಗಲಿರುಳು ದೇಹದ ಬಯಕೆ ಅವನನ್ನು ಆವರಿಸಿತ್ತು. ಪವಿತ್ರ ಪುಸ್ತಕಗಳ ಎದುರು ಕುಳಿತು ಓದುತ್ತಿದ್ದಾಗಲೂ, ತನ್ನೆಲ್ಲ ಬಯಕೆಗಳು ಸ್ತ್ರೀಯಾಕಾರ ತಾಳಿ ತನ್ನನ್ನು ಆಕರ್ಷಿಸುತ್ತಿರುವಂತೆ ಭಾಸವಾಗುತ್ತಿತ್ತು. 'ಥೂ ! ಕೆಟ್ಟ ಯೋಚನೆ ! ಎಂದು ಪುಸ್ತಕ ಪಕ್ಕಕ್ಕೆ ತಳ್ಳಿ ಕಣ್ಣು ಮುಚ್ಚಿ ಕೊಂಚ ನೆಮ್ಮದಿ ಪಡೆಯೋಣವೆಂದರೆ, ಕಣ್ಣು ಮುಚ್ಚಿದರೆ ಸಾಕು ಆ ಭಾವನೆಗಳೆಲ್ಲ ಸಾಕಾರಗೊಂಡು ನಿಚ್ಚಳವಾಗಿ, ಮತ್ತಷ್ಟು ಸ್ಫುಟವಾಗಿ ಕಾಣಿಸುತ್ತಿದ್ದವು. ಕಿವಿಗೆ ಅದೇ ಮಧುರ ಧ್ವನಿ ! ಕಣ್ಣಿಗೆ ಅದೇ ಸುಂದರ ರೂಪ ! ತನ್ನ ನೀಳ್ಗೂದಲನ್ನು ಸುತ್ತ ಹರಡಿ, ನಿಮೀಲಿತ ನೇತ್ರೆಯಾಗಿ, ನಗ್ನ ದೇಹಿಯಾದ ಸ್ತ್ರೀರೂಪವೊಂದು, ಅಸಹ್ಯವಾದ ವಿವಿಧ ಭಂಗಿಗಳಲ್ಲಿ ನರ್ತಿಸುತ್ತಾ, ಮಧುರ ಕಂಠದಲ್ಲಿ ಸುಶ್ರಾವ್ಯವಾಗಿ ಹಾಡುತ್ತ ಉನ್ಮಾದದಿಂದ ತನ್ನ ಬಾಹು ಚಾಚಿ ತನ್ನನ್ನು ಬಾಚಿ ತಬ್ಬಿ ಉದ್ರೇಕಿಸುತ್ತಿರುವಂತೆ, ತನ್ನ ನೀಳ ಬೆರಳುಗಳಿಂದ ತನ್ನ ಕುರುಚಲು ಗಡ್ಡವನ್ನು ನೇವರಿಸುತ್ತಿರುವಂತೆ, ಇನ್ನೂ ಏನೇನೋ...ಚಿತ್ರಗಳು ಕಾಣುತ್ತಿದ್ದವು.

ಈ ಭಾವನೆಗಳು ಮನದಲ್ಲಿ ಲಗ್ಗೆ ಹಾಕುವುದನ್ನು ಹತ್ತಿಕ್ಕಲು ರೇಬಿ ನೆಫಥಲಿ ಮನೆಯ ಹೊರಾವರಣದ ಮೂಲೆಯಲ್ಲಿದ್ದ ಸ್ನಾನದ ತೊಟ್ಟಿಯತ್ತ ಧಾವಿಸುತ್ತಿದ್ದ.

ಆ ನಡುರಾತ್ರಿಯಲ್ಲಿ, ನಡುಕ ಹುಟ್ಟಿಸುವ ಚಳಿಯಲ್ಲಿ ಹೆಪ್ಪು ಗಟ್ಟಿದ ತಣ್ಣೀರಿನಲ್ಲಿ ಮುಳುಗಿ ತನ್ನ ದೇಹದ ಕಾವನ್ನು ತಣಿಸಲು ಪ್ರಯತ್ನಿಸುತ್ತಿದ್ದ. ಆಗಲೂ ತೊಟ್ಟಿಗೆ ಬಿದ್ದ ಅವನ ತಲೆಗೆ ತಾಕುತ್ತಿದ್ದುದು ಸ್ನಾನದ ತೊಟ್ಟಿಯ ಕೊರೆವ ಕಲ್ಲಲ್ಲ. ರೇಷ್ಮೆ ದುಕೂಲದಿಂದ ಹೊದೆಸಿದ ಸುಪ್ಪತ್ತಿಗೆಯನ್ನು ತಬ್ಬಿದ ಸುಖಾನುಭವವೇ. ಅದೇ ಉದ್ರೇಕ ! ಅದೇ ಮಾದಕ ಮೈ ಮಾಟದ ಸುಂದರ ನಗ್ನ ಸ್ತ್ರೀ ! ಪೂರ್ಣ ನಗ್ನಳಾಗಿ ! ತನ್ನ ತೋಳುಗಳ...ತನ್ನ ಈ ಬಯಕೆಯನ್ನು ಕೊರೆವ ನೀರು ಏನೂ ಮಾಡಲಾರ ದೆಂದು ತಿಳಿದು ಗಾಬರಿಗೊಂಡು ಮೇಲೆದ್ದು ಧೃತಿಗೆಡುತ್ತಿದ್ದನು. ಇದರಿಂದ ಮನಶ್ಶಾಂತಿ ಇಲ್ಲದೆ ತೊಳಲಾಡುತ್ತಿದ್ದನು. ಕಡೆಗೆ ಅವನಿಗೆ ಹೊಳೆಯುತ್ತಿದ್ದ ಉಪಾಯ ಒಂದೇ—ಮತ್ತಷ್ಟು ದೇಹ ದಂಡನೆ. ಆದರೆ ದೇಹವನ್ನು ಎಷ್ಟು ದಂಡಿಸಿದರೇನು, ಮನದ ಬಯಕೆ ಮಾತ್ರ ಗರಿಗೆದರಿ ಗಗನದಗಲ ಬೆಳೆದು ನಿಂತು ಅವನನ್ನು ಚಿತ್ರಹಿಂಸೆಗೆ ಗುರಿಮಾಡಿತ್ತು. ಈ ದುಷ್ಟ ಯೋಚನೆಯನ್ನು ನಿಯಂತ್ರಿಸ ಲಾರದೆ ಸರಿಯಾದ ಊಟ ನಿದ್ರೆಗಳಿಲ್ಲದೆ, ತೊಳಲುತ್ತಾ ಬಳಲುತ್ತಾ, ತನ್ನ ದುಸ್ಥಿತಿ ಗಾಗಿ ತಾನೆ ಮರುಗುತ್ತಾ ದಿನವೆಲ್ಲಾ ಕಣ್ಣೀರು ಸುರಿಸಿದರೂ ಆ ಕಣ್ಣೀರು ಇಂಗದ ಒರತೆಯಾಗಿತ್ತು. ಆಗ "ಎಂಥ ಮೂರ್ಖ ! ನೀನು ? ಸದ್ಗುಣಿಯಾದ ನಿನ್ನ ಹೆಂಡತಿಯನ್ನು ತೊರೆದು ಬಂದು ಕನಸಿನಲ್ಲಿ ಹಲವಾರು ಸುಂದರ ಸ್ತ್ರೀಯರ ತೋಳ್ತೆ ಕ್ಕೆಯಲ್ಲಿ ಅಸಹ್ಯ ಕಾಮಕೇಳಿಯಲ್ಲಿ ತೊಡಗಿರುವ ನೀಚ ! ನೀನು ! ಸಾಧಾರಣ ಹುಲ್ಲು ಹಾಸಿಗೆಯನ್ನು ಬೇಡವೆಂದು ರೇಷ್ಮೆ ಸುಪ್ಪತ್ತಿಗೆಯಲ್ಲಿ ಹೊರಳಾಡುತ್ತಿರುವ ಹುಂಬ ! ಅಲ್ಲವೆ ?..." ಎಂದು ಒಂದು ದುಷ್ಟಶಕ್ತಿ ಆಗಾಗ ಇವನ ಕಿವಿಯಲ್ಲಿ ಪಿಸು ಗುಡುತ್ತಲೇ ಇತ್ತು.

ಇದರಿಂದ ಮತ್ತಷ್ಟು ಜರ್ಝರಿತನಾದ ರೇಬಿ ಸಪಥಲಿ, ಏನು ಮಾಡಲೂ ತಿಳಿಯದೆ ಮನಶ್ಶಾಂತಿಗಾಗಿ ಹಂಬಲಿಸುತ್ತಿದ್ದ. ಪರಿಹಾರ ತಿಳಿಯದೆ ಚಿಂತಿಸಿ ಚಿಂತಿಸಿ ಹಣ್ಣಾಗಿದ್ದ. "ಈ ಹಾಳು ಕಣ್ಣುಗಳಿಂದ ಪಾಪಪೂರಿತ ಚಿತ್ರಗಳನ್ನು ನೋಡುವುದ ಕ್ಕಿಂತ ಇಂಗಿಹೋಗಬಾರದೆ"—ಎಂದು ಹಲುಬುತ್ತಿದ್ದ. ಈ ಆಲೋಚನೆ ಇನ್ನೂ ಮನಕ್ಕೆ ಬಂದಿತ್ತೋ ಇಲ್ಲವೋ, ಆ ದುಷ್ಟಶಕ್ತಿಗಂತೂ ತಿಳಿದು ರೇಬಿ ಸಪಥಲಿಯ ಕಿವಿಯಲ್ಲಿ ಹೀಗೆ ಪಿಸುಗುಟ್ಟಿತ್ತು—ಎಲೈ ಮಹಾ ಮೂರ್ಖನೇ ! ಈ ಜಡದೇಹದ ಚರ್ಮದಿಂದಾವೃತವಾದ ಈ ಕಣ್ಣನ್ನು ಕಳೆದುಕೊಳ್ಳಲು ಏಕೆ ಆಶಿಸುವೆ ? ನಿನಗೇ ಗೊತ್ತು. ನೀನು ಕಾಣುತ್ತಿರುವ ಆ ಪಾಪಪೂರಿತ ಕಾಮನೆಗಳು ನಿನ್ನ ಹೊರಗಣ್ಣು ಕಾಣುತ್ತಿರುವ ದೃಶ್ಯಗಳಲ್ಲ. ಈ ಕಣ್ಣು ಮುಚ್ಚಿದರೂ ಇದಕ್ಕೂ ಹತ್ತು ಪಟ್ಟು ಹೆಚ್ಚಿನ ಪಾಪಪೂರಿತ ದೃಶ್ಯಗಳನ್ನು ನಿನ್ನ ಒಳಗಣ್ಣು ಕಾಣಬಲ್ಲದು. ಅಲ್ಲವೆ ? !" ಎಂದು.

ಈ ಎಲ್ಲ ಸಂಕಟ, ತೊಳಲಾಟಗಳಿಂದ ಪಾರಾಗಲು ಅವನ ಬಳಿ ವಿಧಿಸಿ ಕೊಳ್ಳಬಹುದಾದ ಯಾವ ಶಿಕ್ಷೆಯೂ ಉಳಿದಿರಲಿಲ್ಲ. ಶಿಕ್ಷೆ ಸಹಿಸುವ ಶಕ್ತಿಯಂತೂ

ಆ ಬಣಕಲು ದೇಹಕ್ಕಿರಲಿಲ್ಲ. ಕಡೆಗೂ ಅವನ ಕಣ್ಣೀರಿನ ತೊರೆ ಇಂಗಿತ್ತು. ದುರ್ಬಲ ಕಣ್ಣುಗಳು ಶೂನ್ಯವನ್ನು ದಿಟ್ಟಿಸುತ್ತ ಉಬ್ಬಿನಿಂತಿದ್ದವು. ಇಂಥ ಸಮಯದಲ್ಲಿ ಅವನಿಗೆ ಹೊಳೆದ ಉಪಾಯ – ರೇಬಿ ಎಜಕಿಲ್‌ನ ನೆನಪು. ಈ ಎಲ್ಲ ಸಮಸ್ಯೆಗಳಿಗೆ ಕೊಜಮಿರ್ ಪ್ರಾಂತ್ಯದಲ್ಲಿ ನೆಲಸಿರುವ ಪರಿವರ್ತಿತ ಪವಿತ್ರಾತ್ಮರ ಆಚಾರ್ಯ ರೇಬಿ ಎಜಕಿಲ್ ಬಳಿ ಉತ್ತರ ಸಿಗಬಹುದೆ ? ಅಲ್ಲಿಗೆ ಹೋಗಿ ಪ್ರಯತ್ನಿಸೋಣವೆಂದು ಹೊರಟೇ ಬಿಟ್ಟ ರೇಬ್ ನೆಪಥಲಿ. ಅವನ ಸಲಹೆಯಿಂದ ಸಮಾಧಾನದ ನೆಲೆ ತಿಳಿಯಬಹುದೆ, ಈ ಎಲ್ಲ ಗೊಂದಲಕ್ಕೆ ಪರಿಹಾರ ದೊರೆತೀತೆ ಎಂದು ಯೋಚಿಸುತ್ತ, ತನ್ನ ತೊಗಲ ಚೀಲವನ್ನು ಹೆಗಲಿಗೇರಿಸಿ, ಪ್ರಾರ್ಥನಾ ಹೊದಿಕೆಯನ್ನು ಕೈ ಮುಂಗಟ್ಟಿನ ಮೇಲಿರಿಸಿ ಕೊಂಡು, ಪವಿತ್ರ ವಿಶ್ರಾಂತಿಯ ದಿನವಾದ ಶಬತ್‌ಗೆ ಮುಂಚೆ ಆ ಊರನ್ನು ತಲುಪ ಬೇಕೆಂದು ಕೊಜಮಿರ್‌ನ ದಾರಿ ಹಿಡಿದನು.

ಈ ಸುದ್ದಿ ತಿಳಿದೇ ಅತ್ತ ರೇಬಿ ಎಜಕಿಲ್‌ನ ಅನುಯಾಯಿಗಳು ಆಶ್ಚರ್ಯ ಗೊಂಡಿದ್ದರು. ತಮ್ಮ ಕಡುವಿರೋಧಿ, ಸಂಪ್ರದಾಯ ಶರಣ ರೇಬ್ ನೆಪಥಲಿ ಊರಿಗೆ ಬಂದು ಪ್ರಾರ್ಥನಾ ಮಂದಿರದಲ್ಲಿ ಇರುವುದನ್ನು ಕಂಡು ಅಲ್ಲಿಯ ಮುಖ್ಯಸ್ಥ ಜಂಭದಿಂದ ತನ್ನ ಬಿಳಿಗಡ್ಡವನ್ನು ನೇವರಿಸುತ್ತಾ "ಅನುಚರರೇ, ಖಂಡಿತ ವಾಗಿ ಇದು ನಮ್ಮ ಜಯದ ಸಂಕೇತ. ರೇಬಿ ನೆಪಥಲಿಯೇ ನಮ್ಮಲ್ಲಿಗೆ ಬಂದ ಮೇಲೆ ಇನ್ನು ಅವರ ಅನುಚರರು ಬರುವುದಕ್ಕೆ ಹೆಚ್ಚು ಕಾಲ ಉಳಿದಿಲ್ಲ. ನಮ್ಮ ಆಚಾರ್ಯರನ್ನು ಎಲ್ಲ ಯೆಹೂದೀಯರು ಪೂಜಿಸುವ ಕಾಲ ದೂರವಿಲ್ಲ. ಆ ಕಾಲ ಅತಿ ಶೀಘ್ರದಲ್ಲಿಯೇ ಬರಲಿದೆ" ಎಂದು ಪ್ರಾರ್ಥನಾ ಸಭೆಯ ಆವರಣದಲ್ಲಿ ಸೇರಿದ್ದ ಭಕ್ತರಿಗೆಲ್ಲ ಹೇಳಿದನು.

ಪ್ರಾರ್ಥನಾಸಭೆಯ ಆವರಣದಲ್ಲಿ ಬಂದಿದ್ದ ರೇಬಿ ನೆಪಥಲಿ ತಾನಂದು ಕೊಂಡಂತೆ, ಪವಿತ್ರ ಪಶ್ಚಾತ್ತಾಪದ ಮುನ್ನಾದಿನವೇ ಬಂದು ಸೇರಿದ್ದಕ್ಕೆ ಹರ್ಷಿಸುತ್ತ, ತಾನು ರೇಬಿ ಎಜಕಿಲ್ ಕಾಣಬೇಕೆಂದಿರುವ ವಿಷಯವನ್ನು ಅಲ್ಲಿಯ ಮುಖ್ಯಸ್ಥರಲ್ಲಿ ಹೇಳಿಕೊಂಡನು.

ಈ ವಿಷಯವೆಲ್ಲ ತಿಳಿದ ರೇಬಿ ಎಜಕಿಲ್, ತಾನು ಪವಿತ್ರ ಸ್ನಾನ ಮಾಡಲು ಹೊರಟಿರುವುದಾಗಿ ಹೇಳಿ, ಕಾದಿರಲು ತಿಳಿಸಿದನು. ಅಂದು ರೇಬಿ ಎಜಕಿಲ್ ಎಂದಿಗಿಂತ ಹೆಚ್ಚು ಹೊತ್ತು ಸ್ನಾನದ ತೊಟ್ಟಿಯಲ್ಲಿ ಮೀಯುತ್ತಿದ್ದನು. ಆವಿಯ ಕೊಠಡಿಯಲ್ಲಿ ಎಂದಿಗಿಂತ ಹೆಚ್ಚು ಎತ್ತರಕ್ಕೆ ಹೋಗಿ, ಕಲ್ಲಿನ ಮೇಲೆ ಹೆಚ್ಚು ಹೆಚ್ಚು ಬಿಸಿನೀರನ್ನು ಸುರಿದು ಹೆಚ್ಚು ಶಾಖವುಂಟುಮಾಡುವಂತೆ, ಸೇವಕರಿಗೆ ಕೂಗಿ ಹೇಳಿದನು. ಇವನೊಂದಿಗೆ ಸ್ನಾನಕ್ಕೆ ಹೋಗಿದ್ದ ಅನುಚರರು, ಆ ಆವಿಯ ಬಿಸಿಧಗೆ ತಾಳಲಾರದೆ ಹೊರಗೆ ಓಡುವುದನ್ನು ಕಂಡು ರೇಬಿ "ಈ ಬಿಸಿಯನ್ನೇ ತಾಳಲಾರದ ನೀವು ನರಕದ ಜ್ವಾಲೆಯ ಬಿಸಿಯನ್ನು ಸಹಿಸುವುದಾದರೂ ಹೇಗೆ ?"—ಎಂದು ಗಹಗಹಿಸಿ ನಕ್ಕನು. ಸ್ನಾನಾನಂತರ ಮೆತ್ತನೆಯ ಸುಪ್ಪತ್ತಿಗೆಯ ಮೇಲೆ ಮಲಗಿ,

ನೆಪಥಲಿಯ ಆಗಮನವನ್ನು ಬೇಕೆಂದೇ ಮರೆತವನಂತೆ ನಟಿಸಿದನು. ಕೊಂಚಕಾಲದ ನಂತರ ಮುಖ್ಯಸ್ಥನನ್ನು ಕರೆದು—"ಮಹಾಶಯರೇ, ನಾಳಿನ ಶಬತ್‌ಗಾಗಿ ತಯಾರಿಸಿರುವ ವಿಶೇಷ ಮೀನಿನ ಅಡುಗೆಯನ್ನು ಈ ಕೂಡಲೆ ತನ್ನಿ. ಹಾಗೆ ರೇಬಿ ನೆಪಥಲಿಯವರನ್ನೂ ಬರಮಾಡಿ" ಎಂದು ಆಜ್ಞಾಪಿಸಿದನು.

ಹಬ್ಬಕ್ಕಾಗಿ ಮಾಡಿದ ವಿಶೇಷ ಅಡುಗೆಯನ್ನು ಪವಿತ್ರ ಪಶ್ಚಾತ್ತಾಪದ ಮುನ್ನಾದಿನವೇ ರುಚಿ ನೋಡುವುದು ಅಲ್ಲಿಯ ಒಂದು ಪದ್ಧತಿಯಾಗಿತ್ತು. ಇದೇ ರೀತಿ ರತ್ನಖಚಿತ ಹಿಡಿಕೆಯುಳ್ಳ ಚಾಕುವನ್ನು ಸ್ವತಃ ರೇಬಿಯವರೇ ಮೊನಚುಗೊಳಿಸಿ, ಮೀನಿನ ಜೊತೆ ಬಂದವರಿಗೆಲ್ಲ ಬಡಿಸಲು ಈರುಳ್ಳಿಯನ್ನು ಕತ್ತರಿಸಿ ಕೊಡುವುದೂ ಒಂದು ನಿಯಮವಾಗಿತ್ತು. ಆದ್ದರಿಂದ ರೇಬಿ ಎಜಕಿಲ್ ಚಾಕು ಮೊನಚುಗೊಳಿಸುತ್ತಿದ್ದಾಗ ಎಲ್ಲ ಮರ್ಯಾದೆಗಳೊಡನೆ ನೆಪಥಲಿಯನ್ನು ಒಳಕೊಠಡಿಗೆ ಕರೆತರಲಾಯಿತು.

"ನಿಮಗೆ ಆದರದ ಸ್ವಾಗತ ! ಅಂತೆಯೇ ನಿಮ್ಮ ಆಗಮನದಿಂದ ನಾವೆಲ್ಲ ಪುನೀತರಾದೆವು"—ಎಂದು ಹರ್ಷದಿಂದ ರೇಬಿ ಎಜಕಿಲ್ ಸ್ವಾಗತಿಸಿದನು. ಅವನ ಗಾಢವಾದ ತುಂಬುದನಿಗೆ ನೆಪಥಲಿ ಬೆಚ್ಚಿ, ಸಣ್ಣಗೆ ನಡುಗಿದನು. ಇದನ್ನು ಗಮನಿಸದವನಂತೆ ರೇಬಿ ಎಜಕಿಲ್ ತಾನೇ ಕೈಚಾಚಿ ಅವನ ಕೈಹಿಡಿದು ಗಟ್ಟಿಯಾಗಿ ಕುಲುಕಿದನು. ಆ ಹಿಡಿತಕ್ಕೆ ಮೆಟ್ಟಿ ಬೀಳುವಂತಾಯಿತು ರೇಬ್ ನೆಪಥಲಿಗೆ.

"ಯಾವ ಒಳ್ಳೆಯ ಸಂಟಸ್ಥಿಕೆಗಾಗಿ ಇಲ್ಲಿಗೆ ತಮ್ಮ ಆಗಮನವಾಯಿತು ರೇಬಿ ನೆಪಥಲಿಯವರೆ ?"—ಎಂದ ಮಾತಿಗೆ, ನಡುಗುತ್ತಾ ನೆಪಥಲಿ ಉತ್ತರಿಸಿದ—'ಪಶ್ಚಾತ್ತಾಪಕ್ಕಾಗಿ !', 'ಪರಿವರ್ತನೆಗಾಗಿ !'.

"ಏನು ? ಪಶ್ಚಾತ್ತಾಪವೇ !"—ಎಂದು ಕೂಗಿ ಕೇಳುತ್ತಾ, ರೇಬಿ ಎಜಕಿಲ್ ಯಾವುದೋ ಮಧುರಾನುಭವದಿಂದ ಪುಳಕಿತಗೊಂಡವನಂತೆ—"ಪಶ್ಚಾತ್ತಾಪವೆ ! ನಿಜವಾಗಿ ? ಹಾಗಾದರೆ ಬನ್ನಿ. ತೆಗೆದುಕೊಳ್ಳಿ ಈ ವಿಸ್ಕಿಯ ಬಟ್ಟಲನ್ನು. 'ಪಶ್ಚಾತ್ತಾಪ !' ಪದದ ಅರ್ಥವಾದರೂ ಏನು ? ಬದಲಾಗುವುದೆಂದಲ್ಲವೇ ? ಒಬ್ಬ ಯೆಹೂದಿ ಒಂದು ಬಟ್ಟಲು ವಿಸ್ಕಿಯನ್ನು ಬುಡಮೇಲು ಮಾಡಿದನೆಂದರೆ ಅವನು, ಪರಿವರ್ತನೆಯ ದೀಕ್ಷೆ ಕೈಗೊಂಡನೆಂದೇ ಅಲ್ಲವೇ ?"—ಎಂದು ಹೇಳುತ್ತ ಎರಡು ಬೆಳ್ಳಿಯ ಬಟ್ಟಲಿಗೆ ವಿಶೇಷ ಪರಿಮಳಗಳನ್ನು ಹಾಕಿ ಘಮಘಮಿಸುತ್ತಿದ್ದ ವಿಸ್ಕಿಯನ್ನು ಸುರಿದು, ಒಂದನ್ನು ನೆಪಥಲಿಯ ಕೈಗಿತ್ತು—"ಉತ್ತಮ ಆರೋಗ್ಯ ಹಾಗೂ ಒಳ್ಳೆಯ ಬದುಕಿಗಾಗಿ" ಎಂದು ಹಾರೈಸುತ್ತಾ ಮತ್ತೊಂದು ಬಟ್ಟಲನ್ನು ಕೈಗೆತ್ತಿಕೊಂಡು, ಒಂದೇ ಗಟುಕಿಗೆ ಕುಡಿದು ಪೂರೈಸಿದನು.

ರೇಬ್ ನೆಪಥಲಿಗಾದರೋ ಆ ಮದ್ಯದ ಕಡುವಾಸನೆ ಮೂಗಿಗೆ ಬಡಿಯುತ್ತಿದ್ದಂತೆಯೇ ಗಂಟಲುಬ್ಬಿ ಬರತೊಡಗಿತು. ಜೋರಾಗಿ ಕೆಮ್ಮ ತೊಡಗಿದನು. ರೇಬಿ ಎಜಕಿಲ್, ಇದಾವುದನ್ನೂ ಗಮನಿಸದವನಂತೆ—"ರೇಬಿ ನೆಪಥಲಿಯವರೆ ! ನೀವು

ನನ್ನ ಸಲಹೆ-ಸಾಂತ್ವನ ಪಡೆಯಲು ಇಲ್ಲಿಗೆ ಬಂದಿರುವಿರಿ. ಆದ್ದರಿಂದ, ನಿಮಗೆ ನನ್ನ ಮೊದಲ ಸಲಹೆ ಅಥವಾ ಉಪದೇಶ ಈ ಭೋಜನ ಮಾಡುವುದು. ಮಧ್ಯಪಾನ ಮಾಡುವುದರ ಅವಶ್ಯಕತೆಯನ್ನು ಅರಿಯುವುದು"—ಎಂದು ಹೇಳುತ್ತಾ, ಮದ್ಯ ಒಂದೇ ಬಾರಿಗೆ ಪೂರೈಸುವಂತೆ ಒತ್ತಾಯಿಸಿದನು. ಚೆನ್ನಾಗಿ ಹದವಾಗಿ ಬೇಯಿಸಿದ ಮಾಂಸದ ದೊಡ್ಡ ಚೂರೊಂದನ್ನು ತಟ್ಟೆಯಲ್ಲಿಟ್ಟು ಅವನ ಮುಂದೆ ತಳ್ಳಿ—"ಇದು ನನ್ನ ಹೆಂಡತಿಯೇ ಸ್ವತಃ ತಯಾರಿಸಿದ, ಅತ್ಯಂತ ರುಚಿಯಾದ ಮಾಂಸದ ಅಡುಗೆ. ಅವಳು ನೋಡಲು ಹೇಗೆ ಸುಂದರಿಯೋ ಹಾಗೆ ಕೆಲಸದಲ್ಲಿ ನಿಪುಣೆ, ಧೈರ್ಯವಂತೆ" —ಎಂದು ಹೆಂಡತಿಯನ್ನು ಹೊಗಳುತ್ತಾ ಮಾಂಸವನ್ನು ತಿನ್ನತೊಡಗಿದನು.

ನೆಪಥಲಿ ಒಂದು ಚಿಕ್ಕ ಚೂರನ್ನು ಬಾಯಲ್ಲಿಟ್ಟು ನುಂಗಲು ಪ್ರಯತ್ನಿಸಿದ. ಆದರೆ ಅದು ಅವನ ಗಂಟಲಿನೊಳಗೆ ಇಳಿಯುವಲ್ಲದು. ಇವನ ಸ್ಥಿತಿಯನ್ನು ಗಮನಿಸುತ್ತಿದ್ದ ರೇಬಿ ಎಜಕಿಲ್, "ರೇಬಿ ನೆಪಥಲಿ ! ಪಶ್ಚಾತ್ತಾಪದ ಹಾದಿ ನಿನಗೇ ತಿಳಿದಿರುವಂತೆ ಸುಗಮವಲ್ಲ. ಬಹಳ ಪ್ರಯತ್ನ ಬೇಕು. ಅಲ್ಲದೆ, ಇಲ್ಲಿಗೆ ಒಮ್ಮೆ ಬಂದವರು ಹಿಂದಿರುಗಿ ಹೋಗುವಹಾಗಿಲ್ಲ"—ಎಂದು ಮತ್ತಷ್ಟು, ಇನ್ನಷ್ಟು ತಿನ್ನುವಂತೆ ಬಲವಂತಪಡಿಸತೊಡಗಿದನು. ಇವನ ಹಿಡಿತದಿಂದ ಪಾರಾಗುವಂತಿಲ್ಲ ಎಂದರಿತ ನೆಪಥಲಿ, ಕಷ್ಟಪಟ್ಟು ಒಂದಿಷ್ಟು ಮಾಂಸ ತಿಂದು ಮದ್ಯ ಕುಡಿದನು. ಇನ್ನು ಅವನಿಂದ ತಿನ್ನಲು ಸಾಧ್ಯವಿಲ್ಲ ಎಂದು ರೇಬಿ ಎಜಕಿಲ್‌ಗೆ ಖಚಿತವಾದ ಮೇಲೆ, ಅವನ ಕೈ ಹಿಡಿದೆಳೆಯುತ್ತಾ ಪಕ್ಕದ ಕೋಣೆಗೆ ಕರೆದೊಯ್ದು, ಅಲ್ಲಿದ್ದ ಮೆತ್ತನೆಯ ಸುಪ್ಪತ್ತಿಗೆಯ ಮೇಲೆ ಅವನನ್ನು ತಳ್ಳಿ ನಿದ್ರಿಸುವಂತೆ ಹೇಳಿದನು. ದಿನದ ರಾತ್ರಿಯ ವೇಳೆಯಲ್ಲೂ, ಬರಿ ನೆಲದ ಮೇಲೆ, ಎರಡು ಗಂಟೆಗಿಂತ ಹೆಚ್ಚು ಮಲಗದ ನೆಪಥಲಿ ದಿಗ್ಭ್ರಮೆಯಿಂದ "ಏನಿದು ? ಈ ಅಪರಾಹ್ನದ ವೇಳೆಯಲ್ಲಿ ನಿದ್ದೆ ! ಅದೂ ನಾಳೆ ಪವಿತ್ರ ವಿಶ್ರಾಂತಿಯ ಶಬತ್ ಇರುವಾಗ ? ಇಂದು ಈ ಮಧ್ಯಾಹ್ನ ಮಲಗುವುದೆ ?" ಎಂದು ಹೌಹಾರಿದನು. ಆಗ ರೇಬಿ ಎಜಕಿಲ್ "ನೋಡು! ಒಂದು ಕೆಟ್ಟ ಯೋಚನೆ ತಡೆಯಲು ಒಂದು ಮಧ್ಯಾಹ್ನವೇಕೆ, ಬೇಕಾದರೆ ಎರಡು ದಿನಗಳು ಸತತವಾಗಿ ನಿದ್ರಿಸಿದರೂ ತಪ್ಪಿಲ್ಲ. ಮಲಗು"—ಎಂದು ಉತ್ತರಕ್ಕೆ ಕಾಯದೆ ಹೊರಗೆ ಹೋಗಿ ಚಿಲುಕ ಹಾಕಿಬಿಟ್ಟನು.

ಹೀಗೆ ನೂತನ ವರ್ಷಾರಂಭದ ದಿನದಿಂದ, ಪ್ರಾಯಶ್ಚಿತ್ತದ ದಿನದವರೆಗಿನ ಹತ್ತು ದಿನಗಳಲ್ಲಿ ರೇಬಿ ನೆಪಥಲಿಗೆ ಹಲವು ರೀತಿಯ ಭಕ್ಷ್ಯ ಭೋಜನಗಳನ್ನು ನೀಡುತ್ತ, ಬದುಕನ್ನು ಸಂತೋಷದಿಂದ ಬಾಳುವ ಕಲೆಯನ್ನು ಕಲಿಸಲಾಯಿತು.

ಪ್ರತಿದಿನ ಪ್ರಾರ್ಥನಾ ಸಭೆಯಲ್ಲಿ ಪ್ರಾರ್ಥನಾರ್ಥಿಗಳಾಗಿ ಬರುವ ಎಲ್ಲರಿಗೂ ಕೇಳಿದಷ್ಟು ಮದ್ಯ ಒದಗಿಸಲಾಗುತ್ತಿತ್ತು. ಅವರೆಲ್ಲರ ಹರ್ಷದ ಹಾಡು ಕೊಜಮಿರ್ ಪಟ್ಟಣದ ಸುತ್ತಲ ಬೆಟ್ಟಗಳಿಂದ ಅನುರಣಿತಗೊಂಡು, ವಿಸ್ತುಲಾ ನದಿಯಾಚೆವರೆಗೆ ಕೇಳುತ್ತಲಿತ್ತು. ಈ ಪ್ರಾರ್ಥನೆಗಳಲ್ಲಿ ಭಾಗಿಯಾಗುತ್ತಿದ್ದ ನೆಪಥಲಿಯನ್ನು ಕರೆದು

ರೇಬಿ ಎಜಕಿಲ್ ವಿಚಾರಿಸುತ್ತಿದ್ದ—"ಏನು ? ನೆಪಥಲಿಯವರೆ ! ಈಗ ತಮ್ಮ ಮನಸ್ಸು ಆ ದುಷ್ಟ ಯೋಚನೆಗಳಿಂದ ಮುಕ್ತವಾಗಿದೆಯೆ ? ಮನಸ್ಸು ಪ್ರಶಾಂತ ವಾಗಿದೆಯೆ ?" ಎಂದಾಗ ರೇಬಿ ನೆಪಥಲಿ, "ಈಗ ಪರವಾಗಿಲ್ಲ, ಈಗ ತುಸು ಕಡಿಮೆ ಯಾಗಿದೆ ?" ಎಂದು ಉತ್ತರಿಸಿದರೆ, 'ಹಾಗಾದರೆ ಇನ್ನೊಂದಿಷ್ಟು ವಿಸ್ಕಿ ತೆಗೆದು ಕೊಳ್ಳಿ'—ಎಂದು ಮತ್ತೂ ಹೆಚ್ಚು ತಿನ್ನಲು, ಕುಡಿಯಲು ಸೂಚಿಸುತ್ತಿದ್ದನು. ಹೀಗೆ ವಿಶೇಷವಾಗಿ ಉಪಚರಿಸುತ್ತಾ, ರೇಬಿ ನೆಪಥಲಿಯ ನಡವಳಿಕೆಯಲ್ಲಾಗುವ ಬದಲಾವಣೆ ಗಳನ್ನು ಗಮನಿಸುತ್ತಾ, ತನ್ನ ಅನುಚರರಿಗೆ ತಾನು ನೀಡುವ ಊಟ–ಉಪಚಾರ, ಹೇಳಿ ಕೊಡುವ ಪ್ರಾರ್ಥನಾ ಗೀತೆಗಳು, ಮಲಗಲು ಕೊಡುವ ಸುಪ್ಪತ್ತಿಗೆ ಇವುಗಳನ್ನೆಲ್ಲ ತೋರಿಸಿ ವಿವರಿಸುತ್ತಿದ್ದನು

ಪಶ್ಚಾತ್ತಾಪದ ಮುನ್ನಾದಿನವಾದ ಅಂದು, ತನ್ನ ಮನೆಗೆ ಅತಿಥಿಯಾಗಿ ಬಂದಿರುವ ನೆಪಥಲಿಯನ್ನು ಮತ್ತಷ್ಟು ಆದರದಿಂದ ರೇಬಿ ಎಜಕಿಲ್ ಉಪಚರಿಸಿದನು. "ರೇಬಿ ನೆಪಥಲಿ ! ಚೆನ್ನಾಗಿ ತಿನ್ನು. ಇನ್ನೂ, ಮತ್ತೂ ಹೆಚ್ಚು ಹೆಚ್ಚಾಗಿ ತಿನ್ನು. ನೀನು ಎಷ್ಟು ತಿನ್ನುತ್ತೀಯೋ ಅಷ್ಟು, ಅದು ನಿನ್ನ ಗೈಮೆಯ ಫಲವೆಂದೇ ತಿಳಿ. ಸ್ವರ್ಗದಲ್ಲಿರುವ ನಿನ್ನ ಪುಸ್ತಕದಲ್ಲಿ ಅದನ್ನು ದಾಖಲಿಸಲಾಗುವುದು" ಎಂದು ವಿಶೇಷ ಆಸಕ್ತಿಯಿಂದ ಉಣಬಡಿಸಿದನು.

ಮರುದಿನ, ಪವಿತ್ರ ಪಶ್ಚಾತ್ತಾಪದ ದಿನ. ಈ ದಿನವನ್ನು ಕೊಜಮಿರ್ ನಲ್ಲಿರುವ ಪರಿವರ್ತಿತ ಪವಿತ್ರಾತ್ಮರಾದ ಯೆಹೂದೀಯರು ಬಹಳ ಸಂಭ್ರಮದಿಂದ ಆಚರಿಸುತ್ತಾರೆ. ಅಂದು ಪ್ರಧಾನ ಆಚಾರ್ಯನಾದ ರೇಬಿ ಎಜಕಿಲ್ ತಾನೇ ಸ್ವತಃ ನಿಂತು ಬೆಳಗಿನಿಂದ ರಾತ್ರಿಯವರೆಗೆ ನಿರಂತರ ಪ್ರಾರ್ಥನೆ ಸಲ್ಲಿಸುತ್ತಾನೆ. ಚಿನ್ನದ ಎಳೆಯಿಂದ ಚಿತ್ತಾರವನ್ನು ನೇಯ್ದ ಜರಿಯ ಬಿಳಿಯ ರೇಷ್ಮೆ ವಸ್ತ್ರವನ್ನು ಹೊದ್ದು, ಜರಿಯ ಚಿತ್ತಾರದಿಂದ ಹೊಳೆಯುವ ಟೊಪ್ಪಿ, ಅದರ ಮೇಲೆ ಕಿರೀಟ ತೊಟ್ಟು ಎತ್ತರದ ಜಗಲಿಯ ಮೇಲೆ ನಿಂತು, ಗಂಭೀರ ಧ್ವನಿಯಲ್ಲಿ ಪ್ರಾರ್ಥನಾ ಗೀತೆ ಹಾಡು ತ್ತಿರುವನು. ಇಡೀ ಪ್ರಾರ್ಥನಾ ಮಂದಿರ ಬಿಳಿಯ ಹೊದಿಕೆ ಹೊದ್ದು, ಹೊಳೆವ ಟೋಪಿ ತೊಟ್ಟ ಪ್ರಾರ್ಥನಾರ್ಥಿಗಳಿಂದ ತುಂಬಿಹೋಗಿತ್ತು. ಪ್ರಧಾನರ ಧ್ವನಿಯ ನ್ನನುಸರಿಸಿ, ಎಲ್ಲರೂ ತನ್ಮಯರಾಗಿ ಹಾಡುತ್ತಿದ್ದರು.

ರೇಬಿ ಎಜಕಿಲ್ 24 ಗಂಟೆಗಳಿಂದ ನಿರಾಹಾರಿಯಾಗಿ, ಒಂದು ತೊಟ್ಟು ನೀರನ್ನೂ ಸಹ ಕುಡಿಯದೆ ಇದ್ದರೂ, ನಿಃಶ್ಯಕ್ತಿ ತೋರಿಸಿಕೊಳ್ಳದೆ ಭಜಿಸುತ್ತಿದ್ದನು. ಅವನ ಸುತ್ತಲೂ ಅವನ ವಂಶಸ್ಥರೆಲ್ಲರೂ ಬಿಳಿಯ ರೇಷ್ಮೆವಸ್ತ್ರ ಧರಿಸಿ ಅವನ ದನಿ ಯೊಂದಿಗೆ ತಮ್ಮ ದನಿಯನ್ನು ಮೇಳೈಸಿ ಹಾಡುತ್ತಿದ್ದರು. ಮತ್ತೊಂದು ಬದಿಯಲ್ಲಿ ಅವನ ಸಂಸಾರದ ಹೆಂಗಳೆಯರೆಲ್ಲರು ದಿವ್ಯ ವಸ್ತ್ರಾದಿಗಳಿಂದ ಅಲಂಕೃತರಾಗಿ ಮಿಂಚುತ್ತಾ, ದಿವ್ಯ ಪ್ರಾರ್ಥನೆಯ ಸಂಗೀತ ಹಾಡುವುದರಲ್ಲಿ ತನ್ಮಯರಾಗಿದ್ದರು. ಈ ಎಲ್ಲರ ಒಕ್ಕೊರಳಿನ ದಿವ್ಯ ಸಂಗೀತದ ಅಲೆ ತೆರೆ ತೆರೆಯಾಗಿ ಹಬ್ಬಿ ಊರು, ಜೆಟ್ಟ,

ನದಿ ಎಲ್ಲವನ್ನೂ ದಾಟಿ ಉಕ್ಕಿ ಹರಿಯುತ್ತಿರುವಂತೆ ಭಾಸವಾಗುತ್ತಿತ್ತು. ಸಹಸ್ರ ಸಹಸ್ರ ಜನರಿಂದ ತುಂಬಿದ್ದ ಪ್ರಾರ್ಥನಾ ಮಂದಿರ ಅವರೆಲ್ಲರ ಭಕ್ತಿಯ ದಿವ್ಯ ಸಂಗೀತದಿಂದ ಪ್ರಶಾಂತವಾಗಿತ್ತು. ಇಂತಹ ದಿವ್ಯ ಸನ್ನಿಧಿಯಲ್ಲೂ ಕೂಡ ರೇಬಿ ನೆಪಥಲಿ, ಅಶಾಂತಿಯಿಂದ ತೊಳಲಾಡುತ್ತಿದ್ದ. ತನ್ನ ಪಾಪದ ಕೊಳೆಯನ್ನು ಕಣ್ಣೀರಿನಿಂದ ತೊಳೆಯೋಣವೆಂದರೆ ಈಗ ಕಣ್ಣಲ್ಲಿ ನೀರಹನಿಯೂ ಬಾರದಂತೆ ಬತ್ತಿಹೋಗಿತ್ತು. ಸೊಂಟ ಬಗ್ಗಿಸಿ ನಮಸ್ಕರಿಸಿ ನಿಂತ. ಆದರೂ ಏಕಾಗ್ರತೆ ಬರಲೊಲ್ಲದು. ಪ್ರಾರ್ಥನಾ ನಂತರ, ಬಂದ ಭಕ್ತರೆಲ್ಲರೂ ಉಳಿದ ಮೋಂಬತ್ತಿ ಜೂರಿನೊಂದಿಗೆ ಹಿಂದಿರುಗುತ್ತಾ, ಆಕಾಶದಲ್ಲಿ ಕಂಡ ತುಂಬು ಚಂದಿರನನ್ನು ಕಂಡು ಹರ್ಷೋದ್ಗಾರದಿಂದ "ಓ ಬೆಳಕೆ, ಆಕಾಶದಲ್ಲಿ ಬೆಳಗುತ್ತಿರುವಂತೆ, ನಮ್ಮ ಮನದ ಮೌಢ್ಯಕಳೆದು, ನಮ್ಮ ಮನದಲ್ಲಿ ಬೆಳಗು" ಎಂದು ಹಾರೈಸುತ್ತ ಹೊರಗೆ ಹೋಗುತ್ತಿದ್ದರು.

ಆಗ ರೇಬಿ ಎಜಕಿಲ್, ಅಶಾಂತಿಯಿಂದ ಮಿಸುಕಾಡುತ್ತ ಸಮೀಪದಲ್ಲೇ ನಿಂತಿದ್ದ ರೇಬಿ ನೆಪಥಲಿಯ ಕೈ ಹಿಡಿದೆಳೆಯುತ್ತ ನರ್ತಿಸಲು ಆಹ್ವಾನಿಸಿದನು. ಆ ಕ್ಷಣ ಏನಾಯಿತೋ ಏನೋ, ಮಿಂಚು ಬಡಿದವನಂತೆ ನಡುಗಿ, ಮರುಕ್ಷಣದಲ್ಲಿ ನೆಲಕ್ಕುರುಳಿದ ರೇಬಿ ನೆಪಥಲಿ. ಇದನ್ನು ನೋಡುತ್ತಿದ್ದ ಜನರಲ್ಲಿ ಗದ್ದಲವುಂಟಾಯಿತು. ಅವನ ತಣ್ಣನೆಯ ದೇಹ ಸ್ಪರ್ಶಿಸಿ ಗಾಬರಿಗೊಂಡರು. ಅಲ್ಲಿಯವರೆಗಿದ್ದ ಶಾಂತಿ ಕದಡಿ ಗೊಂದಲವೇರ್ಪಟ್ಟಿತು. ಹಲವಾರು ಭಕ್ತಾದಿಗಳು ಅವನ ಅಂತಿಮ ಸ್ಪರ್ಶಕ್ಕಾಗಿ ನುಗ್ಗತೊಡಗಿದರು. ದುಃಖ ತಾಳಲಾರದೆ ಮತ್ತೆ ಕೆಲವರು ಅಳತೊಡಗಿದರು. ಇಡೀ ಪರಿಸ್ಥಿತಿ ವಿಪರೀತಕ್ಕೆ ಹೋಗುವ ಮುನ್ನ ರೇಬಿ ಎಜಕಿಲ್ ಜನರನ್ನು ಉದ್ದೇಶಿಸಿ ಗಂಭೀರ ಧ್ವನಿಯಲ್ಲಿ—"ನಿಮ್ಮಲ್ಲಿ ಯಾರಿಗಾದರು ಅತ್ತು, ತಮ್ಮ ಅಳಲನ್ನು ತೋರಿಸುವ ಇಚ್ಛೆ ಇದ್ದರೆ, ಒಂದು ದೋಣಿಯಲ್ಲಿ ವಿಸ್ತುಲಾನದಿಯಾಚೆ ದಡಕ್ಕೆ ಹೋಗಿ, ಮನದಣಿಯೆ ಅಳಬಹುದು. ಆದರೆ ಪರಿವರ್ತಿತ ಪವಿತ್ರಾತ್ಮರಿರುವ ಈ ಕೊಜಮಿರ್‌ನಲ್ಲಿ ಮಾತ್ರ ಸಾಧ್ಯವಿಲ್ಲ" ಎಂದು ಹೇಳಿದನು.

ಈ ಮಾತು ಕೇಳುತ್ತಿದ್ದ ಹಾಗೆ ಜನ ನಿಶ್ಶಬ್ದರಾಗಿ ಮುಂದೇನಾಗುವುದೋ ಎಂದು ಕಾದು ನಿಂತರು. ರೇಬಿ ಎಜಕಿಲ್ ಎಂದಿನಂತೆ, ತನ್ನ ಕೊಠಡಿಯ ಮೇಜಿನ ಮೇಲಿರಿಸಿದ್ದ ಹೊಳೆಯುವ ಬಂಗಾರದ ಬಟ್ಟಲುಗಳಲ್ಲಿದ್ದ ವಿವಿಧ ರೀತಿಯ ತಿಂಡಿ-ತಿನಿಸು, ಹಣ್ಣು-ಹಂಪಲು, ವಿಸ್ಕಿ-ದ್ರಾಕ್ಷಾರಸಗಳನ್ನು ಎಲ್ಲರಿಗೂ ಹಂಚತೊಡಗಿದನು. ಅಂದು, ಎಂದಿಗಿಂತ ಹೆಚ್ಚಾಗಿ ಬಂದವರಿಗೆಲ್ಲ, ಕೇಳಿದವರಿಗೆಲ್ಲ ಕೈತುಂಬ ದಾನ ಮಾಡಿದನು. ಈ ಸಂಭ್ರಮ ಇಡೀ ರಾತ್ರಿ ನಡೆದಿತ್ತು. ನಸುಕಾಗುತ್ತಿದ್ದಂತೆ, ಪ್ರಾರ್ಥನಾರ್ಥಿಗಳೆಲ್ಲ ರೇಬಿಯ ಭಾಷಣ ಕೇಳಲು ಉತ್ಸುಕರಾಗಿ ನಿಂತರು. ರೇಬಿ ಎಜಕಿಲ್ ತನ್ನ ಪ್ರಾರ್ಥನಾ ಗೀತೆಯನ್ನು ಎಂದಿನಂತೆ ಹಾಡಿ, ಕೊನೆಯಲ್ಲಿ ಹೀಗೆ ಗಂಭೀರ ದನಿಯಲ್ಲಿ ಹೇಳಿದನು—"ಪವಿತ್ರಾತ್ಮರೇ, ನಾನು ಅವನಿಗೆ ದಿವ್ಯಾನಂದದ ಮಹತ್ವವನ್ನು ತಿಳಿಸಿಕೊಡ ಬಯಸಿದೆ. ಆದರೆ, ಅದನ್ನು ಅವನಿಂದ ಗ್ರಹಿಸಲಾಗಲಿಲ್ಲ"

ಎಂದು ಹೇಳುತ್ತಾ "ಕತ್ತಲೆಯ ದಾರಿಯಲ್ಲಿ ಅವನು ಬಹುದೂರ, ಬಹಳ ಆಳಕ್ಕೆ ಇಳಿದು ಮುಳುಗಿಬಿಟ್ಟಿದ್ದನು. ಅವನನ್ನು ಉಳಿಸಲು ಅನ್ಯದಾರಿಯೇ ಇರಲಿಲ್ಲ" —ಎಂದು ತನ್ನ ಕೊನೆಯ ವಾಕ್ಯವನ್ನು ಮುಗಿಸಿದನು.

ಪರಿವರ್ತಿತ ಪವಿತ್ರ ಯೆಹೂದಿಯರು—Chasidium.
ಪವಿತ್ರಾನಂದ ಮಾರ್ಗ—Joyousness.
ರೇಬಿ—ಯೆಹೂದೀ ಧರ್ಮಗೋಷ್ಠಿಯ ಪ್ರಧಾ ಗುರು.
ಶಬತ್-(Sabbath)—ಯೆಹೂದೀಯರಿಗೆ ಧಾರ್ಮಿಕ ವಿಶ್ರಾಂತಿಯ ದಿನವಾದ, ವಾರದ ಏಳನೆಯ ದಿನ, ಶನಿವಾರ, ವಿಶ್ರಾಂತಿಯ ದಿನ.

# ಪೋಲೆಂಡಿನ ಅಂತಿಮ ಯೆಹೂದ್ಯ

ಮೂಲ : ರಿಚರ್ಡ ಲೋರಿ
ಅನು : ಎಂ. ಎಸ್. ಶ್ರೀರಾಮ್

[ರಿಚರ್ಡ್ ಲೋರಿ ಪೋಲೆಂಡಿನ ಕಾದಂಬರಿಕಾರ. ಚೆಸ್ಲಾ ಮಿಲೋಜ್‌ನ ಗದ್ಯದ ಅನುವಾದ ಮಾಡಿದ್ದಾರೆ.]

ವಾರ್ಸಾ, ಭವಿಷ್ಯದಲ್ಲಿ...

ಒಂಭತ್ನಾಲ್ಕು ವರ್ಷದ ಆರೆನ್ ಆರೆನ್‌ಸನ್ ತನ್ನ ಆರಾಮ ಕುರ್ಚಿಯಲ್ಲಿ ಕೂತು ಮೀನಿನ ತುಣುಕಿನ ಕನಸು ಕಾಣುತ್ತಾ ತೂಕಡಿಸುತ್ತಿದ್ದ. ಮೀನಿನ ತುಣುಕು ವಾಸ್ತವಿಕವಲ್ಲವೆಂದು ತಿಳಿದಿದ್ದರೂ, ಕ್ಯೂನಲ್ಲಿ ನಿಲ್ಲುವುದರ ಅಥವಾ ತಲೆಯ ಮೇಲೆ ಏಟು ತಿನ್ನುವುದರ ಕನಸು ಕಾಣುವುದಕ್ಕಿಂತ ಉತ್ತಮವಾಗಿತ್ತು. ಮಿಯೋಡೊವಾ ರಸ್ತೆಯಲ್ಲಿನ ಅವನ ಮನೆಯ ಬಾಗಿಲನ್ನು ತಟ್ಟಿದ ಶಬ್ದ ಕೇಳಿಸಿದಾಗ, ಅವನು ವಾಸ್ತವಕ್ಕೆಚ್ಚರಗೊಂಡ.

"ನನ್ನ ಹೆಸರು ಜ್ಬಿಗ್ನಿವ್ ಕಾರಾಜೆಸ್ಕಿ" ಬಾಗಿಲಲ್ಲಿ ನಿಂತಿದ್ದ ಮನುಷ್ಯ ಹೇಳಿದ. "ನಾನು ಹೊಸ ಸಾಲಿಡಾರಿಟಿಯಿಂದ ಬಂದಿದ್ದೇನೆ. ನಿನ್ನ ಜತೆ ಮಾತಾಡಬೇಕು."

ಆರೆನ್‌ಸನ್ ಯುವಕನನ್ನು ಒಳಗೆ ಬರಮಾಡಿಕೊಂಡ. ಯುವಕ ತಲೆಯ ಮೇಲೆ ಕಾರ್ಮಿಕರ ಟೋಪಿ ಧರಿಸಿದ್ದ. ಬಂಗಾರ ಬಣ್ಣದ ಮೀಸೆ ಬೆಳೆಸಿದ್ದ. ಆಗಾಗ ಭಯದಿಂದೆಂಬಂತೆ ಕಿಟಕಿಯಾಚೆಗೆ ಇಣುಕಿ ನೋಡುತ್ತಿದ್ದ.

"ನಿಮಗೆ ಸ್ವಲ್ಪ ಚಹಾ ಕೊಡಲೇ ?"

"ಬೇಡ, ನನಗೆ ಹೊತ್ತಿಲ್ಲ. ಈಗ ಹೊಸದಾಗಿ ಯೆಹೂದ್ಯ–ದ್ವೇಷೀ ಭಾವನೆ ಎಲ್ಲೆಡೆ ಹರಡುತ್ತಿದೆ. ನಾವು ಕಾರ್ಮಿಕರು ಇಂಥ ಅಯೋಗ್ಯ ಭಾವನೆಗಳನ್ನು ಪೋಷಿಸುವುದಿಲ್ಲವೆಂದು ಪಾಶ್ಚಾತ್ಯರಿಗೆ ತೋರಿಸಿಕೊಡಬೇಕಾಗಿದೆ. ಇದಕ್ಕಾಗಿ ಹೊಸ ಸಾಲಿಡಾರಿಟಿಯ ಕಾರ್ಯಸಮಿತಿ ಏರ್ಪಾಟು ಮಾಡಿದ್ದೇನೆ. ನೀವು ಈ ಕಾರ್ಯಸಮಿತಿಗೆ ಸೇರಬೇಕೆಂದು ಕೇಳಿಕೊಳ್ಳಲು ಬಂದಿದ್ದೇನೆ. ಅಷ್ಟೇ."

"ಕಾರ್ಯಸಮಿತಿ? ಎಂದರೆ ಅಲ್ಲಿ ಸಾಕಷ್ಟು ಕೆಲಸವಿರುತ್ತೆ. ನನಗೆ ಕೈಲಾಗು

ವುದಿಲ್ಲ. ಕೆಲವು ದಿನಗಳು ನಾನು ಪತ್ರಿಕೆ ತರುವುದಕ್ಕೂ ಮನೆಯಿಂದಾಚೆಗೆ ಹೋಗೋದಿಲ್ಲವಲ್ಲಾ ಮಗೂ. ದಯವಿಟ್ಟು ಬೇಡ."

"ನೀವು ಮಾಡುವುದೇನೂ ಇರುವುದಿಲ್ಲ. ಕೆಲ ಮೀಟಿಂಗುಗಳು, ಕೆಲ ಸಂದರ್ಶನಗಳು...ಅಷ್ಟೇ."

"ಯೋಚನೆ ಮಾಡಿ ಹೇಳುತ್ತೇನೆ."

"ನಾವು ಪೋಲೆಂಡಿನ ಒಳಿತಿಗೇ ಇದನ್ನು ಮಾಡುತ್ತಿರುವುದು."

ಯುವಕ ಹೊರಟ ಹತ್ತು ನಿಮಿಷಕ್ಕೆ ಮತ್ತೆ ಬಾಗಿಲು ಬಡಿದ ಸದ್ದಾಯಿತು. ಈ ಬಾರಿ ಬಂದದ್ದು ದುಂಡಗಿದ್ದ ಮಧ್ಯವಯಸ್ಕ. ಕಡುನೀಲಿ ಬಣ್ಣದ ರೇನ್‌ಕೋಟ್ ಧರಿಸಿದ್ದ. ಕಂಕುಳ ಕೆಳಗೆ ಚರ್ಮದ ಬ್ರಿಫ್‌ಕೇಸ್ ಸಿಕ್ಕಿಸಿಕೊಂಡಿದ್ದ.

"ನನ್ನ ಹೆಸರು ಜ್ಬಿಗಿನಿವ್ ಲಿಪಿನ್‌ಸ್ಕಿ. ನಾನು ಕಮ್ಯೂನಿಸ್ಟ್ ಪಕ್ಷದಿಂದ ಬಂದಿದ್ದೇನೆ."

"ಸ್ವಲ್ಪ ಚಹಾ ಮಾಡಿಕೊಡಲೇ ?"

"ಬೇಡ, ನನಗೆ ಹೊತ್ತಿಲ್ಲ" ಭಯದಿಂದೆಂಬಂತೆ ಕಿಟಕಿಯಾಚೆಗೆ ನೋಡುತ್ತಾ ಹೇಳಿದ.

"ತಿಳಿಯಿತು, ತಿಳಿಯಿತುಬಿಡಿ. ನಾನು ಕಮ್ಯುನಿಸ್ಟ್ ಪಕ್ಷ ಸೇರಬೇಕು ಅಲ್ಲವೇ?"

"ಛೆ ಛೆ...ಕಮ್ಯುನಿಸ್ಟ್ ಪಕ್ಷದಲ್ಲಿ ಮತ್ತೊಬ್ಬ ಯೆಹೂದ್ಯ!" ಲಿಪಿನ್‌ಸ್ಕಿ ಕಾಲಿನ ಮೇಲೆ ಕಾಲು ಹಾಕುತ್ತಾ ಹೇಳಿದ. "ದಯವಿಟ್ಟು ಬೇಜಾರು ಮಾಡಿಕೊಳ್ಳಬೇಡಿ. ಇದು ವೈಯಕ್ತಿಕವಾಗಿ ನಿಮ್ಮನ್ನು ಉದ್ದೇಶಿಸಿ ಹೇಳಿದ್ದಲ್ಲ. ನೀವು ಖಂಡಿತವಾಗಿಯೂ ಒಳ್ಳೆಯವರೇ - ನೀವು ಪೊಲೀಸು ಗುಪ್ತದಳ ಸೇರಬೇಕು ಎಂದು ಕೇಳಿಕೊಳ್ಳಲು ಬಂದೆ.

"ಸ್ವಲ್ಪ ಗಂಭೀರವಾಗಿ ಯೋಚನೆ ಮಾಡೋಣ. ಗುಪ್ತದಳವೆಂದರೆ ಕೆಲಸ ಗಾರರನ್ನು ಬಡಿಯುವುದು – ಗಣಿ ಕಾರ್ಮಿಕರನ್ನು ಗುಂಡಿಟ್ಟು ಸುಡುವುದು – ಮನೆ ಗಳನ್ನು ಜಾಲಾಡುವುದು – ತುಂಬಾ ಕೆಲಸದ ವಿಷಯ."

"ಇಲ್ಲ, ಇಲ್ಲ – ನೀವು ಏನೂ ಮಾಡಬೇಕಾದ್ದಿಲ್ಲ. ಕೆಲವರನ್ನು ಬಂಧಿಸುವಾಗ ಹಾಜರಿದ್ದರೆ ಸಾಕು. ಅಷ್ಟೇ."

"ಯಾಕೆ ?"

"ಈಚಿನ ಎಲ್ಲ ವೈಫಲ್ಯದ ಹೊಣೆಯನ್ನು ಗುಪ್ತದಳದ ಮೇಲೆ ಹೇರಬೇಕೆಂದು ಪಕ್ಷದ ಯೋಚನೆ. ಪೋಲಿಶ್ ಜನ ಯೆಹೂದ್ಯರನ್ನು ದ್ವೇಷಿಸುವ ಬಗ್ಗೆ ನಾನಾಗಲೀ ನೀವಾಗಲೀ ಏನೂ ಮಾಡುವುದಕ್ಕೆ ಸಾಧ್ಯವಿಲ್ಲ. ನಾವೀಗ ಮಾಡಬಹುದಾದ್ದೆಂದರೆ ಆ ಭಾವನೆಯನ್ನು ಒಂದು ಒಳ್ಳೆಯ ಕಾರಣಕ್ಕಾಗಿ ಬಳಸುವುದಷ್ಟೇ. ಮಿಸ್ಟರ್ ಆರೆನ್‌ಸನ್ – ನೀವೇ ಯೋಚಿಸಿ – ಕರ್ನಲ್ ಆರೆನ್‌ಸನ್ ಅವರು ಕೆಲ ಪೋಲಿಶ್

ಪ್ರಜೆಗಳನ್ನು ಬಂಧಿಸಿದರೆಂಬುದನ್ನು ಜನ ಕೇಳಿದಾಗ ಅವರು ಸರಿಯಾದ ತೀರ್ಮಾನಕ್ಕೆ ಬರುತ್ತಾರೆನ್ನುವುದು ಖಾತ್ರಿ. ಅಲ್ಲವೇ ?"

"ಯೋಚನೆ ಮಾಡಿ ಹೇಳುತ್ತೇನೆ."

"ನಾವು ಪೋಲೆಂಡಿನ ಒಳಿತಿಗೇ ಇದನ್ನು ಮಾಡುತ್ತಿರುವುದು."

ಹತ್ತು ನಿಮಿಷಗಳ ನಂತರ ಮತ್ತೆ ಬಾಗಿಲು ಬಡಿದ ಸದ್ದಾಯಿತು. ಆರೆನ್‌ಸನ್ ಬಾಗಿಲು ತೆರೆದಾಗ ಕಂಡದ್ದು – ಉದ್ದ ಸೈಡ್‌ಬರ್ನ್ ಬಿಟ್ಟ ವಿದೇಶೀ ಬಟ್ಟೆ ತೊಟ್ಟ ಮನುಷ್ಯ.

"ಏನೂ ಹೇಳುವ ಅವಶ್ಯಕತೆಯಿಲ್ಲ. ತಡೆಯಿರಿ. ನೀವು ಗುಪ್ತದಳದಿಂದ ಬಂದಿದ್ದೀರಿ. ನಾನು ಕಮ್ಯುನಿಸ್ಟ್ ಪಕ್ಷ ಸೇರಬೇಕೆಂದು ನಿಮ್ಮ ಬಯಕೆ" ಆರನ್‌ಸನ್ ಹೇಳಿದ.

"ಪರವಾಗಿಲ್ಲವೇ ..." ತನ್ನನ್ನು ಜ್ಬಿಗ್ನಿವ್ ರ್ಝಾರ್‌ಜಿನ್‌ಸ್ಕಿ ಎಂದು ಪರಿಚಯಿಸಿಕೊಂಡ ಆ ವ್ಯಕ್ತಿ ಉದ್ಗರಿಸಿದ.

"ನಿಮಗೆ ಮೂರರಲ್ಲಿ ಎರಡಂಕ. ಆದರೆ ನೀವು ಹೊಸ ಸಾಲಿಡಾರಿಟಿ ಸೇರಬೇಕೆಂದು ನನ್ನ ಪ್ರಾರ್ಥನೆ."

"ಹೌದೇನು ? ಯಾಕೆ ?"

"ಈ ಸಂಸ್ಥೆಗೆ ಯೆಹೂದ್ಯರೊಂದಿಗೆ ಸಂಪರ್ಕವಿದೆಯೆಂದೂ. ಪೋಲೆಂಡಿನ ಸಮಾಜವಾದವನ್ನು ನಾಮಾವಶೇಷ ಮಾಡುವುದೇ ಅವರ ಉದ್ದೇಶವೆಂದೂ ನಿರೂಪಿಸಲು."

"ಇದನ್ನು ಯಾವ ಮೂರ್ಖ ತಾನೇ ನಂಬುವನು ?"

"ಇಲ್ಲ ಆರೆನ್‌ಸನ್... ಇದು ಅಷ್ಟು ಲಘುವಾದ ವಿಷಯವಲ್ಲ. ನಾವು ಯೆಹೂದ್ಯರನ್ನು, ವಿದೇಶಿಯರನ್ನು ಬೊಟ್ಟು ಮಾಡಿ ತೋರಿಸದಿದ್ದರೆ, ಸಮಾಜವಾದವನ್ನು ತ್ಯಜಿಸುತ್ತಿದ್ದೇವೆಂದು ಸೋವಿಯತ್ ದೇಶದವರು ಭಾವಿಸುತ್ತಾರೆ. ಆದರರ್ಥ ಯುದ್ಧದ ಟ್ಯಾಂಕುಗಳೆಂದೇ. ನಿಮ್ಮಂತಹ ಮೂಲವಿರುವ ಯಾವುದೇ ವ್ಯಕ್ತಿ ಜೂಡಾಸ್‌ನಂತೆ ದ್ರೋಹಿಯ ಪಾತ್ರ ವಹಿಸಲು ಇಷ್ಟಪಡುವುದಿಲ್ಲ...ಅಲ್ಲವೇ ? ನಿಮಗೆ ಯೋಚಿಸಲು ಇಪ್ಪತ್ನಾಲ್ಕು ಘಂಟೆ ಸಮಯಾವಕಾಶ ನೀಡುತ್ತೇನೆ." ತನ್ನ ಸಿಗರೇಟನ್ನು ನೆಲದ ಮೇಲೆ ಹಾಕಿ, ಸಾಂಕೇತಿಕ ಎಂಬಂತೆ ಹೊಸಕುತ್ತಾ ಅವನು ಈ ಮಾತುಗಳನ್ನು ಹೇಳಿದ.

ಆರೆನ್‌ಸನ್ ಯೋಚಿಸಿನೋಡಿದ. ಇವೆಲ್ಲವೂ ತುಂಬಾ ಗೊಂದಲಮಯವಾಗಿತ್ತು. ಕಡೆಗೆ ಮೂವರಲ್ಲಿ ಇಬ್ಬರು ಹೇಳಿದರೆಂಬ ಕಾರಣಕ್ಕೆ ಹೊಸ ಸಾಲಿಡಾರಿಟಿಯನ್ನು ಸೇರಲು ನಿರ್ಧರಿಸಿದ.

ಅವನು ಇನ್ನೇನು ಮಲಗಬೇಕೆನ್ನುವಾಗ ಮತ್ತೆ ಬಾಗಿಲು ಬಡಿದ ಶಬ್ದ ಕೇಳಿಸಿತು.

"ನನ್ನ ಹೆಸರು ಜ್ಬಿಗಿನಿವ್ ಬ್ರಿಲ್. ನಾನು ಉಗ್ರರಾಷ್ಟ್ರವಾದೀ ಸಂಸ್ಥೆಯಾದ-ಕಿರೀಟಧಾರಿ ಹದ್ದು ಮತ್ತು ಸಂತಕನ್ಯೆ...."

"ತಡೆಯಿರಿ" ಅವನನ್ನು ಮಧ್ಯದಲ್ಲೇ ತಡೆದು ಆರೆನ್‌ಸನ್ ತಾನೇ ಮಾತನಾಡಿದ- "ನಮ್ಮಿಬ್ಬರಿಗೂ ಸಮಯವಿಲ್ಲ. ನಾನು ಹೊಸ ಸಾಲಿಡಾರಿಟಿ ಸೇರುತ್ತಿದ್ದೇನೆ. ಅಷ್ಟೇ."

"ಜಿಪುಣ ಯೆಹೂದ್ಯ – ನನಗೊಂದು ಲೋಟ ಚಹಾವನ್ನಾದರೂ ಕೊಡಲಿಲ್ಲ" ಮೆಟ್ಟಿಲಿಳಿಯುತ್ತಾ ಬ್ರಿಲ್ ಅಂದುಕೊಂಡ.

ಮರುದಿನ ಮುಂಜಾನೆ ಆರೆನ್‌ಸನ್ ಮೊಟ್ಟೆ ಬೇಯಿಸಿಕೊಳ್ಳುತ್ತಿದ್ದ. ಈಚೆಗೆ ಅವನ ಆರೋಗ್ಯ ಕೆಟ್ಟಿತ್ತು. ಈ ಛಳಿಯಲ್ಲಿ ಉದ್ದನೆ ಸಾಲಿನಲ್ಲಿ ನಿಂತು ಪಡೆದ ಆಹಾರಕ್ಕೆ ಖರ್ಚಾದ ಚೈತನ್ಯಕ್ಕಿಂತ ಕಡಿಮೆ ಚೈತನ್ಯ ನೀಡುವ ಆಹಾರ ಅವನಿಗೆ ದಕ್ಕುತ್ತಿತ್ತೆಂಬುದನ್ನು ಅವನು ಲೆಕ್ಕ ಹಾಕಿದ್ದ. ಈ ರೀತಿಯಾಗಿ ಮುಂದುವರೆದರೆ, ಮಾರ್ಚಿನಂತ್ಯಕ್ಕೆ ತಾನು ಜೀವಂತವಿರುವುದಿಲ್ಲ ಎಂದೂ ಲೆಕ್ಕ ಹಾಕಿದ್ದ.

ಬಾಗಿಲು ಬಡಿದ ಶಬ್ದವಾಯಿತು. ಮತ್ತೆ ಹೊಸ ಸಾಲಿಡಾರಿಟಿಯ ಯುವಕನೇ ಅಲ್ಲಿ ನಿಂತಿದ್ದ.

"ಗುಪ್ತದಳ ಮತ್ತು ಪಕ್ಷದ ನಡುವೆ ಅಧಿಕಾರಕ್ಕಾಗಿ ಸೆಣಸಾಟ ನಡೆಯುತ್ತಿದೆ ಯೆಂದು ನಮಗೆ ಈಗಷ್ಟೇ ತಿಳಿದುಬಂದಿದೆ. ಯೆಹೂದ್ಯ ವಿರೋಧಿ ಭಾವನೆಯೇ ಅಲ್ಲಿ ಮುಖ್ಯ ಅಸ್ತ್ರ. ಹೀಗಾಗಿ ನಮ್ಮ ನಿಲುವು ಬದಲಾಗಿದೆ. ನೀವು ದಯಮಾಡಿ ಗುಪ್ತದಳ ಸೇರಬೇಕು !"

"ಆದರೆ....ಯಾಕೆ ?"

"ನಮ್ಮ ಸಮಾಜದ ಅತ್ಯಂತ ಹೀನ ಅಂಶಗಳತ್ತ ಈ ಯೆಹೂದ್ಯ ವಿರೋಧೀ ಭಾವ ಚಲಿಸುತ್ತದೆ ಎಂಬುದು ನಿಮಗಿನ್ನೂ ವೇದ್ಯವಾಗಿಲ್ಲವೇ ?"

"ಅದು ಸರಿ, ಆದರೆ ಇದರಿಂದ ನನಗೇನಾಗುತ್ತದೆ ?"

"ನಿಮಗೆ ? ಇದೆಲ್ಲಾ ಮುಗಿದ ಮೇಲೆ ಇಲ್ಲಿಂದ ಹೊರಬೀಳಲು ಪಾರ್ಟಿ ನಿಮಗೆ ಪರವಾನಗಿ ಕೊಡುವುದೆಂದು ನನಗೆ ಖಾತ್ರಿಯಿದೆ."

"ಆಗ ಪೋಲೆಂಡಿನಲ್ಲಿ ಯೆಹೂದ್ಯರೇ ಇರುವುದಿಲ್ಲವಲ್ಲಾ."

"ಅದರಿಂದೇನು ? ಪೋಲೆಂಡಿನಲ್ಲಿರುವ ಯೆಹೂದ್ಯ ವಿರೋಧಿಭಾವ ಎಷ್ಟು ವೀರಾವೇಶದಿಂದ ಕೂಡಿದೆಯೆಂದರೆ, ಅದಕ್ಕೆ ನಿಜವಾದ ಯೆಹೂದ್ಯರ, ನಿಜವಾದ ಅಸ್ತಿತ್ವದ ಅವಶ್ಯಕತೆಯೇ ಇಲ್ಲ."

"ಒಂದು ನಿಮಿಷ ಕ್ಷಮಿಸುವುದಾದರೆ – ನಾನು ಒಲೆಯ ಮೇಲಿಟ್ಟಿರುವ ಮೊಟ್ಟೆ ಯನ್ನು ಗಮನಿಸಬೇಕು - ಅದು ತುಂಬಾ ಬೆಂದರೆ, ಜೀರ್ಣಿಸಿಕೊಳ್ಳುವುದು ಕಷ್ಟ."

"ಈ ಮನೆಗೆ ಹಿಂದಿನ ಬಾಗಿಲಿದೆಯೇ ? ಪಾರ್ಟಿಯುವನೊಬ್ಬ ಬರುತ್ತಿರುವುದು ಕಾಣುತ್ತಿದೆ."

ಆರೆನ್‌ಸನ್ ಯುವಕನನ್ನು ಹಿಂದಿನ ಬಾಗಿಲಿನಿಂದ ಕಳಿಸಿ, ಒಲೆಯ ಬಳಿಗೆ ಓಡುತ್ತಿದ್ದಂತೆ ಮತ್ತೊಂದು ಬಾರಿ ಬಾಗಿಲು ಬಡಿದ ಶಬ್ದ ಕೇಳಿಸಿತು. ಅವರು ಕಾಯಲಿ... ಮೊದಲಿಗೆ ನಾನು ಗ್ಯಾಸನ್ನು ಆರಿಸುತ್ತೇನೆ ಎಂದುಕೊಳ್ಳುತ್ತಿರುವಾಗ, ಗ್ಯಾಸು ತಾನೇ ತಾನಾಗಿ ಆರಿಹೋಯಿತು. ಅದರ ಹಿಂದೆಯೇ ವಿದ್ಯುತ್ತೂ ಕಡಿದುಹೋಯಿತು.

"ಕ್ಷಮಿಸಿ, ನಿಮಗೆ ಜಾಗ ಕೊಡಲೂ ಸಾಧ್ಯವಿಲ್ಲ" ಪಾರ್ಟಿಯ ಅಧಿಕಾರಿಗೆ ಆರೆನ್‌ಸನ್ ಹೇಳಿದ.

"ಈಗಷ್ಟೇ ಗ್ಯಾಸ್ ನಿಂತುಹೋಯಿತು."

"ನಾವು ಅವರ ಕೃಪೆಯಲ್ಲಿದ್ದೇವೆಂದು ನೆನಪು ಮಾಡಲು ಸೋವಿಯತ್‌ನವರು ಹತ್ತು ನಿಮಿಷಕಾಲ ಗ್ಯಾಸ್ ನಿಲ್ಲಿಸುತ್ತಿದ್ದಾರೆ. ನೀವು ಈ ಕೂಡಲೇ ಹೊಸ ಸಾಲಿಡಾರಿಟಿ ಸೇರಬೇಕು."

"ಆದರೆ ಅವರಿಗೆ ನಾನು ಬೇಕಿಲ್ಲವಲ್ಲಾ"

"ಯಾಕಂತೆ? ಛೆ ದರಿದ್ರ ಯೆಹೂದಿ ದ್ವೇಷಿಗಳು."

"ನನಗೆ ಸರಿಯಾಗಿ ನೆನಪಿಲ್ಲ. ಅವರ ಕಾರಣ ತುಂಬಾ ಸಂಕೀರ್ಣವಾಗಿತ್ತು. ನೀವು ನನ್ನನ್ನು ಕ್ಷಮಿಸುವುದಾದರೆ, ನಾನು ನನ್ನ ಮೊಟ್ಟೆ ತಿನ್ನಬೇಕು. ಹಸಿವೆಯಿಂದ ಸ್ವಲ್ಪ ತಲೆ ಧಿಂ ಎನ್ನುತ್ತಿದೆ."

"ಮೊಟ್ಟೆಗಿಂತ ಪೋಲೆಂಡ್ ಮುಖ್ಯ ಎಂದು ನಿಮಗನ್ನಿಸುವುದಿಲ್ಲವೇ ?"

"ಹಾಗಲ್ಲ, ಆದರೆ..."

"ಸ್ವಲ್ಪ ಇರಿ...ಈಗ ಬೇರೊಂದು ಸಾಧ್ಯತೆಯಿದೆ. ಉಗ್ರರಾಷ್ಟ್ರವಾದೀ ಸಂಸ್ಥೆಗಳಲ್ಲಿ ಒಂದನ್ನು ಯಾಕೆ ಸೇರಬಾರದು. ಈ ಉಗ್ರವಾದಿ ಸಂಸ್ಥೆಯ ಸದಸ್ಯರೂ ಆಗಿರುವ ಗುಪ್ತದಳದವರನ್ನು ಉಪಯೋಗಿಸಿಕೊಂಡು ನಾವು ಸಾಲಿಡಾರಿಟಿಯನ್ನು ನೆಲಸಮ ಮಾಡಬಹುದು. ಅಮೇಲೆ ಗುಪ್ತದಳದ ಈ ತುಕಡಿಯನ್ನೂ – ಅವರ ಸಮಾಜವಿರೋಧಿ ಭಾವನೆಯನ್ನು ಬಹಿರಂಗಪಡಿಸುವುದರ ಮೂಲಕ – ಮುಗಿಸಿಬಿಡಬಹುದು. ತಿಳಿಯಿತೇ ?"

"ನೋಡಿ ಈ ಕತ್ತಲಲ್ಲಿ ನನಗೆ ಮೊಟ್ಟೆಯೂ ಕಾಣಿಸುತ್ತಿಲ್ಲ."

"ಆ ಮೊಟ್ಟೆಯನ್ನು ಮರೆಯಿರಿ. ನೀವೀಗ ಮಾಡಬೇಕಾದ ಮೊದಲ ಕೆಲಸವೆಂದರೆ, ಸಂತ ಮೇರಿಯ ಈಗರ್ಜಿಗೆ ಹೋಗಿ ಫಾದರ್ ಜ್ಬಿಗಿನೆನ್ ಡುಬಿನ್‌ಸ್ಕಿಯವರಿಂದ ಕ್ರೈಸ್ತ ಧರ್ಮದ ದೀಕ್ಷೆ ಸ್ವೀಕರಿಸುವುದು... ನೀವು ನಂತರ ಸೇರಬೇಕಾದ್ದು..."

"ಒಂದೇ ನಿಮಿಷ" ಆರೆನ್‌ಸನ್ ಮಧ್ಯೆ ಬಾಯಿ ಹಾಕಿದ. "ನನಗೆ ನನ್ನದೇ ಕೆಲ ಬೇಡಿಕೆಗಳಿವೆ. ನಾನು ಮೂರ್ಛೆ ಹೋಗದಿರುವ ಹಾಗೆ, ಮೊದಲಿಗೆ ಒಂದಿಷ್ಟು ಆಹಾರ ಬೇಕು. ವಿದ್ಯುತ್ ಸರಬರಾಜು ಬೇಕು. ನಾನು ಹೆಚ್ಚುಕಮ್ಮಿ ಮನುಷ್ಯನ ಹಾಗೆ ಜೀವಿಸಬೇಕು."

"ಸ್ವಾರ್ಥಿ – ಕೃತಜ್ಞತಾಹೀನ ಯೆಹೂದ್ಯ! ನೀನು ಎಲ್ಲಿದೀಯಾಂತ ತಿಳಿದಿದ್ದೀ? ಈಕ್ವೆಡಾರ್‌ನಲ್ಲಾ? ನಿನ್ನ ಕಾಲು ನಿನ್ನನ್ನು ಒಯ್ದಷ್ಟು ಬೇಗ ಸಂತ ಮೇರಿಯ ಈಗರ್ಜಿಗೆ ಓಡು. ಆ ಮೊಟ್ಟೆ ಇಲ್ಲಿಯೇ ಇರಲಿ."

"ಆದರೆ..."

"ಆರೆನ್‌ಸನ್, ಆದರೆ ಗೀದರೆ ಇಲ್ಲ – ಚರಿತ್ರೆಯ ಈ ಪ್ರಮುಖ ಘಟ್ಟದಲ್ಲಿ ನೀನು ಕಮ್ಯೂನಿಸ್ಟ್ ಪಾರ್ಟಿಯ ಸಿಟ್ಟಿಗೊಳಗಾಗುವುದು ಒಳ್ಳೆಯದಲ್ಲವೆಂದು ಈಗಲೇ ಹೇಳುತ್ತಿದ್ದೇನೆ."

ಆರೆನ್‌ಸನ್ ಚರಿತ್ರೆಯ ತರ್ಕಕ್ಕೆ ತಲೆಬಾಗಿ, ಇದಕ್ಕಿಂತ ಉತ್ತಮ ದಿನಗಳನ್ನು ಕಂಡಿದ್ದ ಓವರ್‌ಕೋಟನ್ನು ಧರಿಸಿದ.

ತನ್ನ ಎಂಭತ್ನಾಲ್ಕು ವರ್ಷದ ಜೀವನದಲ್ಲಿ ಅವನೆಂದೂ, ಕ್ಯಾಥಲಿಕ್ ಈಗರ್ಜಿಯೊಳಗೆ ಕಾಲಿಟ್ಟಿರಲಿಲ್ಲ. ಮಹಿಳೆಯರ ಶೌಚದಂತೆ, ಇದೂ ಬೇರಾರಿಗಾಗಿಯೋ ನಿರ್ಮಿಸಿದ್ದುದು ಎಂದು ಗಟ್ಟಿಯಾಗಿ ನಂಬಿದ್ದ.

ಕಟ್ಟೆಯೆದುರು ಜನರ ಸಾಲು ಇದ್ದದ್ದನ್ನು ಆರೆನ್‌ಸನ್ ಕಂಡ. ಸಾಲಿನ ಪ್ರತಿ ವ್ಯಕ್ತಿಯೂ ಪಾದರಿಯ ಮುಂದೆ ನಿಂತು ಬಾಯಿ ತೆರೆಯುತ್ತಿದ್ದ. ಪ್ರತಿ ಬಾಯಲ್ಲೂ ಪಾದರಿ ಏನಾದರೂ ಹಾಕುತ್ತಿದ್ದ. ಕ್ಯಾಥೊಲಿಕರು ಪಾಪಕ್ಷಮೆಗೆ ಉಪಯೋಗಿಸುತ್ತಿದ್ದ ವಿಧಾನ ಎಂದು ಎಲ್ಲೋ ಓದಿದ್ದು ಇದೇ ಇರಬೇಕು ಎಂದುಕೊಳ್ಳುತ್ತಾ ಸಾಲಿನಲ್ಲಿ ಸೇರಿದ.

ಜನ ಅವನನ್ನು ವಿಚಿತ್ರವಾಗಿ ನೋಡುತ್ತಿದ್ದರು. ಗೋಡೆಯ ಮೇಲಿದ್ದ ಅನೇಕ ಏಸುಕ್ರಿಸ್ತರೂ ಅವನ ಸಹಾಯಕ್ಕೆ ಬರಲಿಲ್ಲ. ಹಸಿವೆಯಿಂದಾಗಿ, ಅವನ ಕಾಲುಗಳಲ್ಲಿ ಬರೇ ಗಾಳಿ ತುಂಬಿಕೊಂಡಿದ್ದಂತೆನಿಸಿತು.

ಅವನ ಸರದಿ ಬಂದಾಗ ಈ ಪಾದರಿಯೇ ಫಾದರ್ ಡುಂಬಿನ್‌ಸ್ಕಿಯೇ ಎಂದು ಕೇಳೋಣವೆಂದು ಬಾಯ್ತೆರೆದ. ಮೊದಲ ಪದ ಹೊರಬರುವಷ್ಟರಲ್ಲಿಯೇ ಪಾದರಿ, ಬಾಯಲ್ಲಿ ಒಂದು ಸಣ್ಣ ವೇಫರ್ ಇರಿಸಿದ.

"ಕ್ಯಾಥೊಲಿಕ್ ರಿಲೀಫ್ ಎಂದರೆ ಇಷ್ಟೇ ಏನು?" ಆರೆನ್‌ಸನ್ ಕೇಳಿದ, "ನಾನು ಇಲ್ಲಿ ಸೇರಬೇಕಾದರೆ ವೇಫರ್‌ಗಿಂತ ಹೆಚ್ಚಿನದ್ದೇನಾದರೂ ಕೊಡಬೇಕು. ಬ್ರೆಡ್ಡು, ಮೊಟ್ಟೆ ಅಥವಾ ಇನ್ನೇನಾದರೂ..."

"ಸೇರುವುದೆಂದರೇನು?" ಪಕ್ಕದಲ್ಲಿದ್ದ ವ್ಯಕ್ತಿ ಕೇಳಿದ.

"ನಾನು ಯೆಹೂದ್ಯನೆಂಬ ಕಾರಣಕ್ಕಾಗಿ, ಕಮ್ಯೂನಿಸ್ಟರು ನನ್ನನ್ನು ಕ್ಯಾಥೊಲಿಕ್ ಪಂಥಕ್ಕೆ ಸೇರುವ ಆದೇಶ ನೀಡಿದ್ದಾರೆ."

"ಯೆಹೂದ್ಯ?"

"ಯೆಹೂದ್ಯ? ಒಬ್ಬ ಯೆಹೂದ್ಯ ಚರ್ಚಿನ ಪ್ರಸಾದ ಸ್ವೀಕರಿಸುತ್ತಿದ್ದಾನೆ!"

ಚರ್ಚಿನಲ್ಲಿ ಗಲಭೆ ಪ್ರಾರಂಭವಾಯಿತು. ಆದರೆ ಒಬ್ಬ ರೈತ ಹೆಣ್ಣು ಮಾತ್ರ ಬುದ್ಧಿಸ್ಥಿಮಿತದಲ್ಲಿಟ್ಟುಕೊಂಡಿದ್ದಳು. ತನ್ನ ಚೀಲದಿಂದ, ಮಣ್ಣು ಮುಚ್ಚಿದ್ದ ಬೀಟ್‌ರೂಟನ್ನು ಹೊರತೆಗೆದು ಆರೆನ್‌ಸನ್‌ನ ತಲೆಯತ್ತ ಬೀಸಿದಳು. ಅವಳ ಗುರಿ ನಿಖಿತವಾಗಿತ್ತು. ಅವನು ನೆಲಕ್ಕುರುಳಿದ.

ಕೆಲವೇ ನಿಮಿಷದಲ್ಲಿ ಪಾರ್ಟಿಗೆ ಸೇರಿದ ವಿಶೇಷ ಆಂಬ್ಯುಲೆನ್ಸ್ ಈಗರ್ಜಿಯ ಮುಂದೆ ಬಂತು. ರಸ್ತೆಯ ಇಕ್ಕೆಲಗಳಲ್ಲೂ ಗುಪ್ತದಳದವರು ದಾರಿಮಾಡಿಕೊಟ್ಟರೆ, ಆಸ್ಪತ್ರೆಯ ರಸ್ತೆಯನ್ನು ಅಡ್ಡಹಾಕಿ ಮುಚ್ಚುವುದರಲ್ಲಿ ಸೈನ್ಯ ನಿರತವಾಗಿತ್ತು. ಒಂದು ಸಣ್ಣ ಗುಂಪು ಬಂದು ಆರೆನ್‌ಸನ್‌ನನ್ನು ನೆಲದಿಂದ ಎತ್ತಿ ವಿಶೇಷ ಜಾಗರೂಕತೆಯಿಂದ ಆಂಬ್ಯುಲೆನ್ಸಿನತ್ತ ಒಯ್ದಿತು.

"ಒಂದು ಹೊಟ್ಟೆ...ವಿದ್ಯುತ್ತು...ಗೌರವಾನ್ವಿತ ಬದುಕು..." ಮೂರು ಪತ್ರಿಕೆಗಳ ವರದಿಗಾರರು ಅವನು ಹೇಳಿದ್ದನ್ನೆಲ್ಲ ಬರೆದುಕೊಳ್ಳುತ್ತಿರಲು ಆರೆನ್‌ಸನ್ ಗೊಣಗಿದ.

"ನೋಡಿದಿರಾ ?" ಗುಂಪಿನಲ್ಲಿದ್ದ ಒಬ್ಬ, ಮತ್ತೊಬ್ಬನನ್ನು ನೋಡಿ ಬುಸುಗುಟ್ಟಿದ – "ಯಹೂದ್ಯರಿಗೆ ಯಾವತ್ತಿಗೂ ವಿಶೇಷ ಸವಲತ್ತುಗಳೇ."

# ಉಪನ್ಯಾಸ

ಮೂಲ : ಐಸ್ಯಾಕ್ ಭಾಷೆವಿಸ್ ಸಿಂಗರ್
ಅನು : ನರಹಳ್ಳಿ ಬಾಲಸುಬ್ರಹ್ಮಣ್ಯ

ಉಪನ್ಯಾಸವೊಂದನ್ನು ನೀಡಲು ನಾನು ಮಾಂಟ್ರಿಯಲ್‌ಗೆ ಹೊರಟಿದ್ದೆ. ಅದು ಚಳಿಗಾಲದ ನಡುಗಾಲವಾಗಿದ್ದು ಅಲ್ಲಿ ನ್ಯೂಯಾರ್ಕ್‌ಗಿಂತ ಹತ್ತು ಡಿಗ್ರಿ ಕಡಿಮೆ ಉಷ್ಣಾಂಶವಿದೆಯೆಂದು ನನಗೆ ಎಚ್ಚರಿಸಲಾಗಿತ್ತು. ಅತಿಯಾದ ಹಿಮದಿಂದಾಗಿ ರೈಲು ಗಳನ್ನು ನಿಲ್ಲಿಸಲಾಗಿದೆಯೆಂದು ಪತ್ರಿಕೆಗಳು ವರದಿ ಮಾಡಿದ್ದುವು. ಅಲ್ಲದೆ ಮೀನು ಕೇಂದ್ರಗಳೆನಿಸಿಕೊಂಡಿದ್ದ ಹಳ್ಳಿಗಳಿಗೆ ಸಂಪರ್ಕ ಕಡಿದುಬಿದ್ದು ಅವರಿಗೆ ಆಹಾರ ಹಾಗೂ ಅಗತ್ಯ ವಸ್ತುಗಳನ್ನು ವಿಮಾನದ ಮೂಲಕ ಸರಬರಾಜು ಮಾಡಲಾಗುತ್ತಿತ್ತು.

ನಾನು ಉತ್ತರಧ್ರುವದ ಶೋಧಯಾನಕ್ಕೆಂಬಂತೆ ಪ್ರಯಾಣಕ್ಕೆ ಸಿದ್ಧನಾಗಿದ್ದೆ. ಎರಡು ಸ್ವೆಟರ್‌ಗಳ ಮೇಲೆ ಕೋಟನ್ನು ತೊಟ್ಟು ಬೆಚ್ಚನೆಯ ಉಣ್ಣೆ ಒಳ ಉಡುಪು ಗಳನ್ನು ಧರಿಸಿ, ಅಕಸ್ಮಾತ್ ರೈಲು ಮಧ್ಯೆ ನಿಂತುಬಿಟ್ಟರೆ ಇರಲಿ ಎಂದು ಅಗತ್ಯ ಆಹಾರ ಪದಾರ್ಥಗಳನ್ನೂ ತೆಗೆದುಕೊಂಡಿದ್ದೆ. ಜೇಬಿನಲ್ಲಿ ನಾನು ಓದಬೇಕಾಗಿದ್ದ ಉಪನ್ಯಾಸದ ಪ್ರತಿ–ಯಿಡ್ಡಿಷ್ ಭಾಷೆಯ ಬಗೆಗಿನ ಒಂದು ಆಶಾದಾಯಕ ಚಿತ್ರ– ಭದ್ರವಾಗಿತ್ತು.

ಪ್ರಯಾಣದ ಆರಂಭದಲ್ಲಿ ಎಲ್ಲವೂ ಸುಖಕರವಾಗಿತ್ತು. ಎಂದಿನಂತೆ ನಾನು ರೈಲು ಹೊರಡಲು ಇನ್ನೂ ಒಂದು ಗಂಟೆಯಿರುವಾಗಲೇ ರೈಲು ನಿಲ್ದಾಣಕ್ಕೆ ಬಂದಿದ್ದೆ. ಅಲ್ಲಿ ಪೋರ್ಟರ್‌ಗಳಿರಲಿಲ್ಲ. ರೈಲು ನಿಲ್ದಾಣ ಜನಗಳಿಂದ ಗಿಜಿಗುಟ್ಟು ತ್ತಿತ್ತು. ನಾನು ಅವರನ್ನೆಲ್ಲಾ ಗಮನಿಸುತ್ತಾ ಇವರು ಯಾರಿರಬಹುದು, ಇವರು ಎಲ್ಲಿಗೆ ಹೊರಟಿರಬಹುದು, ಏಕೆ ಹೊರಟಿರಬಹುದು ಇತ್ಯಾದಿ ಊಹಿಸಲು ಯತ್ನಿಸುತ್ತಿದ್ದೆ.

ಅಲ್ಲಿ ಯಾರೂ ನನ್ನಷ್ಟು ಬೆಚ್ಚನೆಯ ಉಡುಪು ಧರಿಸಿರಲಿಲ್ಲ. ಕೆಲವರಂತೂ ಬೇಸಿಗೆಯ ಆರಂಭದಲ್ಲಿ ತೊಡುವಂತಹ ಉಡುಪುಗಳನ್ನು ತೊಟ್ಟಿದ್ದರು. ನೈಲಾನ್ ಕಾಲುಚೀಲ ತೊಟ್ಟು ಮಿಡಿ ಧರಿಸಿ ತುಪ್ಪಳದ ಟೋಪಿ ಹಾಕಿಕೊಂಡಿದ್ದ ಹೆಂಗಸರು ತುಂಬಾ ಚೆಲುವಾಗಿ ಕಾಣಿಸುತ್ತಿದ್ದರು. ಅವರು ಸೊಗಸಾದ ವ್ಯಾನಿಟಿಬ್ಯಾಗ್ ಜೊತೆಗೆ

ಸಚಿತ್ರ ಪತ್ರಿಕೆಗಳನ್ನೂ ಹಿಡಿದುಕೊಂಡಿದ್ದರು. ಸಿಗರೇಟ್ ಸೇದುತ್ತಾ ಆರಾಮವಾಗಿ ಹರಟುತ್ತಿದ್ದ ಅವರನ್ನು ನೋಡಿ ನನಗೆ ಆಶ್ಚರ್ಯವಾಯಿತು. ಜಗತ್ತಿನ ಸಮಸ್ಯೆಗಳ ಬಗ್ಗೆ ಅವರಿಗೆ ಅರಿವೇ ಇದ್ದಂತಿರಲಿಲ್ಲ. ಯಾವುದನ್ನೂ ಅವರು ತಲೆಗೆ ಹಚ್ಚಿಕೊಂಡಿರಲಿಲ್ಲ. ಸಾವು, ರೋಗರುಜಿನ, ಯುದ್ಧ, ಬಡತನ, ದ್ರೋಹ, ವಂಚನೆ ಮೊದಲಾದವುಗಳಾಗಲೀ ಅಥವಾ ರೈಲು ಸಿಗಲಿಲ್ಲ, ಹಣ ಕಳೆದುಹೋಯಿತು, ಟಿಕೆಟ್ ಹಾಳಾಯಿತು ಎಂಬ ಸಣ್ಣ ಪುಟ್ಟ ತೊಂದರೆಗಳಾಗಲೀ–ಯಾವುದೂ ಅವರನ್ನು ಚಿಂತೆಗೀಡು ಮಾಡಿದಂತೆ ಕಾಣುತ್ತಿರಲಿಲ್ಲ. ರಕ್ತವರ್ಣದ ಕೆಂಪು ಉಗುರುಗಳ ಅವರು ಕಾಲೇಜು ಕನ್ಯೆಯಂತೆ ಸರಸಸಲ್ಲಾಪದಲ್ಲಿದ್ದರು. ಅಂದು ನಿಲ್ದಾಣದ ಹವೆ ತೀರಾ ತಣ್ಣಗಿತ್ತು. ಆದರೆ ಅದರ ಪರಿಣಾಮ ನನ್ನನ್ನು ಬಿಟ್ಟರೆ ಬೇರೆ ಯಾರಿಗೂ ಆದಂತಿರಲಿಲ್ಲ. ಹಿಟ್ಲರ್ ಒಬ್ಬ ಇದ್ದನೆಂದು ಇವರಿಗೆ ತಿಳಿದಿದೆಯೆ ? ಸ್ಟಾಲಿನ್‌ನ ಕಗ್ಗೊಲೆಯ ಯಂತ್ರದ ಬಗ್ಗೆ ಇವರು ಕೇಳಿದ್ದಾರೆಯೆ ? ಗೊತ್ತಿರಲೂಬಹುದು. ಆದರೆ ತಮಗೆ ಅದರ ಬಿಸಿ ತಟ್ಟದಿದ್ದಾಗ ಅವರು ಆ ಬಗ್ಗೆ ಏಕೆ ಚಿಂತಿಸಬೇಕು.

ನಾನು ಹಾಕಿದ್ದ ಉಲ್ಲನ್ ಒಳಉಡುಪು ಚುಚ್ಚತೊಡಗಿತು. ಸ್ವಲ್ಪ ಸೆಕೆಯೂ ಅನುಭವವಾಗತೊಡಗಿತು. ಆದರೆ ಆಗಿಂದಾಗ್ಗೆ ತಣ್ಣನೆಯ ಚಳಿಗಾಳಿ ಇಡೀ ದೇಹವನ್ನು ಆವರಿಸುತ್ತಿತ್ತು. ಯಿದ್ದಿಷ್ ಭಾಷೆಗೆ ಉತ್ತಮ ಭವಿಷ್ಯವಿದೆಯೆಂದು ನಿರೀಕ್ಷಿಸಿದ್ದ ನನ್ನ ಉಪನ್ಯಾಸದ ಬಗ್ಗೆ ಯೋಚಿಸತೊಡಗಿದೆ. ಇದ್ದಕ್ಕಿದ್ದಂತೆ ನಾನು ಇಷ್ಟೊಂದು ಆಶಾವಾದಿ ಹೇಗಾದೆ ? ನನ ಕಣ್ಣೆದುರಿಗೇ ಯಿದ್ದಿಷ್ ನಾಶವಾಗುತ್ತಿಲ್ಲವೇ ?

ಸಮಯಕ್ಕೆ ಸರಿಯಾಗಿ ಬರುವ ಹಾಗೂ ಸುಲಭವಾಗಿ ಹತ್ತಲು ಸಾಧ್ಯವಾಗುವಂತಹ ಅಮೇರಿಕಾದ ರೈಲುಗಳು ನನಗೆ ಒಂದು ರೀತಿ ಪವಾಡವಿದ್ದಂತೆ. ಪೋಲೆಂಡಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ಜ್ಯೂಗಳನ್ನು ರೈಲಿಗೆ ಹತ್ತಿಸುತ್ತಿಲ್ಲದಿದ್ದುದು- ನಾನು ಮೆಟ್ಟಿಲ ಬಳಿ ನಿಂತು ತೂಗಾಡುತ್ತಾ ಪ್ರಯಾಣ ಮಾಡುತ್ತಿದ್ದುದೂ ನೆನಪಾಯಿತು. ಅಬ್ಬಾ ! ಆ ರೈಲು ಮುಷ್ಕರಗಳು ! ಅನೇಕ ಗಂಟೆಗಳ ಕಾಲ ರೈಲುಗಳು ಮಧ್ಯ ದಾರಿಯಲ್ಲೇ ನಿಂತುಬಿಡುತ್ತಿದ್ದುವು. ಆ ಜನಜಾತ್ರೆಯಲ್ಲಿ ಪರಸ್ಪರ ತಳ್ಳುತ್ತಾ ಶೌಚಗೃಹದ ಬಳಿ ಹೋಗುವುದೇ ಕಷ್ಟವಾಗುತ್ತಿತ್ತು.

ಆದರೆ ಇಲ್ಲಿ ಈಗ ನಾನು ಕಿಟಕಿಯ ಪಕ್ಕ ಮೆತ್ತನೆಯ ಸೀಟಿನಲ್ಲಿ ಆರಾಮವಾಗಿ ಕುಳಿತಿದ್ದೇನೆ. ಚಳಿಯೆಂದು ಕಂಪಾರ್ಟ್‌ಮೆಂಟ್ ಪೂರ್ತಿ ಬೆಚ್ಚನೆಯ ಗಾಳಿ ಹಾಯಿಸಲಾಗುತ್ತಿತ್ತು. ಗಂಟುಮೂಟೆಗಳಾಗಲೀ, ಪೆಟ್ಟಿಗೆಗಳಾಗಲೀ, ಕುರಿತುಪ್ಪಳ ತೊಟ್ಟ ಜನರಾಗಲೀ, ಪೋಲೀಸರಾಗಲೀ ಡಬ್ಬಿಯಲ್ಲಿರಲಿಲ್ಲ. ಬ್ರೆಡ್, ಮಾಂಸದ ತುಂಡು ಇತ್ಯಾದಿ ಯಾರೂತಿನ್ನುತ್ತಿರಲಿಲ್ಲ. ಬಾಟಲಿನಿಂದ ವೋಡ್ಕಾ ಸಹ ಕುಡಿಯುತ್ತಿರಲಿಲ್ಲ. ಜ್ಯೂಗಳನ್ನು ರಾಜದ್ರೋಹದ ಕಾರಣ ನೀಡಿ ಯಾರೂ ಬೈಯುತ್ತಿರಲಿಲ್ಲ. ಹಾಗೆ ನೋಡಿದರೆ ರಾಜಕೀಯವನ್ನೇ ಯಾರೂ ಚರ್ಚಿಸುತ್ತಿರಲಿಲ್ಲ. ರೈಲು ಹೊರಡುತ್ತಿದ್ದಂತೆ ಬಿಳಿಯ

ಬಟ್ಟೆ ಧರಿಸಿದ್ದ ಭಾರೀ ನೀಗ್ರೋ ವ್ಯಕ್ತಿಯೊಬ್ಬ ಬಂದು ಊಟ ಸಿದ್ಧವಿದೆಯೆಂದು ಪ್ರಕಟಿಸಿದ. ರೈಲು ಹೆಚ್ಚು ಶಬ್ದಮಾಡದೆ ಸಲೀಸಾಗಿ ವೇಗವಾಗಿ ಹೋಗುತ್ತಿತ್ತು. ಹೊರಗಡೆ ಬಯಲಿನಲ್ಲಿ ಹಿಮ ಬಿದ್ದಿದ್ದು ಬಿಸಿಲು ಬಂದಾಗ ಅದು ಹೊಳೆಯುತ್ತಿತ್ತು. ಚಳಿಗಾಲದಲ್ಲಿ ಇಲ್ಲಿ ತಂಗಿದ್ದ ಹಕ್ಕಿಗಳು ಹರಿಯುತ್ತಿದ್ದ ಮಂಜುಗಡ್ಡೆಯ ನೀರಿನ ಮೇಲೆ ಹಾಯಾಗಿ ಹಾರಿಹೋಗುತ್ತಿದ್ದುವು.

ನಾವು ಮುಂದೆ ಹೋದಂತೆ ಇನ್ನೂ ಹೆಚ್ಚು ಚಳಿಯಾಗತೊಡಗಿತು. ಕೆಲವು ಮೈಲಿಗಳಿಗೊಮ್ಮೆ ಹವೆ ಬದಲಾಗುತ್ತಿತ್ತು. ಈಗ ನಾವು ದಟ್ಟ ಮಂಜಿನ ನಡುವೆ ಹೋಗುತ್ತಿದ್ದೇವೆ ಅಂದುಕೊಳ್ಳುತ್ತಿರುವಾಗಲೇ, ವಾತಾವರಣ ತಿಳಿಯಾಗಿ ಬೆಳ್ಳಿ ಮೋಡದ ನಡುವೆ ಸೂರ್ಯ ಕಾಣಿಸಿಕೊಳ್ಳುತ್ತಿದ್ದ.

ಅಸಾಧ್ಯ ಮಂಜು ಬೀಳಲಾರಂಭಿಸಿತು. ಇದ್ದಕ್ಕಿದ್ದಂತೆ ಹಗಲು ಜಾರಿದಂತಾಗಿ ಕತ್ತಲೆ ಆವರಿಸಿತು. ಎಕ್ಸ್‌ಪ್ರೆಸ್ ರೈಲು ತನ್ನ ವೇಗವನ್ನು ಕಡಿಮೆ ಮಾಡಿ ಪ್ರಯಾಣ ವನ್ನು ತಾನೂ ಅನುಭವಿಸುತ್ತಿದೆಯೋ ಎಂಬಂತೆ ನಿಧಾನವಾಗಿ ಎಚ್ಚರಿಕೆಯಿಂದ ಚಲಿಸುತ್ತಿತ್ತು. ರೈಲಿನಲ್ಲಿದ್ದ ಬಿಸಿಗಾಳಿಯ ಯಂತ್ರ ಬಹುಶಃ ಕೆಟ್ಟುಹೋಯಿತೇನೋ! ಚಳಿ ಜಾಸ್ತಿಯಾಗಿ ನಾನು ಕೋಟು ಹಾಕಿಕೊಳ್ಳಬೇಕಾಯಿತು. ಉಳಿದ ಪ್ರಯಾಣಿಕರು ಚಳಿಯಾದರೂ ಅದನ್ನು ತೋರಿಸಿಕೊಳ್ಳದೆ, ಏನೂ ಆಗದಂತೆ ನಟಿಸಿ ಸ್ವಲ್ಪ ಹೊತ್ತು ಸುಮ್ಮನಿದ್ದರು. ಆದರೆ ಎಷ್ಟು ಹೊತ್ತು ಹಾಗಿರಲು ಸಾಧ್ಯ? ಇಳಿಬಿಟ್ಟ ಕಾಲು ಗಳನ್ನು ಮೇಲೆಳೆದುಕೊಂಡು ಸೂಕ್ಷ್ಮವಾಗಿ ನಡುಗಲು ತೊಡಗಿ ಬ್ಯಾಗುಗಳಲ್ಲಿದ್ದ ಮಫ್ಲರ್, ಸ್ವೆಟರ್ ಕೋಟುಗಳನ್ನು ಹುಡುಕಲಾರಂಭಿಸಿದರು. ಕಾಲರ್‌ನ ಗುಂಡಿಗಳನ್ನು ಹಾಕಿ ಮೇಲೆ ಮಡಿಸಿದ್ದ ಶರಟಿನ ತೋಳುಗಳನ್ನು ಬಿಡಿಸಿದರು. ಅಲಂಕಾರ ಮಾಡಿ ಕೊಂಡಿದ್ದ ಹೆಂಗಸರ ಮುಖ ಹೆಪ್ಪುಗಟ್ಟಿ ಮಧ್ಯೆ ಮಧ್ಯೆ ಬಿರುಕುಗಳು ಕಾಣಿಸಿಕೊಂಡವು.

ಅಮೇರಿಕಾದ ಕನಸಿನಂತಹ ಲೋಕ ಕರಗಿ ಪೋಲೆಂಡಿನ ಕಟುವಾಸ್ತವ ಕ್ರಮೇಣ ಕಾಣಿಸಿಕೊಳ್ಳಲಾರಂಭಿಸಿತು. ಕೆಲವರು ಬಾಟಲ್‌ನಿಂದ ವೋಡ್ಕಾ ಕುಡಿಯತೊಡ ಗಿದರು. ಮತ್ತೆ ಕೆಲವರು ಬ್ರೆಡ್, ಮಾಂಸದ ತುಂಡು ಇತ್ಯಾದಿ ತಿನ್ನತೊಡಗಿದರು. ಶೌಚಗೃಹದ ಬಳಿ ಜನಸಂದಣಿ ಜಾಸ್ತಿಯಾಯಿತು. ಕಂಪಾರ್ಟ್‌ಮೆಂಟಿನ ನೆಲ ಪೂರ್ತಿ ಕೆಸರಾಯಿತು. ಅದು ಹೇಗೆ ಅಷ್ಟೊಂದು ಹೊಲಸಾಯಿತೆಂಬುದನ್ನು ಅರ್ಥಮಾಡಿ ಕೊಳ್ಳುವುದೇ ನನಗೆ ಕಷ್ಟವಾಯಿತು.

ಇದ್ದಕ್ಕಿದ್ದಂತೆ ರೈಲು ನಿಂತಿತು. ಹೊರಗೆ ನೋಡಿದೆ. ಅಷ್ಟೊಂದು ನಿಬಿಡವಲ್ಲದ ಅರಣ್ಯ ಕಾಣಿಸಿತು. ಮಂಜಿನ ನಡುವೆ ಮರಗಳು ಕೇವಲ ರೆಂಬೆ ಕೊಂಬೆಗಳಾಗಿ ಕಾಣಿಸುತ್ತಿದ್ದುವು. ಸೂರ್ಯ ಮುಳುಗಿದ್ದರೂ ಪಶ್ಚಿಮದಲ್ಲಿ ನೇರಿಲೆ ಬಣ್ಣದ ಬೆಳಕಿನ ಕಿರಣಗಳು ಹೊಳೆಯುತ್ತಿದ್ದುವು. ನೆಲದ ಮೇಲಿದ್ದ ಮಂಜು ಮೊದಲಿನಂತೆ ಬೆಳ್ಳ ಗಿರದೆ, ತಿಳಿಕೆಂಪು ಬಣ್ಣಕ್ಕೆ ತಿರುಗಿತ್ತು. ಕಾಗೆಗಳು ಅದರ ಮೇಲೆ ನಡೆಯುತ್ತಾ, ಆಗಾಗ್ಗೆ ರೆಕ್ಕೆಬಡಿದು ಹಾರುತ್ತಿದ್ದುವು. ಅವುಗಳ ಕೂಗು ನನಗೆ ಸ್ಪಷ್ಟವಾಗಿ ಕೇಳಿಸು

ತ್ತಿತ್ತು. ಆಕಾಶದಲ್ಲಿ ಮಂಜು ಬೀಳಿಸುವವನು ಅತ್ಯಂತ ಸೋಮಾರಿಯಾಗಿದ್ದು ಅದನ್ನು ನಿರಂತರವಾಗಿ ಕೆಳಗೆ ಬೀಳಿಸಲು ಬೇಸರವಾಗಿ ಒಟ್ಟಿಗೊಟ್ಟಿಗೇ ಕೆಳಕ್ಕೆ ತಳ್ಳು ತ್ತಿರುವನೋ ಎಂಬಂತೆ ಮಂಜು ಗುಪ್ಪೆ ಗುಪ್ಪೆಯಾಗಿ ಬಿದ್ದಿತ್ತು. ಪ್ರಯಾಣಿಕರು ಮಬ್ಬಿಯಿಂದ ಮಬ್ಬಿಗೆ ಓಡಾಡುತ್ತಾ ಬಾಗಿಲುಗಳನ್ನು ಹಾಗೇ ತೆರೆದಿಟ್ಟು ಹೋಗು ತ್ತಿದ್ದರು. ರೈಲು ಸಿಬ್ಬಂದಿ ಅತ್ತಿಂದಿತ್ತ ಆತುರಾತುರವಾಗಿ ಓಡಾಡುತ್ತಿದ್ದರು. ಅವರನ್ನು ಏನಾದರೂ ಕೇಳಿದರೆ ಸ್ಪಷ್ಟವಾಗಿ ಏನೂ ಹೇಳದೆ ಗೊಣಗಿ ಹೋಗಿಬಿಡು ತ್ತಿದ್ದರು.

ನಾವು ಕೆನಡಾ ಸರಹದ್ದಿನ ಸಮೀಪದಲ್ಲಿದ್ದೆವು. ಅಮೇರಿಕಾದ ಅಂಚು ಅದು. ಪ್ರಯಾಣಿಕರು ತಮ್ಮ ಲಗ್ಗೇಜುಗಳನ್ನು ತೆಗೆದುಕೊಳ್ಳುತ್ತಿದ್ದರು. ಅವರು ಅದನ್ನು ಕಸ್ಟಮ್ಸ್ ಅಧಿಕಾರಿಗಳಿಗೆ ತೋರಿಸಬೇಕಿತ್ತೆಂದು ಕಾಣುತ್ತದೆ. ತಮ್ಮ ಪೌರಸೂಚಕ ಪತ್ರವನ್ನು ತೆಗೆದಿರಿಸಿಕೊಂಡು, ಅದರಲ್ಲಿರುವ ಫೋಟೋವನ್ನು ದಿಟ್ಟಿಸಿ ನೋಡುತ್ತಿದ್ದ ಅಮೆರಿಕನ್ನರು ಪೌರಪತ್ರ ನಿಜವಾದುದೆಂದು ತಮ್ಮಷ್ಟೇ ತಾವು ನಂಬಿಸಿಕೊಳ್ಳುತ್ತಿರು ವಂತೆ ಕಾಣಿಸುತ್ತಿದ್ದರು.

ಒಂದಿಬ್ಬರು ಪ್ರಯಾಣಿಕರು ರೈಲಿನಿಂದ ಇಳಿಯಲು ಪ್ರಯತ್ನಿಸಿದರು. ಆದರೆ ಹಿಮ ಅವರ ಮೊಣಕಾಲಿನವರೆಗೂ ಬರುತ್ತಿದ್ದು ಅವರ ಕಾಲುಗಳು ಹೂತು ಹೋದಂತಾದಾಗ ತಕ್ಷಣ ಅವರು ಮತ್ತೆ ರೈಲಿಗೆ ಹಿಂತಿರುಗಿದರು. ಮಬ್ಬು ಬೆಳಕು ಮರೆಯಾಗಿ ಕತ್ತಲು ಆವರಿಸಿತು.

ವ್ಯಕ್ತಿಗಳು ಪರಸ್ಪರ ಪರಿಚಯ ಮಾಡಿಕೊಳ್ಳಲು ಹವೆಯನ್ನು ಒಂದು ಸಾಧನ ವನ್ನಾಗಿ ಬಳಸಿಕೊಳ್ಳುತ್ತಿದ್ದುದನ್ನು ನಾನು ಗಮನಿಸಿದೆ. ಹೆಂಗಸರು ಮಾತಿಗೆ ತೊಡಗಿ ಇದ್ದಕ್ಕಿದ್ದಂತೆ ಬಹುಬೇಗ ಆತ್ಮೀಯರಾಗಿಬಿಟ್ಟರು. ಗಂಡಸರು ಗುಂಪು ಗುಂಪಾಗಿ ಚರ್ಚಿಸುತ್ತಿದ್ದರು. ಪ್ರತಿಯೊಬ್ಬನೂ ಒಂದೊಂದು ಸಂಗತಿ ಹೇಳುತ್ತಿದ್ದನು. ಅವಕಾಶ ಸಿಕ್ಕಾಗ ಒಬ್ಬರು ಮತ್ತೊಬ್ಬರಿಗೆ ಬುದ್ಧಿವಾದ ಹೇಳಲು ಹಾತೊರೆಯುತ್ತಿದ್ದರು. ನನ್ನತ್ತ ಯಾರೂ ಗಮನಿಸಲಿಲ್ಲ. ನನ್ನ ನಾಚಿಕೆ ಸ್ವಭಾವ, ಏಕಾಂತಪ್ರಿಯತೆ ಹಾಗೂ ಪರಕೀಯ ಭಾವನೆಯಿಂದಾಗಿ ನಾನು ಒಬ್ಬನೇ ಕುಳಿತಿದ್ದೆ. ನಾನು ಪುಸ್ತಕ ಓದಲು ಆರಂಭಿಸಿದೆ. ಅಂತಹ ಸಂದರ್ಭದಲ್ಲಿ ಗಂಭೀರವಾಗಿ ಕುಳಿತು ಪುಸ್ತಕ ಓದುವ ನನ್ನ ರೀತಿ ಉಳಿದ ಪ್ರಯಾಣಿಕರಿಗೆ ಅಸಹನೆ ಉಂಟುಮಾಡಿತು. ಮಾತ್ರವಲ್ಲ, ಅವರನ್ನು ಒಂದು ರೀತಿ ಹೀಯಾಳಿಸಿದಂತೆಯೂ ಇತ್ತು. ಸಮಾಜದಿಂದ ಇಡಿಯಾಗಿ ನನ್ನನ್ನು ನಾನು ಹೊರತುಪಡಿಸಿಕೊಂಡಿದ್ದೆ. ಎಲ್ಲ ಮುಖಗಳೂ ನನ್ನತ್ತ ದಿಟ್ಟಿಸಿ ಹೇಳುತ್ತಿದ್ದವು : 'ನಿನಗೆ ನಾವು ಹೇಗೆ ಬೇಡವೋ ಹಾಗೆಯೇ ನೀನೂ ನಮಗೆ ಬೇಡ, ಆದರೆ ತಿಳಿದುಕೋ, ಯಾವಾಗಲಾದರೂ ನೀನು ನಮ್ಮತ್ತ ಬರಲೇಬೇಕು, ಆದರೆ ನಾವು ನಿನ್ನತ್ತ ಬರುವ ಅಗತ್ಯವಿಲ್ಲ.'

ನಾನು ನನ್ನ ಬಹು ಭಾರವಾಗಿದ್ದ ಬ್ಯಾಗನ್ನು ತೆರೆದು, ಫ್ರೆಂಚ್ ಬ್ರಾಂದಿಯನ್ನು ತೆಗೆದು ನಿಧಾನ ಕುಡಿಯತೊಡಗಿದೆ. ಕಿಟಕಿಯ ತಣ್ಣನೆ ಬಾಗಿಲ ಮೇಲೆ ತಲೆಯಿಟ್ಟು ಹೊರಗೆ ನೋಡಲು ಪ್ರಯತ್ನಿಸಿದೆ. ಗಾಜಿನ ಆ ಬಾಗಿಲಿನಲ್ಲಿ ನನಗೆ ಕಾಣಿಸುತ್ತಿದ್ದುದು ಹೊರನೋಟವಲ್ಲ, ಒಳಗಿನ ಪ್ರತಿಬಿಂಬ. ಹೊರ ಪ್ರಪಂಚ ಮಾಯವಾದಂತೆ ಅನ್ನಿಸುತ್ತಿತ್ತು. ಬಿಷಪ್ ಬರ್ಕ್‌ಲಿಯ ತತ್ವಜ್ಞಾನ ಉಳಿದೆಲ್ಲವನ್ನೂ ಮೀರಿಸಿ ಗೆದ್ದಂತಿತ್ತು. ದೇವರ ಇಚ್ಛೆಯಂತೆ ನಿಂತ ರೈಲು ಅವನ ಇಚ್ಛೆಯಂತೆಯೇ ಹೊರಟು ಗುರಿ ತಲುಪುವುದನ್ನು ನಿಧಾನವಾಗಿ ತಾಳ್ಮೆಯಿಂದ ಕಾಯುವುದೊಂದೇ ಆಗ ನಮಗೆ ಉಳಿದ ಏಕೈಕ ಮಾರ್ಗವಾಗಿತ್ತು.

ನನ್ನ ಉಪನ್ಯಾಸದ ಗತಿ ! ನಾನು ಮಧ್ಯರಾತ್ರಿಯಲ್ಲಿ ಹೋಗಿ ತಲುಪಿದರೆ ಅಲ್ಲಿ ನನ್ನನ್ನು ಸ್ವಾಗತಿಸಲೂ ಬಹುಶಃ ಯಾರೂ ಇರಲಾರರು. ನಾನು ಇಳಿದುಕೊಳ್ಳಲು ಹೋಟೆಲೊಂದನ್ನು ಹುಡುಕಬೇಕಾಗಬಹುದು. ಅಮುಂಡ್ಸನ್ ದಕ್ಷಿಣ ಧ್ರುವವನ್ನು ಕಂಡುಹಿಡಿದ ಮೇಲೆ, ಹಿಮಾವೃತವಾದ ಅಲ್ಲಿಗೆ ಹೋದ ಕ್ಯಾಪ್ಟನ್ ಸ್ಕಾಟ್ ಇದಕ್ಕಿಂತ ಉತ್ತಮ ಸ್ಥಿತಿಯಲ್ಲಿದ್ದನೇ ? ಫ್ರೆಂಚ್ ಬ್ರಾಂದಿ ನನ್ನನ್ನು ಕೊಂಚ ಬೆಚ್ಚಗಾಗಿಸಿತು. ಕುಡಿದ ಮತ್ತು ತಲೆಗೇರಿತು. ಆದರೆ ಅದೇ ಕ್ಷಣದಲ್ಲಿ ನಾನು ಎಚ್ಚರವಾಗಿರಲೂ ಪ್ರಯತ್ನಿಸುತ್ತ ಕಾಲ ನೂಕುತ್ತಿದ್ದೆ. ಇದ್ದಕ್ಕಿದ್ದಂತೆ ಎಲ್ಲವೂ ಅಸ್ಪಷ್ಟವಾಗತೊಡಗಿತು. ಮಾತುಗಳು ಕೇಳಿಸುತ್ತಿತ್ತು, ಆದರೆ ಅರ್ಥವಾಗುತ್ತಿರಲಿಲ್ಲ. ವಿಚಿತ್ರಾನುಭೂತಿಯಲ್ಲಿ ಅದ್ದಿಹೋದ ಅನುಭವ. ನನ್ನ ಪಾಲಿಗೆ ಈ ರೈಲು ಇಲ್ಲಿಯೇ ಮೂರು ಹಗಲು ಮೂರು ರಾತ್ರಿ ನಿಂತುಹೋದರೂ ಭಯವಿರಲಿಲ್ಲ. ನನ್ನ ಬ್ಯಾಗಿನಲ್ಲಿ ಸಾಕಷ್ಟು ಆಹಾರವಿದ್ದಿತು. ಹಸಿವಿನಿಂದ ಸಾಯುವ ಸಾಧ್ಯತೆಯಿರಲಿಲ್ಲ. ಅನೇಕ ಆಲೋಚನೆಗಳು ನನ್ನ ಮನಸ್ಸಿನಲ್ಲಿ ಹಾದುಹೋದವು. ನನ್ನೊಳಗಿನ ಯಾವುದೋ ದನಿ ಕನಸಿನಲ್ಲೆಂಬಂತೆ ಅನೇಕ ಸಂಗತಿಗಳನ್ನು ಪಿಸುಗುಡುತ್ತಿತ್ತು.

ಡೀಸೆಲ್ ಎಂಜಿನ್ ಕಷ್ಟಪಟ್ಟು ಮುಂದೆ ಹೊರಟಿತು. ದೈತ್ಯಾಕಾರದ ಎತ್ತಿನಂತೆ, ಪುರಾಣದ ಬಸವನಂತೆ ಹೊರಟ ರೈಲು ಅನೇಕ ರೀತಿಯ ಸದ್ದು ಮಾಡುತ್ತಿತ್ತು. ಕೆಲವು ಪ್ರಯಾಣಿಕರು ರೈಲಿನಲ್ಲಿಯೇ ಇದ್ದ ಬಾರ್ ಅಥವಾ ರೆಸ್ಟೊರೆಂಟ್‌ಗೆ ಹೋದರು. ಅತ್ಯಂತ ಸೋಮಾರಿಯಾದ ನಾನು ಅಲ್ಲಿಯೇ ಕುಳಿತಿದ್ದೆ. ನಾನು ಕುಳಿತ ಸೀಟಿಗೆ ಅಂಟಿಕೊಂಡುಬಿಟ್ಟಿದ್ದೆ. ಒಂದು ರೀತಿಯ ಹುಸುಳೆಯ ಹಠಮಾರಿತನ ನನ್ನಲ್ಲಿ ಮನೆಮಾಡಿದಂತಿತ್ತು. ಇಲ್ಲಿಯ ಈ ಎಲ್ಲ ಗೊಂದಲ ನನ್ನನ್ನು ಕಂಗೆಡಿಸಲಾರದು, ಏನೂ ಮಾಡಲಾರದು ಎಂದು ನಾನು ಉಳಿದವರಿಗೆ ತೋರಿಸಬೇಕೆಂದು ಹಟ ತೊಟ್ಟಿದ್ದೆ. ನಾನು ದಿನನಿತ್ಯದ ಸಣ್ಣಪುಟ್ಟ ಘಟನೆಗಳಿಗೆ ಮೀರಿದವನೆಂಬ ಭಾವದಲ್ಲಿದ್ದೆ.

ರೈಲಿನಲ್ಲಿ ಅತ್ತಿಂದಿತ್ತ ಓಡಿಯಾಡುತ್ತಿದ್ದ ಎಲ್ಲರೂ ನನ್ನ ಕಡೆ ಕಣ್ಣು ಹಾಯಿಸುತ್ತಿದ್ದರು. ಪ್ರತಿಯೊಬ್ಬರೂ ಅವರಿಗೆ ತಕ್ಕಂತೆ ನಾನು ಎಂತಹ ವ್ಯಕ್ತಿಯಿರಬಹುದೆಂಬ

ಬಗ್ಗೆ ತಮ್ಮದೇ ಆದ ನಿರ್ಣಯ ರೂಪಿಸಿಕೊಳ್ಳುತ್ತಿದ್ದರೆಂದು ತೋರುತ್ತದೆ. ಆದರೆ ಯಾರಾದರೊಬ್ಬರು ನಾನೊಬ್ಬ ಖ್ಯಾತ ಬ್ರಿಟಿಷ್ ಲೇಖಕ, ಉಪನ್ಯಾಸ ನೀಡಲು ಹೋಗುತ್ತಿದ್ದೇನೆ, ತಡವಾಯಿತೆಂದು ಚಡಪಡಿಸುತ್ತಿದ್ದೇನೆ ಎಂದು ಊಹಿಸಿರಬಹುದೇ ? ಇಲ್ಲ, ಇದು ಯಾರ ಮನಸ್ಸಿಗೂ ಹೊಳೆದಿರಲಿಕ್ಕಿಲ್ಲವೆಂದು ಖಚಿತವಾಗಿ ನನಗೆ ಗೊತ್ತು. ಇದು ಸಾಮಾನ್ಯರಿಗೆ ಅರ್ಥವಾಗುವುದಿಲ್ಲ.

ನಾನು ಬ್ರಾಂದಿಯನ್ನು ಗುಟುಕು ಗುಟುಕೇ ಕುಡಿಯುತ್ತಿದ್ದೆ. ಕುಡಿಯುವುದರಲ್ಲಿ ನನಗೆ ಅಂತಹ ಆಸಕ್ತಿಯಿರಲಿಲ್ಲ. ತೀವ್ರ ಚಟವಿದ್ದವರು ಯಾಕೆ ಹಾಗೆ ಹಂಬಲಿಸುತ್ತಾರೆಂದು ನನಗೆ ಅರ್ಥವಾಗಿರಲಿಲ್ಲ. ಈಗ ಮದ್ಯದಲ್ಲಿರುವ ಪ್ರಬಲ ಶಕ್ತಿ ನನ್ನ ಅರಿವಿಗೆ ಬರತೊಡಗಿತು. ನಿರ್ವಾಣದ ರಹಸ್ಯಗಳನ್ನು ಈ ಮದ್ಯ ತನ್ನೊಳಗೆ ಅಡಗಿಸಿಕೊಂಡಿದೆಯೆನ್ನಿಸಿತು. ನಾನು ನನ್ನ ಕೈಗಡಿಯಾರದತ್ತ ನೋಡಲಿಲ್ಲ. ನಾನು ಎಲ್ಲಿ ನಿದ್ರಿಸಬೇಕೆಂಬುದರ ಬಗ್ಗೆ ಚಿಂತಿಸಲಿಲ್ಲ. ನಾನು ನೀಡಬೇಕಾಗಿದ್ದ ಉಪನ್ಯಾಸದ ಬಗ್ಗೆ ನನ ಮನಸ್ಸು ಗೇಲಿಮಾಡಿತು. ಉಪನ್ಯಾಸ ನೀಡದಿದ್ದರೆ ಆಗುವುದಾದರೂ ಏನು ? ಜನಗಳು ಇನ್ನೊಂದಿಷ್ಟು ಸುಳ್ಳುಗಳನ್ನು ಕೇಳುವುದು ತಪ್ಪುತ್ತದೆ ಅಷ್ಟೆ. ಕಿಟಕಿ ತೆರೆದು ಹಸ್ತಪ್ರತಿ ಬಿಸಾಕಿಬಿಡಬಹುದು. ಎಲ್ಲಿ ಸುಳ್ಳುಗಳಿಲ್ಲವೋ, ಎಲ್ಲಿ ದೋಷಗಳಿಲ್ಲವೋ ಅಂತಹ ವಿಶ್ವಾತ್ಮನಲ್ಲಿ ಈ ಹಸ್ತಪ್ರತಿ ಒಂದಾಗಲಿ. ಅಣುಗಳು ಹಾಗೂ ಪರಮಾಣುಗಳು ಪಾಪಪ್ರಜ್ಞೆಯಿಲ್ಲದಂಥವು. ಅವು ದೈವಿಕ ಸತ್ಯದ ಅವಿಭಾಜ್ಯ ಅಂಗಗಳು.

೨

ರೈಲು ಸರಿಯಾಗಿ ರಾತ್ರಿ ಎರಡೂವರೆಗೆ ತಲುಪಿತು. ನನಗಾಗಿ ಅಲ್ಲಿ ಯಾರೂ ಕಾದಿರಲಿಲ್ಲ. ನಿಲ್ದಾಣದಿಂದ ಹೊರಹೊರಟ ತಕ್ಷಣ ತಣ್ಣನೆಯ ಗಾಳಿ ನನ್ನನ್ನು ನಡುಗಿಸಿತು. ಯಾವ ಶಾಲು ಅಥವಾ ಸ್ವೆಟರ್ ಆಗಲೀ ಅದನ್ನು ತಡೆಯುವಂತಿರಲಿಲ್ಲ. ಎಲ್ಲ ಟ್ಯಾಕ್ಸಿಗಳೂ ತಕ್ಷಣ ಪ್ರಯಾಣಿಕರನ್ನು ಕರೆದುಕೊಂಡು ಹೊರಟುಹೋದವು. ನಾನು ರೈಲು ನಿಲ್ದಾಣಕ್ಕೆ ಹಿಂತಿರುಗಿ ಆ ರಾತ್ರಿಯನ್ನು ಅಲ್ಲಿಯೇ ಬೆಂಚಿನ ಮೇಲೆ ಕುಳಿತು ಕಳೆಯಲು ನಿರ್ಧರಿಸಿದೆ.

ಒಬ್ಬಳು ಕುಂಟ ಹೆಂಗಸು ಹಾಗೂ ತರುಣಿಯೊಬ್ಬಳು ನನ್ನ ಕಡೆಗೇ ನೋಡುತ್ತಾ ಬೆರಳು ಮಾಡಿ ತೋರಿಸುತ್ತಿದ್ದುದು ತಕ್ಷಣ ನನ್ನ ಗಮನಕ್ಕೆ ಬಂದಿತು. ನಾನು ನಿಂತು ಹಿಂತಿರುಗಿ ನೋಡಿದೆ. ಕುಂಟ ಹೆಂಗಸು ಎರಡು ದಪ್ಪ ಕೋಲಿನ ಆಧಾರದ ಮೇಲೆ ನಿಂತಿದ್ದಳು. ಸುಕ್ಕುಗಟ್ಟಿದ ಮುಖದ, ಕೆದರಿದ ತಲೆಯ ಅವಳು ಪ್ರೋಲೆಂಡ್‌ನ ಮುದುಕಿಯಂತೆ ಕಾಣಿಸುತ್ತಿದ್ದಳು. ಆದರೆ ಅವಳ ಕಣ್ಣುಗಳನ್ನು ನೋಡಿದಾಗ ಮುಪ್ಪಿಗಿಂತಲೂ ಅನಾರೋಗ್ಯ ಅವಳನ್ನು ಹಣ್ಣಾಗಿಸಿದೆ ಅನ್ನಿಸುತ್ತಿತ್ತು.

ಅವಳು ತೊಟ್ಟಿದ್ದ ಬಟ್ಟೆಗಳೂ ಸಹ ನನಗೆ ಪೋಲೆಂಡ್‌ನ ನೆನಪು ತರುತ್ತಿದ್ದವು. ಅವಳು ತೋಳಿಲ್ಲದ ತುಪ್ಪಳದ ಜಾಕೆಟ್ ತೊಟ್ಟಿದ್ದಳು. ಜೂಪು ತುದಿಯು ಅವಳ ಷೂಗಳಿಗೆ ಎತ್ತರದ ಹಿಮ್ಮಡಿಯಿತ್ತು. ಇಂಥವನ್ನು ನಾನು ಬಹಳ ವರ್ಷಗಳಿಂದ ನೋಡಿರಲಿಲ್ಲ. ಅವಳ ಹೆಗಲ ಮೇಲೆ ಒಂದು ಸುಕ್ಕುಸುಕ್ಕಾದ ಶಾಲಿದ್ದು ಅದು ನನ್ನ ತಾಯಿಯ ಶಾಲಿನಂತಿತ್ತು. ಪಕ್ಕದಲ್ಲಿದ್ದ ತರುಣಿ ಆಧುನಿಕವಾಗಿ ಉಡುಪು ತೊಟ್ಟಿದ್ದಳು. ಆದರೆ ಅವಳ ಉಡುಪೂ ಸಹ ಮಾಸಿದಂತಿತ್ತು.

ಒಂದು ನಿಮಿಷ ಸಂದೇಹಿಸಿ, ಸಂಕೋಚದಿಂದಲೇ ಅವರ ಬಳಿ ಹೋದೆ.

ಹುಡುಗಿ ಕೇಳಿದಳು : 'ನೀವು ಮಿಸ್ಟರ್ ಎನ್. ಹೌದಾ ?'

ನಾನು ಹೇಳಿದೆ : 'ಹೌದು'

ಕುಂಟ ಹೆಂಗಸು ತಕ್ಷಣ ಕೋಲಿಲ್ಲದಿದ್ದರೆ ಚಪ್ಪಾಳೆ ತಟ್ಟಿಬಿಡುತ್ತಿದ್ದಳೋ ಎಂಬಂತೆ ಖುಷಿಗೊಂಡಳು. ನಂತರ ಅವಳು ನನಗೆ ಪರಿಚಿತವೆನ್ನಿಸುವ ಧ್ವನಿಯಲ್ಲಿ– 'ದೇವರೇ!' ಎಂದು ರಾಗವಾಗಿ ಹೇಳಿದಳು. 'ನಾನು ನನ್ನ ಮಗಳಿಗೆ ಹೇಳಿದೆ. ಅದು ಆತನೇ ಎಂದು. ಅವಳು ಅಲ್ಲವೆಂದಳು. ನಾನು ನಿನ್ನನ್ನು ಗುರ್ತಿಸಿದ್ದೆ. ನೀನು ನಿನ್ನ ಬ್ಯಾಗಿನೊಂದಿಗೆ ಎಲ್ಲಿ ಹೊರಟಿದ್ದೆ ? ನೀನು ಹಿಂತಿರುಗಿ ಬಂದದ್ದು ಒಳ್ಳೆಯದಾಯಿತು. ಇಲ್ಲವಾದಲ್ಲಿ ನಾನು ನನ್ನನ್ನೆಂದೂ ಕ್ಷಮಿಸಿಕೊಳ್ಳುತ್ತಿರಲಿಲ್ಲ. ಸರಿ, ಬಿನಿಲಿ ಈಗ ನೀನು ಏನು ಹೇಳುತ್ತೀ ? ನಿಮ್ಮ ಅಮ್ಮನಿಗೆ ಬುದ್ಧಿ ಇನ್ನೂ ಸ್ತಿಮಿತದಲ್ಲಿದೆ, ಹೌದಾ ? ನಾನು ಸಾಮಾನ್ಯ ಹೆಂಗಸಿರಬಹುದು, ಆದರೆ ನಾನು ಧರ್ಮಶಾಸ್ತ್ರ ಪಂಡಿತನ ಮಗಳು. ಪಂಡಿತರಿಗೆ ಜನಗಳ ಬಗ್ಗೆ ವಿಶೇಷ ತಿಳುವಳಿಕೆಯಿರುತ್ತದೆ. ನಾನು ನಿನ್ನತ್ತ ಒಮ್ಮೆ ನೋಡಿ ಮನಸ್ಸಿನಲ್ಲಿ ಅಂದುಕೊಂಡೆ – ಅದು ನೀನೇ ಎಂದು. ಆದರೆ ಇತ್ತೀಚಿನ ದಿನಗಳಲ್ಲಿ ಮರಿಗಳಿಗಿಂತ ಮೊಟ್ಟೆಗಳೇ ಹೆಚ್ಚು ಬುದ್ಧಿ ತೋರಿಸುತ್ತವೆ. 'ಅದು ಆತನಲ್ಲವೇ ಅಲ್ಲ'–ಎಂದು ಇವಳು ವಾದಿಸಿದಳು. ಅಷ್ಟರಲ್ಲಿ ನೀನು ಕಾಣೆಸದಾದೆ. ಆಗ ನಾನಂದುಕೊಂಡೆ : ಎಲ್ಲರೂ ಮನುಷ್ಯರಲ್ಲವೇ? ತಪ್ಪು ಮಾಡುವುದು ತೀರಾ ಸಹಜ. ನಾನೂ ನನ್ನ ಎಣಿಕೆಯಲ್ಲಿ ತಪ್ಪಿರಬಹುದು. ನೀನಲ್ಲದಿದ್ದರೂ ಇರಬಹುದೆಂದು ಭಾವಿಸಿದೆ. ಆದರೆ ನೀನು ಹಿಂತಿರುಗಿ ಬಂದಾಗ ನನಗೆ ನನ್ನ ಬಗ್ಗೆ ನಂಬಿಕೆ ಬಂತು. ಪ್ರಿಯ ವ್ಯಕ್ತಿ, ನಾವು ನಿನಗಾಗಿ ಸಂಜೆ ಏಳೂವರೆ ಗಂಟೆಯಿಂದಲೂ ಕಾಯುತ್ತಿದ್ದೇವೆ. ನಾವಿಬ್ಬರೇ ಇರಲಿಲ್ಲ, ಅಧ್ಯಾಪಕರ, ವಿದ್ಯಾವಂತರ, ಕೆಲವು ಬರಹಗಾರರ ದೊಡ್ಡ ಗುಂಪೇ ಇತ್ತು. ಆದರೆ ಕ್ರಮೇಣ ಗುಂಪು ಕರಗುತ್ತಾ ಬಂತು. ಬಹಳಷ್ಟು ಜನ ಮನೆಗಳಿಗೆ ಹೊರಟುಹೋದರು. ಅವರಿಗೂ ಹೆಂಡತಿ ಮಕ್ಕಳು ಇದ್ದಾರಲ್ಲ! ಕೆಲವರು ಕೆಲಸಕ್ಕೆ ಹೋಗಲು ಬೆಳಿಗ್ಗೆ ಬೇಗ ಏಳಬೇಕು. ಹೀಗಾಗಿ ಎಷ್ಟು ಹೊತ್ತು ಕಾಯುವುದು ? ಆದರೆ ನಾನು ನನ್ನ ಮಗಳಿಗೆ ಹೇಳಿದೆ–ನಾನು ಇಲ್ಲಿಂದ ಹೋಗುವುದಿಲ್ಲ. ನನ್ನ ಪ್ರೀತಿಪಾತ್ರನಾದ ಲೇಖಕ, ಆತನ ಪ್ರತಿಯೊಂದು ಮಾತೂ ಮುತ್ತಿನಂಥದು, ಆತ ಇಲ್ಲಿಗೆ ಬಂದಾಗ ಆತನನ್ನು ಎದುರು

ಗೊಳ್ಳಲು ಯಾರೂ ಇಲ್ಲದೆ ಆತನಿಗೆ ಬೇಸರವಾಗಬಾರದು. ನೀನು ಬೇಕಿದ್ದರೆ ಮನೆಗೆ ಹೋಗಿ ಮಲಗಿಕೋ. ರಾತ್ರಿಯ ನಿದ್ದೆಯೇನು ? ನಾನು ಚಿಕ್ಕವಳಿದ್ದಾಗ ರಾತ್ರಿ ನಿದ್ದೆ ಮಾಡದಿದ್ದರೆ ಪ್ರಪಂಚವೇ ತಲೆಕೆಳಗಾಗಿ ಬಿಡುತ್ತದೆ ಎಂದುಕೊಳ್ಳುತ್ತಿದ್ದೆ. ಆದರೆ ಹಿಟ್ಲರ್ ನಮಗೆ ಚೆನ್ನಾಗಿ ಪಾಠ ಕಲಿಸಿದ. ನಾನು ಕಣ್ಮುಚ್ಚುವವರೆಗೂ ಆತ ಕಲಿಸಿದ ಪಾಠವನ್ನು ಮರೆಯಲಾರೆ. ಈಗ ನೀನು ವಯಸ್ಸಾದ, ರೋಗಿಯಾದ ಕುಂಟ ಹೆಂಗಸೊಬ್ಬಳನ್ನು ನೋಡುತ್ತಿದ್ದೀ ಅಲ್ಲವಾ ? ಆದರೆ ಹಿಟ್ಲರ್‌ನ ಕ್ಯಾಂಪಿನಲ್ಲಿ ನಾನು ಅಪಾರ ದುಡಿದಿದ್ದೇನೆ. ನೆಲ ಅಗಿದು ರೈಲು ವ್ಯಾಗನ್‌ಗಳನ್ನು ತುಂಬಿದ್ದೇನೆ. ನಾನು ಮಾಡದಿದ್ದುದು ಏನಾದರೂ ಇದ್ದಿತೇನು ? ಅಲ್ಲಿಯೇ ನನಗೆ ಕೀಲುನೋವು ಆರಂಭವಾದುದು. ನಾವು ಅಲ್ಲಿ ನಾಯಿಗಳಿಗೂ ಯೋಗ್ಯವಲ್ಲದ ಜಾಗದಲ್ಲಿ ಹಸಿವಿನಿಂದ ಕಂಗಾಲಾಗಿ ಮಲಗುತ್ತಿದ್ದೆವು.'

'ಅಮ್ಮ, ಮಾತನಾಡಲು ನಿನಗೆ ಆಮೇಲೆ ಸಾಕಷ್ಟು ಸಮಯವಿರುತ್ತದೆ. ಈಗಾಗಲೇ ಸರಿರಾತ್ರಿಯಾಗಿದೆ. ನಿನ್ನ ಮಾತು ನಿಲ್ಲಿಸುವೆಯಾ ?'–ಅವಳ ಮಗಳು ಹೇಳಿದಳು.

ಆಗ ನಾನು ಅವಳ ಮಗಳತ್ತ ನೋಡಿದೆ. ಅವಳ ಅಂಗಸೌಷ್ಠವ ಹಾಗೂ ಚೆಲುವು ಇನ್ನೂ ತರುಣಿಯೆಂದು ಹೇಳುತ್ತಿದ್ದರೂ ಅವಳಿಗೆ ಮೂವತ್ತು ವರ್ಷ ದಾಟಿದ್ದಿರಬೇಕು ಅನ್ನಿಸಿತು. ಅವಳು ತೆಳ್ಳಗೆ ಕುಳ್ಳಗಿದ್ದು ತನ್ನ ಕೂದಲನ್ನು ಹಿಂದಕ್ಕೆ ಬಿಗಿದು ಕಟ್ಟಿದ್ದಳು. ಹುಷಾರಿಲ್ಲದವರಂತೆ ಮುಖ ಕಂಗೆಟ್ಟಿತ್ತು. ಹಳದಿ ಕಣ್ಣುಗಳು. ದುಂಡು ಹಣೆ, ಚಪ್ಪಟೆ ಮೂಗು. ತುಟಿಗಳು ತೆಳುವಾಗಿದ್ದು ಗಲ್ಲ ಚೂಪಾಗಿದ್ದಿತು. ಕತ್ತಿನ ಸುತ್ತ ಗಂಡಸರಂತೆ ಸ್ಕಾರ್ಫ್ ಕಟ್ಟಿದ್ದಳು.

ನಾನು ಅನೇಕ ವರ್ಷಗಳಿಂದ ಅಮೇರಿಕದಲ್ಲಿದ್ದು ಮರೆತುಹೋಗಿದ್ದ ಪೋಲಿಷ್ ಭಾಷೆಯ ಗ್ರಾಮೀಣ ಧಾಟಿಯಲ್ಲಿ ಅವಳು ಮಾತನಾಡುತ್ತಿದ್ದಳು. ರೈಬ್ರೆಡ್, ಸೋಂಪು ಬೀಜಗಳು, ಹಳ್ಳಿಯ ಚೀಸ್, ಬಾವಿಯಿಂದ ಅಡ್ಡೆಯಲ್ಲಿ ನೀರು ಹೊರುವವರು–ಇವೆಲ್ಲವನ್ನೂ ನಾನು ನೆನಪಿಸಿಕೊಳ್ಳುವಂತೆ ಅವಳು ಮಾಡಿದಳು.

'ವಂದನೆಗಳು. ಆದರೆ ಕೇಳುವಷ್ಟು ತಾಳ್ಮೆ ಇದೆ ನನಗೆ' – ನಾನು ನಗುತ್ತಾ ಹೇಳಿದೆ.

'ಆಗಿನ ದಿನಗಳ ಬಗ್ಗೆ ನಮ್ಮ ಅಮ್ಮ ಮಾತನಾಡಲು ಆರಂಭಿಸಿದರೆ ಅವಳು ವಾರಗಟ್ಟಳೆ ಮಾತನಾಡುತ್ತಾಳೆ.'

'ಶ್ ಶ್, ಸಾಕು ಸುಮ್ಮನಿರು. ನಿನ್ನ ಅಮ್ಮ ನೀನು ಹೇಳುವಷ್ಟು ಮಾತಿನ ಬಗ್ಗೆ ಮೋಹವುಳ್ಳವಳಲ್ಲ. ಆದರೆ ನಮ್ಮ ನರಗಳು ಅಲ್ಲಿ ತುಂಡು ತುಂಡಾಗಿರುವುದಂತೂ ನಿಜ. ನಾವು ಸಂಪೂರ್ಣ ಹುಚ್ಚರಾಗಿ ಬೀದಿ ಬೀದಿ ಅಲೆಯದಿದ್ದುದು ನಮ್ಮ ಪುಣ್ಯ. ಆದರೆ ಅವಳು ಏನಾದಳೋ ? ಅವಳ ಮೂವರು ಸಹೋದರರ ಹಾದಿಯಲ್ಲೇ ಅವಳೂ ಹೋದಳೆಂದು ಭಾವಿಸಿದ್ದೆ. ಆದರೆ ಬಿಡುಗಡೆಯ ನಂತರ ಒಬ್ಬರ

ನ್ನೊಬ್ಬರು ನಾವು ಕಂಡೆವು. ಆ ಪಿಶಾಚಿಗಳು ನಮ್ಮಿಂದ ಬಯಸಿದ್ದೇನು ? ಛೀ! ನನ್ನ ಗಂಡ ದೇವರಂಥ ಮನುಷ್ಯ. ಆತ ಲಿಪಿಕಾರನಾಗಿದ್ದ. ನನ್ನ ಮಕ್ಕಳೂ ಪವಿತ್ರ ಗ್ರಂಥವನ್ನು ಲಿಪಿ ಮಾಡುವ ಕೆಲಸ ಮಾಡುತ್ತಿದ್ದರು. ಒಂದು ತುಂಡು ಬ್ರೆಡ್ಡಿಗಾಗಿ ಅವರು ಕಷ್ಟಪಟ್ಟು ದುಡಿಯುತ್ತಿದ್ದರು. ಲಿಪಿಮಾಡುವ ಕೆಲಸದಿಂದ ಹೆಚ್ಚಿನ ಗಳಿಕೆಯೇನೂ ಬರುತ್ತಿರಲಿಲ್ಲ. ನನ್ನ ಗಂಡ ಊಟ ಮಾಡಿದ್ದಕ್ಕಿಂತ ಉಪವಾಸವಿದ್ದ ದಿನಗಳೇ ಹೆಚ್ಚು. ಒಂದು ದಿನ ಆತ ದೈವಾಧೀನನಾದ. ನನ್ನ ಮಕ್ಕಳನ್ನು ಆ ಕೊಲೆಗಾರರು ಕ್ರೂರವಾಗಿ ಕೊಂದರು.'

'ಅಮ್ಮ ದಯವಿಟ್ಟು ನಿಲ್ಲಿಸುವೆಯಾ ?'

'ನಿಲ್ಲಿಸುತ್ತೇನೆ, ನಿಲ್ಲಿಸುತ್ತೇನೆ. ಎಲ್ಲಿಯವರೆಗೆ ನಾನು ಇದನ್ನೆಲ್ಲ ಹೇಳುತ್ತಿರುತ್ತೇನೆ ? ಅವಳು ಹೇಳುವುದು ನಿಜ. ಮೊದಲು ನಿನ್ನನ್ನು ನಾವು ಸತ್ಕರಿಸಬೇಕಲ್ಲವೇ ? ನಾನು ನನ್ನ ಕತೆಯನ್ನೇ ಶುರು ಮಾಡಿಬಿಟ್ಟೆ. ನಮ್ಮ ಅಧ್ಯಕ್ಷರು ನಿನಗಾಗಿ ಕಾದಿರಿಸಿದ್ದ ಹೋಟೆಲಿನ ಹೆಸರನ್ನು ಹೇಳಿದ್ದರು. ನನ್ನ ಮಗಳು ಅದನ್ನು ಸರಿಯಾಗಿ ಕೇಳಿಸಿಕೊಳ್ಳಲಿಲ್ಲ. ನಾನದನ್ನು ಮರೆತುಬಿಟ್ಟೆ. ಹೀಗೆ ಮರೆಯುವುದು ನನ್ನ ದುರಾದೃಷ್ಟ. ನಾನು ನನ್ನ ವಸ್ತುಗಳನ್ನು ಎಲ್ಲೋ ಇಡುತ್ತೇನೆ, ಮರೆತುಬಿಡುತ್ತೇನೆ. ಎಷ್ಟೋ ಸಾರಿ ಹೀಗೆ ಹುಡುಕುತ್ತಿರುವುದರಲ್ಲೇ ನನ್ನ ಇಡೀ ದಿನ ಹೋಗಿಬಿಟ್ಟಿರುತ್ತದೆ. ನನ್ನ ಪ್ರಿಯ ಲೇಖಕ, ದಯವಿಟ್ಟು ಈ ದಿನ ನಮ್ಮೊಡನೆಯೇ ಇರುವೆಯಾ ? ನಮ್ಮ ಮನೆ ಚಂದದ ದೊಡ್ಡ ಮನೆಯಲ್ಲ, ದುಸ್ಥಿತಿಯಲ್ಲಿರುವ ಒಂದು ಸಾಮಾನ್ಯ ಮನೆ. ಆದರೂ ಏನೂ ಇಲ್ಲದಿರುವುದಕ್ಕಿಂತ ಅದು ವಾಸಿ ಅಲ್ಲವೇ ? ನಾನು ಅಧ್ಯಕ್ಷರಿಗೆ ಫೋನ್ ಮಾಡಬಹುದು. ಆದರೆ ಈ ಸರಿರಾತ್ರಿಯಲ್ಲಿ ಆತನಿಗೆ ಫೋನ್ ಮಾಡಲು ನನಗೆ ಭಯ. ಆತ ವಿಚಿತ್ರ ರೀತಿಯ ಮನುಷ್ಯ. ಆತ ಸರಿಯಾಗಿ ಮಾತನಾಡಬಹುದು ಅಥವಾ ನಾವು ಅನಾಗರೀಕರೆಂದು ಕೂಗಾಡಬಹುದು. ಅದಕ್ಕೇ ನಾನು ಅವನಿಗೆ ಆಗಾಗ ಹೇಳುತ್ತಿರುತ್ತೇನೆ - 'ಜರ್ಮನ್‌ರು ಮಾತ್ರ ನಾಗರೀಕರು, ನೀನು ಅಲ್ಲಿಗೇ ಹೋಗು' ಎಂದು.

'ನಮ್ಮೊಡನೆ ಬನ್ನಿ. ಆದಲೇ ಮೂರೂಕಾಲು ಗಂಟೆಯಾಯಿತು' ಮಗಳು ಹೇಳಿದಳು. 'ಅವನು ಬರಿದೆ ಹೇಳುವುದರ ಬದಲು ಬರೆದಿಡಬಹುದಿತ್ತು ಅಥವಾ ಹೇಳಿದ್ದರೂ ಅಮ್ಮನ ಬದಲು ನನಗೆ ಹೇಳಬೇಕಿತ್ತು. ಅವಳು ಎಲ್ಲವನ್ನೂ ಮರೆಯುತ್ತಾಳೆ. ತನ್ನ ಕನ್ನಡಕವನ್ನು ಎಲ್ಲೋ ಇಟ್ಟುಬಿಡುತ್ತಾಳೆ. ಆಮೇಲೆ ನನ್ನ ಕನ್ನಡಕ ಎಲ್ಲಿ ಎಂದು ಬೊಬ್ಬೆಯಿಡುತ್ತಾಳೆ. ಕೆಲವೊಮ್ಮೆ ನನಗೆ ನಗು ಬರುತ್ತದೆ. ಕೊಡಿ, ನಿಮ್ಮ ಬ್ಯಾಗು ಹಿಡಿದುಕೊಳ್ಳುತ್ತೇನೆ.'

'ಇಲ್ಲ, ಬ್ಯಾಗ್ ಅಂತಹ ಭಾರವೇನಿಲ್ಲ, ನಾನೇ ಹಿಡಿದುಕೊಳ್ಳುತ್ತೇನೆ.'

'ನಿಮಗೆ ಭಾರ ಹೊರುವ ಅಭ್ಯಾಸವಿರಲಿಕ್ಕಿಲ್ಲ ಅಲ್ಲವೇ ? ನನಗೆ ಚೆನ್ನಾಗಿ ಅಭ್ಯಾಸವಿದೆ. ನಾನು ಅಲ್ಲಿ ಹೊರುತ್ತಿದ್ದ ಬಂಡೆಯಂತಹ ಕಲ್ಲುಗಳನ್ನು ಈಗ ನೋಡಿ

ನರೆ ನೀವು ನಂಬುವುದಿಲ್ಲ. ನೆನೆಸಿಕೊಂಡರೆ ನನಗೇ ಆಶ್ಚರ್ಯವಾಗುತ್ತದೆ. ಆದರೆ ಅದು ನಿಜ. ಅದೆಲ್ಲ ಒಂದು ಕೆಟ್ಟ ಕನಸಿದ್ದ ಹಾಗೆ.'

'ಹೋಗಲಿ, ಈಗಲಾದರೂ ಈ ಬ್ಯಾಗು ಹೊರುವುದು ನಿಮಗೆ ತಪ್ಪಿದರೆ ಅದೇ ನನಗೆ ಸಮಾಧಾನ.'

'ನೋಡಿದೆಯಾ! ನಾನು ಹೇಳಲಿಲ್ಲವಾ, ಆತ ಸುಸಂಸ್ಕೃತ, ಸಭ್ಯ, ಸಜ್ಜನ ಎಂದು. ಮೊದಲಬಾರಿಗೆ ಅವನ ಕತೆಗಳನ್ನು ಓದಿದಾಗಲೇ ನನಗೆ ಅನ್ನಿಸಿತ್ತು' – ತಾಯಿ ಹೇಳಿದಳು. 'ನೀನು ನಂಬದಿರಬಹುದು, ನಿನ್ನ ಕತೆಗಳನ್ನು ನಾವು ಕ್ಯಾಂಪಿನಲ್ಲಿಯೂ ಸಹ ಓದುತ್ತಿದ್ದೆವು. ಯುದ್ಧಾನಂತರ ಅವರು ನಮಗೆ ಪುಸ್ತಕಗಳನ್ನು ಕಳಿಸಲಾರಂಭಿಸಿದಾಗ ನನಗೆ ನಿನ್ನ ಪುಸ್ತಕ ಸಿಕ್ಕಿತು. ಆ ಪುಸ್ತಕದ ಹೆಸರು ನೆನಪಿಲ್ಲ, ಆದರೆ ಅದು ನನ್ನ ಮನಸ್ಸಿನ ಕತ್ತಲೆಯನ್ನು ಹೋಗಲಾಡಿಸಿ ಬೆಳಕು ಮೂಡಿಸಿತು. 'ಬಿನಿಲೀ ನನಗೆ ನಿಧಿ ಸಿಕ್ಕಿತು' – ಇವು ಆಗ ನಾನು ಹೇಳಿದ ಮಾತುಗಳು.

'ತುಂಬಾ ತುಂಬಾ ಕೃತಜ್ಞತೆಗಳು.'

'ಅಯ್ಯೋ ನಮಗೇಕೆ ಕೃತಜ್ಞತೆ ಹೇಳುವೆ? ಅಗತ್ಯವಿಲ್ಲ. ನಾವು ನಿನಗೆ ಕೃತಜ್ಞರಾಗಿರಬೇಕು. ಜಗತ್ತಿಗೆ ಕುರುಡಾಗಿ, ಕಿವಿ ಮುಚ್ಚಿಕೊಂಡಿರುವ ವ್ಯಕ್ತಿಗಳಿಂದಲೇ ಎಲ್ಲ ರೀತಿಯ ತೊಂದರೆಗಳೂ ಉದ್ಭವಿಸುವುದು. ಅಂಥವರು ತಮ್ಮ ಮುಂದೆ ಯಾರಿದ್ದಾರೆ ಎಂಬುದನ್ನೂ ಗಮನಿಸುವುದಿಲ್ಲ. ಸುಮ್ಮನೆ ಹಿಂಸಿಸುತ್ತಾರೆ. ನಾವು ಅಂತಹ ಜನಗಳ ನಡುವೆಯೇ ಬದುಕಬೇಕಾಗಿದೆ ನೋಡು! ಬಿನಿಲೀ, ಆತ ಬ್ಯಾಗ್ ಹಿಡಿಯಲು ಬಿಡಬೇಡ.'

'ಹೌದು, ದಯವಿಟ್ಟು ಅದನ್ನು ನನಗೆ ಕೊಡಿರಿ.'

ಬ್ಯಾಗನ್ನು ನಾನೇ ಹಿಡಿದುಕೊಳ್ಳಲು ಬಿನಿಲೀಯೊಡನೆ ಸಂಕಷ್ಟ ವಾದಿಸಬೇಕಾಯಿತು. ಅವಳು ಅದನ್ನು ಇನ್ನೇನು ಕಿತ್ತುಕೊಂಡುಬಿಡಬಹುದು ಎಂಬಷ್ಟು ಬ್ಯಾಗನ್ನು ತೆಗೆದುಕೊಳ್ಳಲು ಪ್ರಯತ್ನಿಸಿದಳು.

ನಾವು ನಿಲ್ದಾಣದಿಂದ ಹೊರಬರುತ್ತಿದ್ದಂತೇ ಟ್ಯಾಕ್ಸಿಯೊಂದು ಬಂದಿತು. ಆ ಹೆಂಗಸನ್ನು ಟ್ಯಾಕ್ಸಿಯಲ್ಲಿ ಕೂರಿಸುವುದು ಅಷ್ಟು ಸುಲಭವಾಗಿರಲಿಲ್ಲ. ಅವಳು ಇಂತಹ ಸ್ಥಿತಿಯಲ್ಲಿ ನಿಲ್ದಾಣಕ್ಕೆ ಹೇಗೆ ಬಂದಳೆಂಬುದೇ ನನಗೆ ಅರ್ಥವಾಗಲಿಲ್ಲ. ನಾನು ಅವಳನ್ನು ಆನಾಮತ್ತಾಗಿ ಎತ್ತಿ ಟ್ಯಾಕ್ಸಿಯಲ್ಲಿ ಕೂರಿಸಬೇಕಾಯಿತು. ಆಗ ಅವಳ ಒಂದು ಕೋಲು ಕೆಳಗೆ ಬಿದ್ದಿತು. ಕತ್ತಲಿನಲ್ಲಿ ಹಿಮದ ನಡುವೆ ನಾನು ಮತ್ತು ಬಿನಿಲೀ ಅದನ್ನು ಹುಡುಕಬೇಕಾಯಿತು. ಆ ವೇಳೆಗಾಗಲೇ ಡ್ರೈವರ್ ತನ್ನ ಕೆನಡಾ ಫ್ರೆಂಚ್ ಭಾಷೆಯಲ್ಲಿ ಏನೋ ಗೊಣಗುತ್ತಾ ಸಿಡುಕಲಾರಂಭಿಸಿದ್ದ. ನಂತರ ಕಾರು ಮಂದ ಬೆಳಕಿನ ಇಕ್ಕಟ್ಟಾದ ಬೀದಿಯಲ್ಲಿ ಹಿಮದ ಗುಡ್ಡೆಗಳನ್ನು ದಾಟುತ್ತಾ ಮುನ್ನಡೆಯಿತು. ಗಾಲಿಗಳು ಜಾರದಂತೆ ಸರಪಳಿಯನ್ನು ಹೊಂದಿಸಿದ್ದರೂ ಆಗಾಗ್ಗೆ ಟ್ಯಾಕ್ಸಿ ಜಾರಿ ಹಿಂದೆ ಹಿಂದೆ ಹೋಗುತ್ತಿತ್ತು.

ಕಡೆಗೆ ಟ್ಯಾಕ್ಸಿ ಪೋಲೆಂಡಿನ ಪಟ್ಟಣವೊಂದನ್ನು ನೆನಪಿಸುವ ಒಂದು ಬೀದಿಗೆ ಬಂದು ನಿಂತಿತು. ಆ ಬೀದಿ ತುಂಬಾ ಇಕ್ಕಟ್ಟಾಗಿತ್ತು. ಮಂದ ಬೆಳಕಿನಲ್ಲಿ ಮರದ ಮನೆಗಳು ಕಾಣಿಸುತ್ತಿದ್ದವು. ಟ್ಯಾಕ್ಸಿ ನಿಂತ ತಕ್ಷಣ ಆ ಹೆಂಗಸು ಆತುರಾತುರವಾಗಿ ತನ್ನ ಪರ್ಸ್ ತೆಗೆಯಲು ತೊಡಗಿದಳು. ಆದರೆ ಅವಳು ಅದರಿಂದ ದುಡ್ಡು ತೆಗೆಯುವ ಮುನ್ನವೇ ನಾನು ಟ್ಯಾಕ್ಸಿಯವನಿಗೆ ಹಣ ನೀಡಿದ್ದೆ. ತಾಯಿ ಮಗಳಿಬ್ಬರೂ ನನ್ನನ್ನು ಆಕ್ಷೇಪಿಸಿದರು. ಟ್ಯಾಕ್ಸಿಯವನು ಬೇಗ ಇಳಿಯುವಂತೆ ಒತ್ತಾಯಿಸುತ್ತಿದ್ದ. ಮತ್ತೆ ನಾನು ಆ ಅಂಗವಿಕಲ ಹೆಂಗಸನ್ನು ಟ್ಯಾಕ್ಸಿಯಿಂದ ಅನಾಮತ್ತಾಗಿ ಎತ್ತಿ ಇಳಿಸ ಬೇಕಾಯಿತು. ಯಥಾಪ್ರಕಾರ ನಾನು ಮತ್ತು ಬಿನಿಲೀ ಹಿಮದಲ್ಲಿ ಬಿದ್ದ ಆಕೆಯ ಕೋಲನ್ನು ಹುಡುಕಬೇಕಾಯಿತು. ಅನಂತರ ನಾವಿಬ್ಬರೂ ಸೇರಿ ಅವಳನ್ನು ಅರ್ಧ ನಡೆಸುತ್ತಾ, ಅರ್ಧ ಎತ್ತಿಕೊಳ್ಳುತ್ತಾ ಹೇಗೋ ಬಾಗಿಲ ಬಳಿ ಬಂದೆವು. ಬಾಗಿಲು ತೆಗೆಯುತ್ತಿದ್ದಂತೆ ನಾನು ಮರೆತುಬಿಟ್ಟಿದ್ದ ಅನೇಕ ವಾಸನೆಗಳು ಒಮ್ಮೆಗೇ ನನ್ನ ಮೂಗಿಗೆ ಅಡರಿದವು. ಕೊಳೆತ ಈರುಳ್ಳಿ, ಆಲೂಗೆಡ್ಡೆ, ಚಿಕೋರಿ ಇತ್ಯಾದಿ ವಾಸನೆ ಗಳು, ಕೆಲವು ನಾನು ಹೆಸರಿಸಲು ಬಾರದಂಥವು. ಪೋಲೆಂಡಿನ ಕಡುಬಡತನದ ವಾತಾವರಣವನ್ನು ಅದ್ಭುತ ರೀತಿಯಲ್ಲಿ ಅವರು ಇಲ್ಲಿಗೂ ತರಲು ಬಹಳ ಶ್ರಮಿಸಿರ ಬೇಕು.

ಬಿನಿಲೀ ಸೀಮೆಎಣ್ಣೆ ದೀಪ ಹಚ್ಚಿದಳು. ಮನೆಯ ಸುತ್ತಲೂ ಒಮ್ಮೆ ಕಣ್ಣಾಡಿ ಸಿದೆ. ಗೋಡೆಗೆ ಅಂಟಿಸಿದ್ದ ಕಾಗದ ಅಲ್ಲಲ್ಲಿ ಹರಿದಿತ್ತು. ಒರಟಾದ ಮರದ ನೆಲ, ಎಲ್ಲ ಕಡೆ ಜೇಡ ಬಲೆ. ಮೂಲೆಯಲ್ಲಿ ಸೀಮೆಎಣ್ಣೆ ಸ್ಟೌವ್ ಇತ್ತು. ಎಲ್ಲವೂ ಅಸ್ತವ್ಯಸ್ತ. ಗೋಡೆಯ ಬದಿಗಿದ್ದ ಬೆಂಚಿನ ಮೇಲೆ ಸೀಳುಬಿಟ್ಟ ಮಡಿಕೆಗಳು, ಹಿಡಿ ಯಿಲ್ಲದ ಬಟ್ಟಲುಗಳು, ಒಡೆದ ಪ್ಲೇಟುಗಳಿದ್ದವು. ಗುಡಿಸಿ ರಾಶಿ ಮಾಡಿದ ಕಸದ ಮೇಲಿದ್ದ ಪೊರಕೆಯೂ ನನ್ನ ಕಣ್ಣಿಗೆ ಬಿದ್ದಿತು. ಯಾವ ರಂಗ ನಿರ್ದೇಶಕನೂ ಸಹ ಇದಕ್ಕಿಂತ ಸಮರ್ಥವಾಗಿ ಗ್ರಾಮೀಣ ಕಡುಬಡತನದ ಸ್ಥಿತಿಯನ್ನು ನಿರ್ಮಿಸಲಾರ ನೆನ್ನಿಸಿತು.

ಬಿನಿಲೀ ಕ್ಷಮಾಪಣೆ ಕೇಳಲಾರಂಭಿಸಿದಳು. 'ಎಂಥ ಹೊಲಸು ಅಲ್ಲವಾ ? ನಾವು ನಿಲ್ದಾಣಕ್ಕೆ ಬರುವ ಆತುರದಲ್ಲಿ ಪಾತ್ರೆಗಳನ್ನು ಕೂಡ ತೊಳೆದಿಡಲಿಲ್ಲ. ಎಷ್ಟು ಶುಚಿ ಮಾಡಿದರೂ ಒಂದೇ ಈ ಮನೆಯಲ್ಲಿ. ಇದೊಂದು ಅತ್ಯಂತ ಹಳೆಯ ಮನೆ. ತಿಂಗಳಿಗೊಮ್ಮೆ ಬಾಡಿಗೆ ವಸೂಲಿ ಮಾಡಲು ಬರುವುದೊಂದೇ ಮನೆಯೊಡತಿಗೆ ಗೊತ್ತಿರುವುದು. ಒಂದು ದಿನ ತಡವಾದರೂ ಅವಳು ಗಂಟಲು ಸೀಳಿಬಿಡುತ್ತಾಳೆ. ಆದರೂ ಅಲ್ಲಿನ ನಮ್ಮ ಕಷ್ಟಗಳನ್ನು ನೆನೆಸಿಕೊಂಡರೆ ಇದೊಂದು ಅರಮನೆಯೇ ಅನ್ನಬೇಕು.' ಬಿನಿಲೀ ಮುಕ್ತವಾಗಿ ನಕ್ಕಳು. ಬಹುಶಃ ಇಲ್ಲಿಗೆ ಬರುವ ಮುನ್ನ ಅವಳು ಹಲ್ಲಿನ ನಡುವೆ ತುಂಬಿಸಿಕೊಂಡಿದ್ದ ಚಿನ್ನದ ಪುಡಿ ಹೊಳೆಯಿತು.

೩

ಗುಡಿ-ಗುಡುವಾದ ಚಿಕ್ಕ ಮಂಚದ ಮೇಲೆ ನನ್ನ ಹಾಸಿಗೆ ಸಿದ್ಧಪಡಿಸಿದ್ದರು. ಪಕ್ಕದಲ್ಲೇ ಸರಳುಗಳಿದ್ದ ಕಿಟಕಿಯಿದ್ದಿತು. ಬಿಸಿಲೀ ಎರಡು ರಗ್ಗುಗಳನ್ನು ಹೊದೆಸಿ, ಸಾಲದೆಂಬಂತೆ ಅದರ ಮೇಲೆ ನನ್ನ ಕೋಟನ್ನೂ ಹೊದೆಸಿದಳು. ಇಷ್ಟಾದರೂ ಹೊರಗಡೆಯಷ್ಟೇ ಮನೆಯೊಳಗೂ ಚಳಿಯಿತ್ತು. ನಾನು ಹೊದಿಕೆಯೊಳಗೆ ನನ್ನನ್ನು ತೂರಿಸಿಕೊಂಡು ಮುದುರಿ ಮಲಗಿಕೊಂಡೆ. ಆದರೆ ಬೆಚ್ಚಗಾಗಲಿಲ್ಲ.

ಇದ್ದಕ್ಕಿದ್ದಂತೆ ನನ್ನ ಹಸ್ತಪ್ರತಿಯು ನೆನಪಾಯಿತು. ನನ್ನ ಉಪನ್ಯಾಸದ ಹಸ್ತಪ್ರತಿ ಎಲ್ಲಿ? ನಾನು ಅದನ್ನು ನನ್ನ ಕೋಟಿನ ಎದೆಯ ಭಾಗದ ಒಳಜೇಬಿನಲ್ಲಿಟ್ಟಿದ್ದೆ. ಎದ್ದರೆ ಎಲ್ಲಿ ಮುರಿದು ಬೀಳುತ್ತದೋ ಎನ್ನುವಂತಹ ಹಳೆಯ ಮಂಚ. ಹೀಗಾಗಿ ಮಲಗಿದ್ದಂತೆಯೇ ಹುಡುಕಲು ಯತ್ನಿಸಿದೆ. ಹಸ್ತಪ್ರತಿ ಜೇಬಿನಲ್ಲಿರಲಿಲ್ಲ. ಹತ್ತಿರದಲ್ಲೇ ಇದ್ದ ನನ್ನ ಜಾಕೆಟ್‌ನಲ್ಲಿ ಹುಡುಕಿದೆ. ಅಲ್ಲೂ ಇರಲಿಲ್ಲ. ಫ್ರೆಂಚ್‌ಮದ್ಯವನ್ನು ತೆಗೆಯಲೋಸುಗ ಒಮ್ಮೆ ಮಾತ್ರ ತೆರೆದಿದ್ದ ನನ್ನ ಬ್ಯಾಗಿನಲ್ಲಿ ಖಂಡಿತಾ ನಾನದನ್ನು ಇಟ್ಟಂತಿಲ್ಲ. ಕಸ್ಟಮ್ಸ್ ಅಧಿಕಾರಿಗಳೆದುರು ಬ್ಯಾಗನ್ನು ತೆರೆಯಬೇಕೆಂದು ಕೊಂಡಿದ್ದೆ. ಅವರು ಅದನ್ನು ತೆರೆದು ತೋರಿಸುವ ಅಗತ್ಯವಿಲ್ಲವೆಂದು ಹಾಗೇ ಕಳಿಸಿದ್ದರು.

ಹಸ್ತಪ್ರತಿ ಕಳೆದುಹೋಗಿದೆ ಅನ್ನಿಸಿತು. ಆದರೆ ಹೇಗೆ? ತಾಯಿ ಮಗಳಿಬ್ಬರೂ ನನ್ನ ಉಪನ್ಯಾಸ ಮುಂದಿನ ದಿನಕ್ಕೆ ಮುಂದೂಡಲ್ಪಟ್ಟಿದೆ ಎಂದು ಹೇಳಿದ್ದರು. ಆದರೆ ಆಗಲಾದರೂ ಏನು ಓದುವುದು? ಬಿಸಿಲಿ ನನಗೆ ಕೋಟು ಹೊದ್ದಿಸುವಾಗ ಬಹುಶಃ ಅದು ನೆಲದ ಮೇಲೆ ಬಿದ್ದಿರಬೇಕೆಂಬ ಒಂದೇ ಒಂದು ಆಸೆಯಿದ್ದಿತು. ಕೆಳಗೆ ಹುಡುಕಲು ಪ್ರಯತ್ನಿಸಿದೆ. ಆದರೆ ಸಣ್ಣ ಚಲನೆಗೂ ಮಂಚ ಜೋರಾಗಿ ಕಿರುಗುಡುತ್ತಿತ್ತು. ಅಲ್ಲದೆ ನಾನು ಏಳಬೇಕೆಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಿರುವಂತೆಯೇ ಮಂಚ ಕಿರುಗುಟ್ಟಲು ಆರಂಭಿಸುತ್ತಿತ್ತು. ಜಡ ವಸ್ತುಗಳು ನಿಜಕ್ಕೂ ಜಡವಾಗಿರುವುದಿಲ್ಲ.

ತಾಯಿ–ಮಗಳಿಬ್ಬರೂ ಎಚ್ಚರವಾಗಿಯೇ ಇದ್ದರು. ಪಿಸುಗುಟ್ಟುವ ಅಸ್ಪಷ್ಟ ಮಾತುಗಳು ಪಕ್ಕದ ರೂಮಿನಿಂದ ಕೇಳಿಸುತ್ತಿತ್ತು. ಅವರು ಯಾವುದೋ ವಿಚಾರದಲ್ಲಿ ವಾದ ಮಾಡುತ್ತಿದ್ದಂತಿತ್ತು. ಆದರೆ ಯಾವ ವಿಚಾರದಲ್ಲಿ?

ಹಸ್ತಪ್ರತಿ ಕಳೆದು ಹೋದದ್ದು ಫ್ರಾಯ್ಡ್‌ನ ಸಿದ್ಧಾಂತಕ್ಕೆ ಅನುಗುಣವಾಗಿಯೇ ಇದೆ ಅನ್ನಿಸಿತು. ಆರಂಭದಿಂದಲೂ ಆ ಪ್ರಬಂಧದ ಬಗ್ಗೆ ನನಗೆ ಸಮಾಧಾನವಿರಲಿಲ್ಲ. ಅದರಲ್ಲಿನ ನನ್ನ ಧಾಟಿ ವಾಗಾಡಂಬರದಿಂದ ಕೂಡಿತ್ತು. ಆದರೂ ಉಪನ್ಯಾಸದ ಸಂಜೆ ಏನು ಮಾತನಾಡುವುದು? ಮೊದಲ ವಾಕ್ಯದಿಂದಲೇ ನನಗೆ ಗೊಂದಲ ಶುರುವಾದರೆ? 'ಪೆರೆಟ್ಜ್ ವಿಚಿತ್ರ ಮನುಷ್ಯ...' ಎಂದು ಆರಂಭಿಸಿ ನಂತರ ಒಂದು ಪದವನ್ನೂ ಹೇಳದೆ ನಿಂತುಬಿಟ್ಟು ಉಪನ್ಯಾಸಕನಂತಾಗಿಬಿಟ್ಟರೆ?

ನಿದ್ದೆ ಮಾಡಿದ್ದರೆ ಎಷ್ಟು ಒಳ್ಳೆಯದಿತ್ತು. ಹಿಂದಿನ ರಾತ್ರಿಯೂ ನಾನು ನಿದ್ದೆ ಮಾಡಿರಲಿಲ್ಲ. ಸಾರ್ವಜನಿಕವಾಗಿ ಕಾಣಿಸಿಕೊಳ್ಳಬೇಕೆಂದಾಗ ಹಿಂದಿನ ಅನೇಕ ರಾತ್ರಿಗಳು ನನಗೆ ನಿದ್ದೆಯೇ ಬರುವುದಿಲ್ಲ. ಹಸ್ತಪ್ರತಿಯು ಕಳೆದುಹೋದದ್ದಂತೂ ಒಂದು ದೊಡ್ಡ ಆಘಾತ. ಬಲವಂತವಾಗಿ ಕಣ್ಣು ಮುಚ್ಚಲು ಯತ್ನಿಸಿದೆ. ಆದರೆ ಅವು ತಮ್ಮಷ್ಟಕ್ಕೆ ತಾವೇ ತೆರೆದುಕೊಳ್ಳುತ್ತಿದ್ದವು. ಏನೋ ಕಚ್ಚಿತು. ಕೆರೆದುಕೊಳ್ಳ ಬೇಕೆಂದು ಅಂದುಕೊಳ್ಳುತ್ತಿರುವಂತೆಯೇ ಮಂಚ ಅಲುಗಿ ರೋಗಿಯೊಬ್ಬ ನೋವಿನಿಂದ ನರಳುವಂತೆ ಕಿರುಗುಟ್ಟತೊಡಗಿತು.

ನಾನು ಎಚ್ಚರವಾಗಿ, ಅಲುಗಾಡದೇ ಹಾಗೇ ಮಲಗಿದ್ದೆ. ಇಲಿಯೊಂದು ಬಿಲದಲ್ಲಿ ಸದ್ದುಮಾಡುತ್ತಿತ್ತು. ಯಾವುದೋ ಮತ್ತೊಂದು ಪ್ರಾಣಿ ಗರಗಸದಂತಹ ತನ್ನ ಹಲ್ಲುಗಳಿಂದ ನೆಲಕ್ಕೆ ಹಾಸಿದ್ದ ಮರವನ್ನು ಕಡಿಯುತ್ತಿತ್ತು. ಇಲಿಯಾಗಿದ್ದರೆ ಇಷ್ಟೊಂದು ಸದ್ದಾಗುತ್ತಿರಲಿಲ್ಲ. ಮಂತ್ರವಾದಿಯೊಬ್ಬ ಕಟ್ಟಡದ ಬುನಾದಿಯನ್ನು ಕತ್ತರಿಸುತ್ತಿರಬಹುದೇ ?...

ಇಲ್ಲಿಯೇ ನನ್ನ ಕೊನೆಗಾಲವೆಂದು ಕಾಣುತ್ತದೆ. ಇಲ್ಲಿಂದ ನಾನು ಜೀವಂತ ಹೋಗಲಾರೆ–ನನಗೆ ನಾನೇ ಹೇಳಿಕೊಂಡೆ.

ಕೈ ಕಾಲುಗಳನ್ನು ಅಲುಗಾಡಿಸದೆ ನಿಶ್ಚೇಷ್ಟಿತನಾಗಿ ಬಿದ್ದುಕೊಂಡಿದ್ದೆ. ಮೂಗು ಕಟ್ಟಿಕೊಂಡಿದ್ದು ತಣ್ಣನೆಯ ಗಾಳಿಯನ್ನು ಬಾಯಿಯ ಮೂಲಕ ಉಸಿರಾಡುತ್ತಿದ್ದೆ. ಗಂಟಲು ಕೆರೆದಂತಾಗಿ ಕೆಮ್ಮಬೇಕೆಂದುಕೊಂಡೆ. ಆದರೆ ಮಲಗಿರುವ ತಾಯಿ–ಮಗಳಿಗೆ ತೊಂದರೆ ಮಾಡಲಿಷ್ಟವಾಗಲಿಲ್ಲ. ಅಲ್ಲದೆ, ಯಾರಿಗೆ ಗೊತ್ತು. ಕೆಮ್ಮಿದರೇ ಮಂಚ ಮುರಿದುಬೀಳಬಹುದು! ಯುದ್ಧ ಸಮಯದಲ್ಲಿ ಹಿಟ್ಲರ್‌ನ ಕ್ಯಾಂಪಿನಲ್ಲಿ ಇದ್ದೇ ನೆಂದುಕೊಂಡು, ಆ ಅನುಭವವನ್ನು ಒಂದಿಷ್ಟು ಪಡೆಯುತ್ತೇನೆ ಅಂದುಕೊಂಡೆ.

ಟ್ರೆಂಬ್ಲಿಕಾ ಅಥವಾ ಮೈಡನೆಕ್‌ನಲ್ಲಿರುವಂತೆ ಕಲ್ಪಿಸಿಕೊಂಡೆ. ಇಡೀ ದಿನ ಕಷ್ಟಪಟ್ಟು ದುಡಿದಿದ್ದೆ. ಒರಟು ನೆಲದ ಮೇಲೆ ಮಲಗಿ ಚಿಂತಿಸುತ್ತಿದ್ದೆ. ನಾಳೆ ಆಯ್ಕೆಯ ದಿನ. ಹುಷಾರಿಲ್ಲದ ನನ್ನನ್ನು ಆಯ್ಕೆ ಮಾಡದಿರಬಹುದು ; ಬದಲಾಗಿ ಸೆರೆಮನೆಗೆ ಕಳಿಸಿದರೂ ಕಳಿಸಬಹುದು. ಮನಸ್ಸಿನಲ್ಲಿಯೇ ನನ್ನ ಆತ್ಮೀಯರಿಗೆ ಬೀಳ್ಕೊಡುಗೆಯ ಕಡೆಯ ವಂದನೆ ಸಲ್ಲಿಸಿದೆ. ಇನ್ನೇನು ಹೊರಡಬೇಕು...ಅಷ್ಟರಲ್ಲಿ ಜೋರಾಗಿ ಯಾರೋ ಕಿರುಚಿದಂತಾಗಿ ಎಚ್ಚರವಾಯಿತು. ಬಿನಿಲಿ ಅಮ್ಮಾ ಅಮ್ಮಾ ಎಂದು ಕೂಗುತ್ತಿದ್ದಳು. ಬಾಗಿಲನ್ನು ಧಡಾರನೆ ತಳ್ಳಿ ಒಳಬಂದು 'ಸಹಾಯ ಮಾಡಿ, ಅಮ್ಮ ಸತ್ತಿದ್ದಾಳೆ' ಎಂದು ಕಿರುಚಿದಳು.

ನಾನು ಮಂಚದಿಂದ ಒಮ್ಮೆಗೇ ನೆಗೆಯಲು ಯತ್ನಿಸಿದೆ. ಆದರೆ ಮಂಚ ಮುರಿದುಬಿತ್ತು. ನೆಗೆದು ಏಳುವ ಬದಲು ನೆಲದಿಂದ ಕಷ್ಟಪಟ್ಟು ಮೇಲೇಳಬೇಕಾ ಯಿತು. 'ಏನಾಯಿತು ?'–ನಾನು ಒಮ್ಮೆಗೇ ಕೇಳಿದೆ.

ಜಿಸಿಲಿ ಗದ್ಗದಿತಳಾಗಿ ಹೇಳುತ್ತಿದ್ದಳು : 'ಅವಳು ತಣ್ಣಗಾಗಿದ್ದಾಳೆ, ಬೆಂಕಿ ಪೊಟ್ಟಣ ಎಲ್ಲಿ ? ಡಾಕ್ಟರನ್ನು ಕರೆದುಕೊಂಡು ಬನ್ನಿರಿ. ದೀಪ ಹಚ್ಚಿರಿ ಓ ಅಮ್ಮಾ ಅಮ್ಮಾ ಅಮ್ಮಾ.'

ನಾನು ಸಿಗರೇಟು ಸೇದುವುದಿಲ್ಲವಾದ್ದರಿಂದ ಬೆಂಕಿಪೊಟ್ಟಣ ನನ್ನ ಬಳಿಯಿರಲಿಲ್ಲ. ನಾನು ರೂಮಿನಿಂದಾಚೆಗೆ ಹೊರಟು ಜಿಸಿಲಿಗೆ ಡಿಕ್ಕಿ ಹೊಡೆದೆ. 'ಡಾಕ್ಟರು ಎಲ್ಲಿದ್ದಾರೆ ? ನಾನು ಹೇಗೆ ಕರೆಯಲಿ ?' ಅವಳನ್ನು ಕೇಳಿದೆ.

ಅವಳು ಉತ್ತರಿಸಲಿಲ್ಲ. ಓಡಿಹೋಗಿ ಮುಂಬಾಗಿಲನ್ನು ತೆರೆದು ಜನರೇ ನನಗೆ ನೆರವಾಗಿ, ಜನರೇ ನೆರವಾಗಿ' ಎಂದು ಪೋಲೆಂಡಿನ ಹಳ್ಳಿ ಹೆಂಗಸರು ಅರಚುವಂತೆ ತನ್ನ ಶಕ್ತಿಮೀರಿ ಕಿರುಚಿದಳು. ಆದರೆ ಯಾರೂ ಉತ್ತರಿಸಲಿಲ್ಲ. ಈ ಅಪರಿಚಿತ ಮನೆಯಲ್ಲಿ ನನಗೆ ಬೆಂಕಿಪೊಟ್ಟಣ ಸಿಗುವುದು ಸಾಧ್ಯವಿಲ್ಲವೆಂದು ಗೊತ್ತಿದ್ದರೂ ಬೆಂಕಿ ಪೊಟ್ಟಣಕ್ಕಾಗಿ ಹುಡುಕಾಡಿದೆ. ಜಿಸಿಲಿ ಹಿಂತಿರುಗಿದಳು. ಕತ್ತಲಿನಲ್ಲಿ ಮತ್ತೆ ಇಬ್ಬರೂ ಡಿಕ್ಕಿ ಹೊಡೆದೆವು. ಅದು ಅನಿರೀಕ್ಷಿತವಾಗಿದ್ದುದರಿಂದ ಅವಳು ಆಯತಪ್ಪಿ ನನ್ನ ಮೇಲೆ ಬಿದ್ದಳು. ಬಿದ್ದವಳೇ ಕಿರುಚಿದಳು : 'ಸಹಾಯ ಮಾಡಿ, ಸಹಾಯ ಮಾಡಿ ! ನನಗೆ ಈ ಜಗತ್ತಿನಲ್ಲಿ ಮತ್ಯಾರೂ ಇಲ್ಲ. ಅವಳೊಬ್ಬಳೇ ನನಗಿದ್ದವಳು.'

ಅವಳ ತೀವ್ರ ದುಃಖ, ಗೋಳಾಟ ನನ್ನನ್ನು ಮೂಕನನ್ನಾಗಿಸಿತು. ನಾನು ಕಂಬದಂತೆ ನಿಂತೆ.

'ಬೆಂಕಿಪೊಟ್ಟಣ ಹುಡುಕು, ದೀಪ ಹತ್ತಿಸು' ನನ್ನ ಮಾತುಗಳು ವ್ಯರ್ಥವೆಂದು ಗೊತ್ತಿದ್ದರೂ ನಾನು ಹೇಳಿದೆ.

'ಡಾಕ್ಟರನ್ನು ಕರೆಯಿರಿ, ಡಾಕ್ಟರನ್ನು ಕರೆಯಿರಿ' ಅವಳು ಹಲುಬುತ್ತಿದ್ದಳು. ಕ್ರಮೇಣ ತನ್ನ ಅಪೇಕ್ಷೆ ಎಷ್ಟೊಂದು ಅರ್ಥಹೀನವಾದುದೆಂಬುದು ಅವಳಿಗೆ ಅರಿವಾಯಿ ತೇನೋ ಎಂಬಂತೆ ಸ್ವಲ್ಪ ಹೊತ್ತು ಸುಮ್ಮನಾದಳು.

ಅವಳು ತೂರಾಡುತ್ತಾ, ನನ್ನನ್ನು ತಳ್ಳಿಕೊಂಡು ಅವಳ ತಾಯಿಯ ಬಳಿ ನಡೆದಳು. ನಾನು ಅವಳ ತಾಯಿಯನ್ನು ಮುಟ್ಟಿ ನೋಡಿದೆ. ಕೈಹಿಡಿದು ನಾಡಿ ಬಡಿತ ಪರೀಕ್ಷಿಸಿದೆ. ನಾಡಿ ನಿಂತಿತ್ತು. ಅವಳ ಕೈ ಅತ್ಯಂತ ಭಾರವಾಗಿದ್ದು, ತನಗೆ ತಾನೇ ಕೆಳಗೆ ಬಿತ್ತು. ಅದು ಮಂಜುಗಡ್ಡೆಯಷ್ಟು ತಣ್ಣಗಿತ್ತು. ನಾನು ಏನು ಮಾಡು ತ್ತಿದ್ದೇನೆಂದು ಜಿಸಿಲಿಗೆ ಅರ್ಥವಾಯಿತೆನ್ನಿಸುತ್ತದೆ. ಅಲ್ಲಿಯವರೆಗೆ ಸುಮ್ಮನಿದ್ದಳು. ನಂತರ, 'ಚೆನ್ನಾಗಿದ್ದಾಳಾ ? ಇಲ್ಲ, ಇಲ್ಲ, ಸತ್ತಿದ್ದಾಳೆ. ಅವಳ ಹೃದಯ ದುರ್ಬಲ ವಾಗಿತ್ತು. ಸಹಾಯ ಮಾಡಿ, ಸಹಾಯ ಮಾಡಿ, ಅಯ್ಯೋ...' ಎಂದು ಮತ್ತೆ ಕಿರುಚ ತೊಡಗಿದಳು.

'ನಾನೇನು ಮಾಡಬಹುದು ಹೇಳು ? ಕತ್ತಲೆಯಲ್ಲಿ ನನಗೆ ಏನೂ ಕಾಣಿಸುತ್ತಿಲ್ಲ' ನಾನು ಜಿಸಿಲಿಗೆ ಹೇಳಿದೆ. ನನ್ನ ಮಾತುಗಳಿಗೆ ಬೇರೊಂದು ಅರ್ಥವೂ ಇದ್ದಂತಿತ್ತು.

'ಸಹಾಯ ಮಾಡಿ, ಸಹಾಯ ಮಾಡಿ, ಅಮ್ಮಾ ಅಮ್ಮಾ...'

'ಇಲ್ಲಿ ಅಕ್ಕಪಕ್ಕದ ಮನೆಯವರಿಲ್ಲವಾ ?'–ಕೇಳಿದೆ.

'ಕುಡುಕನೊಬ್ಬ ಮಹಡಿ ಮೇಲೆ ಇದ್ದಾನೆ.'

'ಅವನಿಂದ ಬೆಂಕಿಪೊಟ್ಟಣ ತರಬಹುದಲ್ಲವೇ ?'

ಬಿನಿಲಿ ಉತ್ತರಿಸಲಿಲ್ಲ. ಎಂತಹ ಚಳಿಯಿದೆ ಎಂಬುದು ಇದ್ದಕ್ಕಿದ್ದಂತೆ ನನ್ನ ಅನುಭವಕ್ಕೆ ಬರತೊಡಗಿತು. ಏನಾದರೂ ಬೆಚ್ಚಗೆ ತೊಡಬೇಕು, ಇಲ್ಲವೇ ನ್ಯೂಮೋನಿಯಾ ಬರಬಹುದು ಅಂದುಕೊಂಡೆ. ನಾನು ನಡುಗುತ್ತಿದ್ದೆ. ಹಲ್ಲುಗಳು ಸದ್ದು ಮಾಡುತ್ತಿದ್ದವು. ನಾನು ಮಲಗಿದ್ದ ರೂಮಿನ ಕಡೆ ಹೊರಟೆ. ಆದರೆ ನಾನು ತಲುಪಿದ್ದು ಅಡಿಗೆ ಮನೆಯನ್ನು. ಅಲ್ಲಿಂದ ಹಿಂತಿರುಗುವಾಗ ಮತ್ತೆ ಬಿನಿಲಿಗೆ ಡಿಕ್ಕಿ ಹೊಡೆದೆ. ಅವಳು ಅರೆನಗ್ನಳಾಗಿದ್ದಳು. ಅನಪೇಕ್ಷಿತವಾಗಿ ನಾನು ಅವಳ ತುಂಬು ಮೊಲೆಯನ್ನು ಮುಟ್ಟಿದ್ದೆ.

'ಏನಾದರೂ ಹೊದ್ಕೊಕೋ, ಇಲ್ಲದಿದ್ದರೆ ಶೀತವಾಗುತ್ತದೆ' ಎಂದೆ.

'ನನಗೆ ಬದುಕಲು ಇಷ್ಟವಿಲ್ಲ. ನಾನೂ ಸಾಯುತ್ತೇನೆ. ಅವಳು ಸ್ಟೇಷನ್‌ಗೆ ಹೋಗುವ ಅಗತ್ಯವಿರಲಿಲ್ಲ. ನಾನು ಅವಳನ್ನು ಬೇಡಿಕೊಂಡೆ. ಆದರೆ ಅವಳು ಕೇಳಲಿಲ್ಲ. ಹಟಮಾಡಿದಳು. ಅವಳಿಗೆ ತಿನ್ನಲು ಏನೂ ಇರಲಿಲ್ಲ. ಒಂದು ಕಪ್ ಟೀ ಸಹ ಕುಡಿದಿರಲಿಲ್ಲ. ನಾನೀಗ ಏನು ಮಾಡಲೀ ? ಅಯ್ಯೋ ಅಮ್ಮ ಅಮ್ಮ...'

ಇದ್ದಕ್ಕಿದ್ದಂತೆ ಮೌನ ಆವರಿಸಿತು. ಬಹುಶಃ ಬಿನಿಲಿ ಕುಡುಕನನ್ನು ಎಚ್ಚರಿಸಲು ಮೇಲೆ ಹೋಗಿರಬೇಕು. ನಾನು ಕತ್ತಲೆಯಲ್ಲಿ ಹೆಣದೊಡನೆ ಏಕಾಕಿ ಉಳಿದೆ. ಚಿಕ್ಕಂದಿನ ಭಯ ನನ್ನನ್ನು ಆಕ್ರಮಿಸತೊಡಗಿತು. ಮನಸ್ಸಿನ ತುಂಬ ವಿಚಿತ್ರ ಭಾವನೆಗಳು. ಹೆಣ ಎದ್ದುಬಂದಂತೆ...ತಣ್ಣನೆಯ ಕೈಗಳಿಂದ ನನ್ನನ್ನು ಹಿಡಿದೆಳೆದು ಅವಳಿರುವೆಡೆಗೆ ಬರಲು ಒತ್ತಾಯಿಸಿದಂತೆ...ಒಂದು ರೀತಿಯಲ್ಲಿ ನಾನವಳ ಸಾವಿಗೆ ಕಾರಣನಾಗಿದ್ದೆ. ನನ್ನನ್ನು ನೋಡಲು ಬಂದ ಆಯಾಸ ಅವಳನ್ನು ಕೊಂದಿತ್ತು. ಹೆದರಿ ಓಡಿಹೋಗಲು ಯತ್ನಿಸಿದೆ. ಕುರ್ಚಿಯನ್ನು ಎಡವಿ ಮೊಣಕಾಲು ನೋವಾಯಿತು. ಮೂಳೆ ಕೈಗಳು ನನ್ನನ್ನು ಹಿಡಿದು ಹಿಂದೆ ತಳ್ಳಿದಂತೆ ಅನ್ನಿಸುತ್ತಿತ್ತು. ಮೌನವನ್ನು ಸೀಳಿಕೊಂಡು ವಿಚಿತ್ರ ಧ್ವನಿ ಹೊರಬರುತ್ತಿತ್ತು. ಕಿವಿಯ ಸುತ್ತ ಏನೋ ಸುತ್ತಿದಂತಾಗಿ ಬಾಯಲ್ಲಿ ನೊರೆಬಂದು ಮೂರ್ಛೆ ಹೋಗುವಂತಾದೆ.

ಆಶ್ಚರ್ಯವೆಂಬಂತೆ ನಾನು ಹೊರಗೆ ಬರುವ ಬದಲು ಮತ್ತೆ ನನ್ನ ರೂಮಿನಲ್ಲಿದ್ದೆ. ಮುರಿದು ಬಿದ್ದ ಮಂಚ ಕಾಲಿಗೆ ಸಿಕ್ಕಿ ಮುಗ್ಗರಿಸಿದೆ. ಕೈಗೆ ಸಿಕ್ಕ ಕೋಟನ್ನು ತೆಗೆದು ಹಾಕಿಕೊಂಡೆ. ಕೋಟು ಮಂಜಿನ ಬ್ಯಾಗಿನಂತೆ ತಣ್ಣಗಿತ್ತು. ಚಳಿಜ್ವರ ಬಂದವರಂತೆ ನಡುಗುತ್ತಿದ್ದೆ. ಹಲ್ಲುಗಳು ಕಟಕಟ ಕಡಿಯುತ್ತಿದ್ದು ಕಾಲು ಸೆಟೆದುಕೊಂಡಿದ್ದುವು. ನಾನು ಆ ಹೆಣದ ಜೊತೆ ಮರಣಾಂತಿಕ ಹೋರಾಟಕ್ಕೆ ಸಿದ್ಧನಾಗಿದ್ದೆ. ಸುತ್ತಿಗೆಯಲ್ಲಿ ಬಡಿದಂತೆ ಹೃದಯ ಜೋರಾಗಿ ಬಡಿಯುತ್ತಿತ್ತು. ಯಾವುದೇ ಹೃದಯವೂ ಈ ರೀತಿಯ ಬಡಿತವನ್ನು ತಾಳಿಕೊಳ್ಳಲಾರದೆನ್ನಿಸಿತು. ಬಿನಿಲಿ ಹಿಂತಿರುಗಿ

ದಾಗ ಒಂದು ಹೆಣಕ್ಕೆ ಬದಲಾಗಿ ಎರಡು ಹೆಣಗಳನ್ನು ನೋಡಬಹುದು ಎಂದು ನಾನು ಯೋಚಿಸಿದೆ.

ಮಾತುಗಳು ಹಾಗೂ ಹೆಜ್ಜೆ ಸಪ್ಪಳದ ಜೊತೆಗೆ ಬೆಳಕು ಕಾಣಿಸಿತು. ಜಿನಿಲಿ ಮಹಡಿ ಮೇಲಿನ ವ್ಯಕ್ತಿಯನ್ನು ಕರೆತಂದಿದ್ದಳು. ನೆರೆಯಾತ ಉರಿಯುತ್ತಿದ್ದ ಮೇಣದ ಬತ್ತಿಯನ್ನು ಕೈಯಲ್ಲಿ ಹಿಡಿದಿದ್ದ. ಆತ ಭಾರಿ ಆಸಾಮಿಯಾಗಿದ್ದು ಕಪ್ಪಗಿದ್ದ. ಮೈತುಂಬ ರೋಮವಿದ್ದು ಮೂಗು ಉದ್ದವಾಗಿತ್ತು. ಬರಿಗಾಲಿನಲ್ಲಿ ಬಂದಿದ್ದ ಆತ ಪೈಜಾಮ ತೊಟ್ಟಿದ್ದ. ಆ ಸ್ಥಿತಿಯಲ್ಲಿಯೂ ನನ್ನ ತೀವ್ರ ಗಮನ ಸೆಳೆದದ್ದು ಆತನ ಭಾರೀ ಪಾದಗಳು. ಅವು ಅತ್ಯಂತ ದೊಡ್ಡದಾಗಿದ್ದುವು. ಅವನು ಬೆಡ್‌ರೂಂ ಕಡೆ ಹೋದಂತೆ ಅವನ ನೆರಳು ಬೆನ್ನ ಹಿಂದೆ ನಾಟ್ಯವಾಡುತ್ತಾ ಕ್ರಮೇಣ ಮೇಲ್ಛಾವಣಿ ಮೇಲೆ ಬಿದ್ದು ಮರೆಯಾಯಿತು.

ಆ ಹೆಂಗಸಿನ ಮುಖ ಈಗ ಸಂಪೂರ್ಣ ಬದಲಾಗಿತ್ತು. ಅವಳ ಬಾಯಿ ವಿಚಿತ್ರವಾಗಿ ಚಿಕ್ಕದಾಗಿತ್ತು. ಅದು ಬಾಯಿ ಅನ್ನಿಸುತ್ತಲೇ ಇರಲಿಲ್ಲ. ಬದಲಾಗಿ ಒಂದು ತೂತಿನಂತೆ ಕಾಣಿಸುತ್ತಿತ್ತು. ಮುಖ ಹಳದಿಮಿಶ್ರಿತ ಮಣ್ಣಿನ ಬಣ್ಣವಿದ್ದು ಸೆಟೆದುಕೊಂಡಿತ್ತು. ಆದರೆ ಅವಳ ಬೆಳ್ಳಿಕೂದಲು ಮಾತ್ರ ಜೀವಂತವಾಗಿತ್ತು. ನೆರೆಯಾತ ಫ್ರೆಂಚ್‌ನಲ್ಲಿ ಏನೋ ಗೊಣಗಿದ. ಬಾಗಿ ಅವಳ ಹಣೆಯನ್ನು ಮುಟ್ಟಿದ. ಅವನು ಬಾಯಿಬಿಡುತ್ತಿದ್ದಂತೆಯೇ ಜಿನಿಲಿ ಮತ್ತೆ ಜೋರಾಗಿ ಅಳಲು ಆರಂಭಿಸಿದಳು. ಅವನು ಅವಳಿಗೆ ಏನೋ ಹೇಳಲು ಪ್ರಯತ್ನಿಸಿದ. ಆದರೆ ಅವನ ಮಾತು ಅವಳಿಗೆ ಅರ್ಥವಾದಂತಿರಲಿಲ್ಲ. ಅವನು ಅವಳ ಭುಜ ಹಿಡಿದು ಅಲ್ಲಾಡಿಸಿ, ಮತ್ತೆ ಏನೋ ಹೇಳಿ, ನನ್ನ ಕೈಗೆ ಮೇಣದ ಬತ್ತಿ ಕೊಟ್ಟು ಹೊರಟುಹೋದ. ನನ್ನ ಕೈ ನಡುಗುತ್ತಿದ್ದು, ಮೇಣದ ಬತ್ತಿಯನ್ನು ಹಿಡಿಯುವುದೂ ಕಷ್ಟವೆನ್ನಿಸುತ್ತಿತ್ತು. ಉರಿ ಎಲ್ಲ ಕಡೆಗೂ ಓಲಾಡಿ ಕಡೆಗೊಮ್ಮೆ ಆರಿಹೋಗುವಂತಾಯಿತು. ಮೇಣದ ಬತ್ತಿಯನ್ನು ಗೋಡೆ ಬೀರುವಿನ ಬಳಿಗೊಯ್ದು, ಸ್ವಲ್ಪ ಮೇಣದ ಹನಿಯನ್ನು ಚೆಲ್ಲಿ ಅದನ್ನು ಅಂಟಿಸಿ ನಿಲ್ಲಿಸಿದೆ.

ಜಿನಿಲಿ ತಲೆ ಪರಚಿಕೊಳ್ಳುತ್ತಾ ಜೋರಾಗಿ ಅಳುತ್ತಿದ್ದಳು. ನಾನು ಸಿಟ್ಟಿನಿಂದ 'ನಿನ್ನ ಅಳುವನ್ನು ನಿಲ್ಲಿಸುತ್ತೀಯೋ, ಇಲ್ಲವೋ' ಎಂದು ಜೋರಾಗಿ ಹೇಳಿದೆ.

ಅವಳು ನನ್ನತ್ತ ನಿಧಾನ ತಿರುಗಿ, ದುರುಗುಟ್ಟಿ ನೋಡಿ ಆಶ್ಚರ್ಯ ಹಾಗೂ ದ್ವೇಷವನ್ನು ಪ್ರಕಟಪಡಿಸುತ್ತ, ಮೆಲ್ಲಗೆ ಹೇಳಿದಳು : 'ನನಗೆ ಈ ಜಗತ್ತಿನಲ್ಲಿ ಅವಳೊಬ್ಬಳೇ ಇದ್ದವಳು.'

'ಹೌದು, ನನಗೆ ಗೊತ್ತು. ಆದರೆ ಅಳುವುದರಿಂದ ಏನೂ ಪ್ರಯೋಜನವಿಲ್ಲ'.

ನನ್ನ ಮಾತುಗಳು ಅವಳನ್ನು ಮುಟ್ಟಿರಬೇಕು. ಅವಳು ಹಾಸಿಗೆಯ ಬಳಿ ಹೋಗಿ, ಮೌನವಾಗಿ ನಿಂತು ತನ್ನ ತಾಯಿಯನ್ನೇ ನೋಡುತ್ತಿದ್ದಳು. ನಾನು ಅವಳಿ

ಗೆದುರಾಗಿ ಆ ಬದಿಗೆ ನಿಂತೆ. ನನಗೆ ಚೆನ್ನಾಗಿ ನೆನಪಿದೆ-ಆ ಹೆಂಗಸಿಗಿದ್ದುದು ಗಿಡ್ಡ ಮೂಗು. ಆದರೆ ಈಗ ಅದು ಉದ್ದ ಬೆಳೆವಂತೆ ಅನ್ನಿಸುತ್ತಿತ್ತು. ಅವಳ ಹಣೆ ಹಾಗೂ ಹುಬ್ಬುಗಳು ಹೊಸ ರೂಪ ತಳೆದಿದ್ದು, ಗಂಡಸಿನಂತೆ ಕಾಣುತ್ತಿದ್ದವು ಬಿನಿಲಿಗೆ ಈಗ ದುಃಖಕ್ಕಿಂತ ಹೆಚ್ಚಾಗಿ ದಿಗ್ಭ್ರಮೆಯಾಗಿತ್ತು. ತನ್ನ ತಾಯಿಯನ್ನು ಗುರುತು ಹಿಡಿಯದವಳಂತೆ ತೆರೆದ ಕಣ್ಣುಗಳಿಂದ ಅವಳನ್ನೇ ದಿಟ್ಟಿಸಿ ನೋಡು ತ್ತಿದ್ದಳು.

ನಾನು ಕಿಟಕಿಯತ್ತ ನೋಡಿದೆ. ರಾತ್ರಿ, ಚಳಿಗಾಲದ ದೀರ್ಘ ರಾತ್ರಿ ಸಹ, ಎಷ್ಟು ಹೊತ್ತಿನವರೆಗಿದ್ದೀತು ? ಸೂರ್ಯ ಮೂಡುವುದೇ ಇಲ್ಲವೇ ? ಕಿಟಕಿ ಬಾಗಿಲುಗಳ ಮೇಲೆ ನಿಧಾನ ಬೆಳಕು ಹಬ್ಬುತ್ತಿತ್ತು.

ನಾನು ಕಿಟಕಿಯ ಬಳಿ ಹೋಗಿ ಮುಸುಕಿದ್ದ ಮಂಜನ್ನು ಒರೆಸಿದೆ. ಹೊರಗಿನ ಕತ್ತಲು ಮುಂಜಾನೆಯ ಹೊಂಬೆಳಕಿನಲ್ಲಿ ಆಗಲೇ ಕರಗಿ ಹೋಗುತ್ತಿತ್ತು. ಬೀದಿಯ ಸ್ವರೂಪ ಅಸ್ಪಷ್ಟವಾಗಿ ಕಾಣತೊಡಗಿತು–ಹಿಮದ ರಾಶಿ, ಚಿಕ್ಕ ಚಿಕ್ಕ ಮನೆಗಳು, ದೂರದಲ್ಲಿ ಮಸೆಯ ಚಾವಣಿಗಳು....ಬೀದಿದೀಪ ಮಿನುಗುತ್ತಿತ್ತು. ಆದರೆ ಅದರಿಂದ ಬೆಳಕು ಬರುತ್ತಿತ್ತು. ನಾನು ಆಕಾಶದತ್ತ ನೋಡಿದೆ. ಪಶ್ಚಿಮ ದಿಕ್ಕಿನಲ್ಲಿ ಇನ್ನೂ ನಕ್ಷತ್ರಗಳಿದ್ದುವು. ಆದರೆ ಮೂಡಣದ ಬಾನು ಕೆಂಪಾಗತೊಡಗಿತ್ತು. ಕೆಲವು ಕ್ಷಣ ನಾನು ನಡೆದ ಎಲ್ಲವನ್ನೂ ಮರೆತು ಹೊಸ ದಿನದ ಹುಟ್ಟಿನಲ್ಲಿ ಸಂಪೂರ್ಣ ಮಗ್ನನಾದೆ. ನಕ್ಷತ್ರಗಳು ಒಂದಾದ ನಂತರ ಮತ್ತೊಂದು ಮರೆಯಾಗುತ್ತಿದ್ದವು. ಮಗು ಬರೆದ ಚಿತ್ರದಂತೆ ಕೆಂಪು ಹಳದಿ ಗುಲಾಬಿ ಬಣ್ಣದ ಬೆಳಕಿನ ಕಿರಣಗಳು ಆಕಾಶವನ್ನು ವ್ಯಾಪಿಸಿದವು.

'ನಾನೀಗ ಏನು ಮಾಡಲಿ ? ನಾನೀಗ ಏನು ಮಾಡಲಿ ?' ಬಿನಿಲಿ ಮತ್ತೆ ಅಳಲು ಆರಂಭಿಸಿದಳು. 'ಯಾರನ್ನು ಕರೆಯಲಿ ? ಎಲ್ಲಿಗೆ ಹೋಗಲಿ ? ಡಾಕ್ಟರನ್ನು ಕರೆಯಿರಿ, ಡಾಕ್ಟರನ್ನು ಕರೆಯಿರಿ.' ಅವಳ ಅಳು ತಾರಕ್ಕೇರಿತು.

'ಡಾಕ್ಟರು ಬಂದು ಏನು ಮಾಡಬಹುದು ?' ಅವಳತ್ತ ತಿರುಗಿ ಕೇಳಿದೆ.

'ಹಾಗಾದರೆ ಬೇರೆ ಯಾರನ್ನಾದರೂ ಕರೆಯಿರಿ.'

'ನಿನಗೆ ಯಾರೂ ಸಂಬಂಧಿಗಳಿಲ್ಲವೇ ?'

'ಯಾರೂ ಇಲ್ಲ, ಈ ಜಗತ್ತಿನಲ್ಲಿ ನನಗೆ ಬೇರೆ ಯಾರೂ ಇಲ್ಲ.'

'ನಿಮ್ಮ ಉಪನ್ಯಾಸ ಸಂಘದವರೆಲ್ಲಿ ?'

'ಅವರು ಹತ್ತಿರದಲ್ಲಿಲ್ಲ.'

ನಾನು ರೂಮಿಗೆ ಹೋಗಿ ಬಟ್ಟೆ ಹಾಕಿಕೊಂಡೆ. ನನ್ನ ಬಟ್ಟೆಗಳೂ ಹಿಮದಿಂದ ತೊಯ್ದು ಹೋಗಿದ್ದವು. ಬರುವಾಗ ಇಸ್ತ್ರಿ ಮಾಡಿಸಿಕೊಂಡು ಬಂದಿದ್ದ ನನ್ನ ಸೂಟ್ ಮುದ್ದೆಯಾಗಿತ್ತು. ನನ್ನ ಶೂಗಳು ತಮ್ಮ ರೂಪ ಕಳೆದುಕೊಂಡಿದ್ದವು. ಕನ್ನಡಿಯಲ್ಲಿ ನನ್ನ ಪ್ರತಿಬಿಂಬ ನೋಡಿ ಆಘಾತಗೊಂಡೆ. ಪೇಲವನಾಗಿ ಸುಕ್ಕುಗಟ್ಟಿದ್ದ

ಪ್ರೇತಕಳೆಯ ಮುಖ, ನನ್ನದು ಅನ್ನಿಸಲೇ ಇಲ್ಲ. ಹೊರಗಡೆ ಅಸಾಧ್ಯ ಹಿಮ ಬೀಳುತ್ತಿತ್ತು.

'ನಾನೀಗ ನಿನಗೆ ಯಾವ ರೀತಿ ಸಹಾಯ ಮಾಡಬಹುದು ಹೇಳು ? ನಾನಿಲ್ಲಿಗೆ ಅಪರಿಚಿತ. ನನಗೆ ಎಲ್ಲಿಗೆ ಹೋಗಬೇಕೆಂದೂ ಗೊತ್ತಿಲ್ಲ' – ನಾನು ಬಿನಿಲಿಯನ್ನು ಕೇಳಿದೆ.

'ಅಯ್ಯೋ ದೇವರೇ ! ನನ್ನಿಂದ ನಿಮಗೆಂಥ ಕಷ್ಟ ! ನನ್ನ ದುರದೃಷ್ಟಕ್ಕೆ ನೀವು ಗುರಿಯಾಗಬೇಕಾಯಿತು. ನಾನೇ ಹೊರಗೆ ಹೋಗಿ ಪೋಲೀಸರಿಗೆ ಫೋನ್ ಮಾಡಬಹುದು. ಆದರೆ ನನ್ನ ತಾಯಿಯೊಬ್ಬಳನ್ನೇ ಹೇಗೆ ಬಿಟ್ಟು ಹೋಗಲಿ ?'

'ನಾನು ಇಲ್ಲಿರುತ್ತೇನೆ.'

'ನೀವು !' ಅವಳು ನಿಮ್ಮನ್ನು ತುಂಬಾ ಇಷ್ಟಪಟ್ಟಿದ್ದಳು. ನೆನ್ನೆಯಿಡೀ ನಿಮ್ಮ ಬಗ್ಗೆಯೇ ಮಾತನಾಡುತ್ತಿದ್ದಳು. ಇಡೀ ದಿನ ಅವಳು ಮಾತನಾಡುವುದನ್ನು ನಿಲ್ಲಿಸಲೇ ಇಲ್ಲ.'

ನಾನು ಕುರ್ಚಿಯಲ್ಲಿ ಕುಳಿತು ಸತ್ತ ಹೆಂಗಸಿನತ್ತ ನೋಡದೆ ದೂರ ನೋಡುತ್ತಿದ್ದೆ. ಬಿನಿಲಿ ತನ್ನ ಉಡುಪು ಹಾಕಿಕೊಂಡಳು. ಸಾಮಾನ್ಯವಾಗಿ ಹೆಣದೊಡನೆ ಒಬ್ಬನೇ ಇರಲು ನನಗೆ ತುಂಬಾ ಭಯ. ಆದರೆ ಆಗ ನಾನು ಒಂದು ರೀತಿಯ ಮಂಪರು ಸ್ಥಿತಿಯಲ್ಲಿದ್ದೆ. ಆ ಭಯಂಕರ ರಾತ್ರಿ ನನ್ನನ್ನು ತೀರಾ ಸುಸ್ತಾಗಿಸಿತ್ತು. ಹತಾಶ ಭಾವನೆ ಆವರಿಸಿತ್ತು. ಅನೇಕ ದಿನಗಳ ನಂತರ ನಾನು ಇಂತಹ ದಾರುಣ ದುರಂತವನ್ನು ನೋಡುತ್ತಿದ್ದೆ. ನನ್ನ ಅಮೇರಿಕಾ ವಾಸದ ಎಲ್ಲ ನೆನಪನ್ನೂ ಈ ಒಂದು ರಾತ್ರಿ ಅಳಿಸಿಹಾಕಿ ಪೋಲೆಂಡಿನ ಬಿಕ್ಕಟ್ಟಿನ ದಿನಗಳು ನನ್ನ ಮನದಲ್ಲಿ ಮತ್ತೆ ಸ್ಥಾಯಿಯಾಗಿ ನೆಲಸಿತು. ಹೊರಬಾಗಿಲು ಹಾಕಿಕೊಂಡ ಸದ್ದಾಯಿತು. ಬಿನಿಲಿ ಹೋದಳು. ಸತ್ತ ಹೆಂಗಸಿನ ಜೊತೆ ನನಗೆ ಹೆಚ್ಚು ಹೊತ್ತು ಕುಳಿತುಕೊಳ್ಳಲಾಗಲಿಲ್ಲ. ನಾನು ಅಡುಗೆ ಮನೆಗೆ ಹೋದೆ. ಮಹಡಿಗೆ ಹೋಗುವ ಮೆಟ್ಟಿಲ ಬಳಿ ಬಂದೆ. ಚಿಕ್ಕಂದಿನಲ್ಲಿ ನನ್ನ ಭಯಕ್ಕೆ ಕಾರಣವಾಗಿದ್ದ ತಂತ್ರಗಳನ್ನು ಈ ಹೆಣ ಈಗ ಮಾಡಲು ತೊಡಗಿದರೆ ಏನು ಮಾಡುವುದು ? ತಪ್ಪಿಸಿಕೊಂಡು ಹೋಗಲು ಸಿದ್ಧನಾಗಿ ಬಾಗಿಲ ಬಳಿ ಬಂದು ನಿಂತೆ. ಇಂತಹ ಒಳ್ಳೆಯ ಹೆಂಗಸು. ಅಂಗವಿಕಲ ಹೆಂಗಸು, ಬದುಕಿದ್ದಾಗ ನನ್ನನ್ನು ತೀವ್ರವಾಗಿ ಪ್ರೀತಿಸಿದ ಹೆಂಗಸು – ಈಗ ಏನಾದರೂ ತೊಂದರೆ ಮಾಡಿಯಾಳು ಎಂದು ಯೋಚಿಸುವುದೇ ಮೂರ್ಖತನವೆನ್ನಿಸಿತು. ಆದರೆ ಚಿಕ್ಕಂದಿನ ಎಲ್ಲ ನೆನಪೂ ಮರುಕಳಿಸಿ ಭಯ ಆವರಿಸಿತ್ತು. ಹಿಮದ ಕೈಯೊಂದು ನೇವರಿಸಿದಂತಾಗಿ ನನ್ನ ಇಡೀ ಮೈ ತಣ್ಣಗಾಯಿತು. ಗಡಿಯಾರದ ಮುರಿದ ಸ್ಪ್ರಿಂಗ್‌ನಂತೆ ನನ್ನ ಹೃದಯದ ಬಡಿತವಿತ್ತು. ನನ್ನೊಳಗಿನ ಚೈತನ್ಯ ಸಂಪೂರ್ಣ ಕುಗ್ಗಿದಂತಾಗಿತ್ತು. ಒಂದು ಸಣ್ಣ ಶಬ್ದ ಸಹ ನನಗೆ ಭಯಂಕರ ಆಘಾತವನ್ನುಂಟುಮಾಡಬಹುದಾಗಿತ್ತು. ಹೊರಬಾಗಿಲಿಗೆ ಗಾಜಿದ್ದು ಅದರ ಮೇಲೆ ಮಂಜು ಮುಸುಕಿತ್ತು. ಹೊರಗಿನ ನೋಟ

ಅಸ್ಪಷ್ಟವಾಗಿತ್ತು. ತಣ್ಣನೆಯ ಗಾಳಿ ಬಾಗಿಲಿನ ಸಂದಿಯಿಂದ ತೂರಿಬರುತ್ತಿತ್ತು. ಇದ್ದಕ್ಕಿದ್ದಂತೆ ಹೆಜ್ಜೆ ಸಪ್ಪಳ ಕೇಳಿಸಿತು. ಹೆಣವೇ ? ನಾನು ಓಡಬಯಸಿದೆ. ಆದರೆ ಹೆಜ್ಜೆಸಪ್ಪಳ ಮಹಡಿಯ ಕಡೆಯಿಂದ ಬರುತ್ತಿದೆ ಎಂಬ ಅರಿವಾಗಿ ಅಲ್ಲಿಯೇ ನಿಂತೆ. ನೆರೆಯಾತ ಕೆಳಗಿಳಿದು ಬರುತ್ತಿದ್ದ. ರಬ್ಬರ್ ಶೂ ಧರಿಸಿ, ದೊಡ್ಡ ಕೋಟು ಹಾಕಿಕೊಂಡು, ಕೈಯಲ್ಲಿ ಊಟದ ಡಬ್ಬಿ ಹಿಡಿದ ಆತ ತನ್ನ ಕೆಲಸಕ್ಕೆ ಹೊರಟಿದ್ದ. ನನ್ನತ್ತ ಅವನು ಕುತೂಹಲದಿಂದ ನೋಡಿ, ಕೆನಡಾ ಫ್ರೆಂಚ್ ಭಾಷೆಯಲ್ಲಿ ಏನೋ ಹೇಳಿದ. ಆ ಹೊತ್ತಿನಲ್ಲಿ ಮತ್ತೊಂದು ಜೀವದೊಂದಿಗೆ ಕೆಲವು ಕ್ಷಣಗಳಾದರೂ ಇರುವುದು ಅತ್ಯಂತ ಹಿತಕರವಾಗಿತ್ತು. ನಾನು ಕೈಬಾಯಿ ಆಡಿಸುತ್ತಾ ಅವನಿಗೆ ಇಂಗ್ಲೀಷಿನಲ್ಲಿ ಉತ್ತರಿಸಿದೆ. ನಾನು ಗಮನವಿಟ್ಟು ಕೇಳಿದರೆ ಅರ್ಥಮಾಡಿಕೊಳ್ಳಬಹುದೆಂಬ ನಂಬಿಕೆಯಿಂದ ಆತ ಮತ್ತೆ ಮತ್ತೆ ತನ್ನ ಭಾಷೆಯಲ್ಲಿ ಏನೋ ಹೇಳುತ್ತಿದ್ದ. ನಂತರ ಹತಾಶನಾದಂತೆ ಕೈಚೆಲ್ಲಿ ಹೊರಹೊರಟು ಬಾಗಿಲನ್ನು ದಢಾರನೆ ಹಾಕಿಕೊಂಡ. ನಾನೀಗ ಇಡೀ ಮನೆಯಲ್ಲಿ ಒಬ್ಬನೇ ಇದ್ದೆ.

ಬಿನಿಲಿ ಹಿಂತಿರುಗದಿದ್ದರೆ ಏನು ಮಾಡುವುದು ? ಅವಳು ಓಡಿಹೋಗಿರಬಹುದೆಂಬ ಕಲ್ಪನೆಯೊಂದಿಗೆ ನಾನು ಆಟವಾಡತೊಡಗಿದೆ. ಅಕಸ್ಮಾತ್ ನಾನು ಕೊಲೆ ಮಾಡಿರಬಹುದೆಂಬ ಸಂಶಯಕ್ಕೊಳಗಾದರೆ ? ಈ ಜಗತ್ತಿನಲ್ಲಿ ಎಲ್ಲವೂ ಸಾಧ್ಯ. ನಾನು ಕಣ್ಣುಗಳನ್ನು ಹೊರಬಾಗಿಲಿನಲ್ಲಿಯೇ ನೆಟ್ಟು ಎದ್ದುನಿಂತೆ. ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ನ್ಯೂಯಾರ್ಕಿಗೆ ಹೊರಟುಹೋಗಬೇಕು. ನನ್ನ ಮನೆ, ನನ್ನ ಕೆಲಸ ಎಲ್ಲಕ್ಕೂ ಅಸ್ತಿತ್ವವಿಲ್ಲದಂತಾಗಿ, ಅವೆಲ್ಲವೂ ಹಿಂದಿನ ಜನ್ಮದ ನೆನಪುಗಳಂತೆ ಅನ್ನಿಸತೊಡಗಿತು. ನ್ಯೂಯಾರ್ಕಿನ ನನ್ನ ಇಡೀ ಬದುಕು ಒಂದು ಭ್ರಮೆಯಿರಬಹುದೇ ? ನಾನು ನನ್ನ ಜೇಬನ್ನು ಹುಡುಕತೊಡಗಿದೆ. ನನ್ನ ಉಪನ್ಯಾಸದ ಹಸ್ತಪ್ರತಿಯ ಜೊತೆಗೆ ಪೌರಸೂಚಕ ಪತ್ರವನ್ನೂ ಕಳೆದುಕೊಂಡುಬಿಟ್ಟೆನೇ ? ಮತ್ತೊಮ್ಮೆ ಹುಡುಕಾಡತೊಡಗಿದೆ. ಒಂದು ದಪ್ಪಕಾಗದ ಸಿಕ್ಕಿತು. ಸದ್ಯ ! ಪೌರಸೂಚಕಪತ್ರ ಇದೆ. ನಾನು ಅಮೇರಿಕಾ ನಿವಾಸಿಯೆಂಬುದಕ್ಕೆ ಆಧಾರ ಸಿಕ್ಕಂತಾಯಿತು. ನನ್ನ ಭಾವಚಿತ್ರ ಇದರಲ್ಲಿದೆ. ನನ್ನ ಸಹಿ ಸಹ ಇವೆ. ಸರಕಾರದ ಮುದ್ರೆಯೂ ಇದೆ. ಇವೆಲ್ಲ ನಿರ್ಜೀವ ವಸ್ತುಗಳಾದರೂ ಜೀವಂತ, ಭಾವನಾತ್ಮಕ ಸಂಬಂಧ ಸೃಷ್ಟಿಯಾಗುತ್ತಿದೆ. ನಾನು ಬಾಗಿಲಿನಲ್ಲಿ ನಿಂತು ಮೊದಲ ಬಾರಿಗೆಂಬಂತೆ ನಾನು ಅಮೇರಿಕಾಯೆಂಬ ಆ ಪತ್ರವನ್ನು ವಿವರವಾಗಿ ಸಂಪೂರ್ಣ ಓದಿದೆ. ಆ ಕ್ಷಣಕ್ಕೆ ನಾನು ಸತ್ತ ಆ ಹೆಂಗಸನ್ನು ಪೂರ್ಣವಾಗಿ ಮರೆತುಬಿಟ್ಟಿದ್ದೆ. ಹೊರಬಾಗಿಲು ತೆರೆಯಿತು. ಮಂಜಿನಿಂದ ತೊಯ್ದಿದ್ದ ಬಿನಿಲಿ ಕಾಣಿಸಿಕೊಂಡಳು. ನೆನ್ನೆ ಅವರ ತಾಯಿ ಹೊದ್ದಿದ್ದ ಅದೇ ಶಾಲನ್ನು ಈಗ ಅವಳು ಹೊದ್ದಿದ್ದಳು.

'ನನಗೆ ದೂರವಾಣಿ ಸಿಗಲಿಲ್ಲ.'

ಬಿನಿಲಿ ಮತ್ತೆ ಅಳಲು ಪ್ರಾರಂಭಿಸಿದಳು. ನನ್ನ ಪೌರಸೂಚಕ ಪತ್ರವನ್ನು ನಾನು

ಜೇಬಿಗಿರಿಸಿ ಅವಳ ಬಳಿ ಹೋದೆ. ಬದುಕು ಈಗ ಅರ್ಥಪೂರ್ಣವೆನ್ನಿಸತೊಡಗಿತ್ತು. ದೀರ್ಘವಾದ ಆ ಭಯಾನಕ ವಾತಾವರಣ ಮುಗಿದು ಬದುಕು ಜೀವ ತುಂಬಿಕೊಂಡಿತ್ತು. ನಾನು ತೋಳುಗಳಿಂದ ಬಿಸಿಲಿಯನ್ನು ಬಳಸಿದೆ. ಅವಳು ಪ್ರತಿಭಟಿಸಲಿಲ್ಲ. ಅವಳ ಮೈಮೇಲಿನ ಮಂಜು ನನ್ನನ್ನೂ ತೊಯ್ಯಿಸಿತು. ನಾವು ಮೆಟ್ಟಿಲುಗಳ ಬಳಿ ಪರಸ್ಪರ ಅಪ್ಪಿಕೊಂಡು ನಿಂತಿದ್ದೆವು. ನಾನು ಆ ಕ್ಷಣದಲ್ಲಿ ಖ್ಯಾತ ಇಂಗ್ಲಿಷ್ ಲೇಖಕ, ಉಪನ್ಯಾಸಕ ಯಾರೂ ಆಗಿರಲಿಲ್ಲ. ಅವಳ ಮುಂಗೈ ಮೇಲಿನ ಹಚ್ಚೆಯನ್ನು ನೋಡುತ್ತಾ ಹೇಳಿದೆ: 'ಬಿಸಿಲಿ, ನಿನ್ನ ತಾಯಿಯ ಆತ್ಮಸಾಕ್ಷಿಯಾಗಿಯೂ ನಾನು ನಿನ್ನನ್ನು ಕೈಬಿಡುವುದಿಲ್ಲ.'

ನನ್ನ ತೋಳುಗಳ ನಡುವೆ ಬಿಸಿಲಿ ಸಂಪೂರ್ಣ ಬಂಧಿಯಾಗಿದ್ದಳು. ನನ್ನೊಳಗೆ ಲೀನವಾದಂತಿದ್ದ ಅವಳು ನಿಧಾನವಾಗಿ ಕಣ್ಣುಗಳನ್ನು ಮೇಲೆತ್ತಿ ಪಿಸುಗುಟ್ಟಿದಳು : 'ಅವಳು ಹೀಗೇಕೆ ಮಾಡಿದಳು ? ನೀನು ಬರುವ ಕ್ಷಣವನ್ನೇ ಕಾದಿದ್ದಂತೆ....'

('ಸಿಂಗರನ ಕಥೆಗಳು' ಸಂಗ್ರಹದಿಂದ)

# ಸ್ನೇಹ

ಮೂಲ ಹೀಬ್ರೂ : ಸ್ಯಾಮ್ಯುಯೆಲ್ ಜೋಸೆಫ್ ಅಗ್ನಾನ್
ಅನು : ಎಸ್. ದಿವಾಕರ

[ಹೀಬ್ರೂ ಭಾಷೆಯಲ್ಲಿ ಈ ಶತಮಾನದ ಶ್ರೇಷ್ಠ ಲೇಖಕನೆನಿಸಿದ ಸ್ಯಾಮ್ಯುಯೆಲ್ ಜೋಸೆಫ್ ಅಗ್ನಾನ್ (1888-1970) ಇಸ್ರೇಲ್ ದೇಶದವನು. ಪೋಲಿಷ್ ಪ್ರಾಂತ್ಯದ ಗ್ಯಾಲಿಸಿಯಾ ಎಂಬಲ್ಲಿ ಹುಟ್ಟಿದ ಇವನು ತನ್ನ ಹದಿನೆಂಟನೆಯ ವಯಸ್ಸಿನಲ್ಲಿ ಪ್ಯಾಲೆಸ್ಟೈನಿಗೆ ಹೋಗಿ ನೆಲೆಸಿದ. ಇವನ ಆರಂಭದ ಕತೆಗಳು ಈಗ ನಿರ್ನಾಮವಾಗಿರುವ ಪೂರ್ವ ಯುರೋಪಿನ 'ಷ್ಟೆಟ್ಲ್' ಎಂಬ ಹಳ್ಳಿಯ ಜೀವನ ವಿಧಾನವನ್ನು ಕಣ್ಣಿಗೆ ಕಟ್ಟುವಂತೆ ನಿರೂಪಿಸಿದುವು. ನಂತರ ತನ್ನ ದೇಶ ಬಾಂಧವರ ಜಾನಪದ ಸಾಹಿತ್ಯದಿಂದ ಪ್ರಭಾವಿತನಾಗಿ ಬರೆದ ಕೃತಿಗಳಲ್ಲಿ ವಸ್ತು, ಹಿನ್ನೆಲೆ, ಪಾತ್ರಗಳು–ಇವೆಲ್ಲ ಬಾಲ್ಯ ಕಾಲವನ್ನೇ ಪ್ರತಿನಿಧಿಸಿದರೂ, ಬರವಣಿಗೆಯ ಶೈಲಿ, ಧಾಟಿ ತೀರ ಆಧುನಿಕವೆನಿಸುವಂಥದ್ದು. "ದಿ ಬ್ರೈಡಲ್ ಕಾನೊಪಿ" (1913), "ಎ ಗೆಸ್ಟ್ ಫಾರ್ ದಿ ನೈಟ್" (1937), "ಒನ್ಲಿ ಯಸ್ಟರ್ ಡೇ" ಶ್ರೇಷ್ಠ ಕಾದಂಬರಿಗಳು. ಜೊತೆಗೆ ಸುಮಾರು ಆರು ಸಂಪುಟಗಳ ಸಮಗ್ರ ಕತೆಗಳು ಪ್ರಕಟವಾಗಿವೆ. ಅಗ್ನಾನ್ ಅನೇಕ ಕವನಗಳನ್ನೂ ಬರೆದ. ಆಧುನಿಕ ಹೀಬ್ರೂ ಸಾಹಿತ್ಯದ ಮೇಲೆ ಇವನು ಬೀರಿರುವ ಪ್ರಭಾವ ಅಷ್ಟಿಷ್ಟಲ್ಲ. 1966ರಲ್ಲಿ ಜರ್ಮನ್ ಕವಯಿತ್ರಿ ನೆಲ್ಲಿ ಸ್ಯಾಜ್ ಜೊತೆ ನೊಬೆಲ್ ಪ್ರಶಸ್ತಿ ಹಂಚಿಕೊಂಡ.]

ನನ್ನ ಹೆಂಡತಿ ಅದೇ ತಾನೆ ಪ್ರವಾಸ ಮುಗಿಸಿಕೊಂಡು ಬಂದಿದ್ದಳು. ಅಂದಮೇಲೆ ನನ್ನ ಸಂತೋಷಕ್ಕೆ ಎಲ್ಲೆಯೆಲ್ಲಿ? ಆದರೆ ಈ ಸಂದರ್ಭದಲ್ಲಿ ನೆರೆಹೊರೆಯವರು ಯಾರಾದರೂ ಬಂದು ನಮಗೆ ತೊಂದರೆಕೊಟ್ಟರೇನು ಮಾಡುವುದು ? ಯಾಕೋ ಇಂಥ ಸಂತೋಷದ ವಾತಾವರಣದಲ್ಲೂ ಒಂದು ಬಗೆಯ ನಿರಾಶೆಯಾಯಿತು. ನಾನು "ಅವನ ಮನೆಗೋ ಇಲ್ಲ, ಇವಳ ಮನೆಗೋ ಹೋಗಿ ಬರೋಣ" ಎಂದು ಹೆಂಡತಿಗೆ ಹೇಳತೊಡಗಿದೆ. "ಅವರೇ ಯಾರಾದರೂ ನಮ್ಮಲ್ಲಿಗೆ ಬಂದುಬಿಟ್ಟರೆ ಬೇಗ ಹೋಗೋಲ್ಲ. ನಾವೇ ಅವರಲ್ಲಿಗೆ ಹೋದರೆ ನಮಗೆ ಯಾವಾಗ ಏಳಬೇಕೆನಿಸುತ್ತದೋ ಆಗ ಮೇಲೆದ್ದು ಮನೆಗೆ ಬಂದುಬಿಡಬಹುದು" ಎಂದೆ.

ಸರಿ, ನಾವು ಒಂದಿಷ್ಟೂ ತಡಮಾಡದೆ ಮಿಸೆಸ್ ಕ್ಲಿಂಗೆಲ್ಲಳ ಮನೆಯ ಕಡೆ ಹೊರಟೆವು. ಮಿಸೆಸ್ ಕ್ಲಿಂಗೆಲ್ ನಮ್ಮಲ್ಲಿಗೆ ಆಗಾಗ ಬಂದು ಹೋಗುವ ರೂಢಿಯಿದ್ದುದರಿಂದ, ಮೊದಲು ಅವಳ ಮನೆಗೇ ಹೋಗುವುದೆಂದು ತೀರ್ಮಾನಿಸಿದೆವು.

ಮಿಸೆಸ್ ಕ್ಲಿಂಗೆಲ್ ಒಂದು ರೀತಿ ಹೆಸರು ಮಾಡಿದ ಹೆಂಗಸು : ಯುದ್ಧಕ್ಕೆ ಮೊದಲು ಒಂದು ಶಾಲೆಯ ಪ್ರಿನ್ಸಿಪಾಲ್ ಆಗಿದ್ದವಳು. ಆದರೆ ಯುದ್ಧದ ನಂತರ ಇಡೀ ಜಗತ್ತೇ ತಲೆಕೆಳಗಾದಾಗ ಆಕೆ ತನ್ನ ದೊಡ್ಡ ಹುದ್ದೆಯನ್ನು ಬಿಟ್ಟುಕೊಟ್ಟು ಒಬ್ಬ ಸಾಮಾನ್ಯ ಶಿಕ್ಷಕಿಯಾಗಬೇಕಾಯಿತು. ಆದರೂ ಮೊದಲಿನ ಪ್ರತಿಷ್ಠೆಯೇನೂ ಹೋಗಿರಲಿಲ್ಲ; ಜನರ ಜೊತೆ ಅವಳು ಮಾತಾಡುತ್ತಿದ್ದುದೇ ಏನನ್ನೋ ಅನುಗ್ರಹಿಸುತ್ತಿರುವಂತಹ ಧಾಟಿಯಲ್ಲಿ. ಯಾವನಾದರೂ ಒಬ್ಬ ಪ್ರಸಿದ್ಧನಾದ ಎಂದರೆ ಮುಗಿಯಿತು, ಅವಳು ತಕ್ಷಣ ಪರಿಚಯ ಮಾಡಿಕೊಂಡು ಅವನ ಮನೆಗೆ ಆಗಾಗ ಹೋಗಿ ಬರುತ್ತಿದ್ದಳು. ಪ್ರಿನ್ಸಿಪಾಲ್ ಆಗಿದ್ದಾಗಲೇ ನನ್ನವಳಿಗೆ ಅವಳ ಪರಿಚಯವಿತ್ತು. ಮತ್ತೆ ಮಿಸೆಸ್ ಕ್ಲಿಂಗೆಲ್ ತನ್ನ ಆ ಕಾಲದ ಸ್ನೇಹಿತರು ಯಾರು ಸಿಕ್ಕಿದರೂ ಬಡಪೆಟ್ಟಿಗೆ ಬಿಡುತ್ತಿರಲಿಲ್ಲ. ನನ್ನ ಹೆಂಡತಿ ಸಿಕ್ಕಿದರೂ ಅಷ್ಟೆ : ತುಂಬಾ ಸ್ನೇಹ, ಸಲಿಗೆ. ನನ್ನವಳ ಮೊದಲ ಹೆಸರು ಹಿಡಿದೇ ಕರೆಯುತ್ತಿದ್ದುದು. ಇನ್ನೂ ಪ್ರಾಯದಲ್ಲಿದ್ದಾಗ ನಾನೂ ಅವಳನ್ನು ನೋಡಿದ್ದೆ : ಆದರೆ ಮಾತಾಡಿಸಿದ ನೆನಪಿಲ್ಲ. ಯುದ್ಧಕ್ಕೆ ಮೊದಲು ಜನ ಪರಸ್ಪರರನ್ನು ಶತ್ರುಗಳ ಹಾಗೆ ನೋಡುತ್ತಿರಲಿಲ್ಲ. ಆಗ ಒಬ್ಬ ತನ್ನ ನೆರೆಯವರನ್ನು ಭೇಟಿ ಮಾಡಬಹುದಾಗಿತ್ತು : ಮಾತಾಡದಿದ್ದರೂ ಅವರು ಸ್ನೇಹಿತರೆಂದೇ ಪರಿಗಣಿಸಬಹುದಾಗಿತ್ತು.

ಮಿಸೆಸ್ ಕ್ಲಿಂಗೆಲ್ ಹಾಸಿಗೆಯ ಮೇಲೆ ಮಲಗಿದ್ದಳು. ಹತ್ತಿರದಲ್ಲೇ ಇದ್ದ ದಿವಾನಿನ ಮೇಲೆ ಅವಳ ಮೂವರು ಗೆಳತಿಯರು ಕುಳಿತಿದ್ದರು. ನನಗೆ ಅವರಲ್ಲಿ ಯಾರ ಪರಿಚಯವೂ ಇರಲಿಲ್ಲ.

ಒಳಗೆ ಹೆಜ್ಜೆಯಿಟ್ಟ ತಕ್ಷಣ ಎಲ್ಲರಿಗೂ ವಂದಿಸಿದೆ. ನಾನು ಇಂಥವನು ಎಂದು ಹೇಳಿಕೊಳ್ಳಲಿಲ್ಲ; ಹಾಗೆಯೇ ನಿಮ್ಮ ಹೆಸರೇನು ಎಂದು ಅವರನ್ನು ವಿಚಾರಿಸುವ ಗೋಜಿಗೂ ಹೋಗಲಿಲ್ಲ.

ಮಿಸೆಸ್ ಕ್ಲಿಂಗೆಲ್ ನಮ್ಮತ್ತ ಆತ್ಮೀಯವಾಗಿ ನೋಡಿ ಮುಗುಳ್ನಕ್ಕು ಎಂದಿನಂತೆ ಏನೇನೋ ಹರಟತೊಡಗಿದಳು. ನಾನು ನಾಲಗೆ ಬಿಗಿಹಿಡಿದುಕೊಂಡು ನನ್ನಲ್ಲೇ ಅಂದುಕೊಂಡೆ : 'ಇವಳ ವಿರುದ್ಧ ನನಗೇನೂ ಇಲ್ಲ. ಆದರೂ ಇದೊಂದು ಪೀಡೆ. ಒಂದು ದಿನ ರಸ್ತೆಯಲ್ಲಿ ಬೇಕೆಂದೇ ಯಾರನ್ನೂ ಗಮನಿಸದೆ ನಾನು ನಡೆದುಕೊಂಡು ಹೋಗ್ತೀನಿ ಅಂತ ಇಟ್ಕೊಳ್ಳೋಣ. ಆಗ ಇದ್ದಕ್ಕಿದ್ದಂತೆ ಈ ಹೆಂಗಸು ಪ್ರತ್ಯಕ್ಷವಾದರೆ ಏನು ಮಾಡುವುದು ? ಹೇಗಿದ್ದೀರಿ ಎಂದು ಅವಳನ್ನು ವಿಚಾರಿಸಿದರೆ ಸಾಕು. ಕೂಡಲೇ ನನ್ನ ಯೋಚನೆಗಳಿಗೆ ಕಡಿವಾಣ ಹಾಕಿದಂತೆ. ಅನೇಕ ವರ್ಷಗಳಿಂದ ಇವಳನ್ನು ಬಲ್ಲೆ, ನಿಜ. ಅಷ್ಟರಿಂದಲೇ ಜೀವನಪರ್ಯಂತ ನಾನು ಇವಳಿಗೇ

ಸೇರಿದವನೆಂದು ಅರ್ಥವೆ ?' ನಾನು ಸಿಟ್ಟಿನಿಂದ ಕುದಿಯುತೊಡಗಿದೆ. 'ಎದುರಿಗೆ ಯಾರಾದರೂ ಬಂದಾಗ ನನಗೂ ಅವರಿಗೂ ನಡುವೆ ಯಾವ ಸಂಬಂಧವಿದೆ ಎಂದು ತಿಳಿಯದೆ ಹೋದರೆ, ಹಿಂದಿನ ಜನ್ಮದಲ್ಲಿ ನಾನು ಅವರಿಗೆ ಸಲ್ಲಿಸಬೇಕಾಗಿದ್ದುದನ್ನು ಸಲ್ಲಿಸಿಲ್ಲವೆಂದೇ ಅರ್ಥ. ಹಿಂದಿನ ಜನ್ಮದಲ್ಲಿ ನಾನು ನನ್ನ ನೆರೆಯವನಿಗೆ ಮಾಡಿದ ದ್ರೋಹವನ್ನು ಸರಿಪಡಿಸುವುದಕ್ಕಾಗಿಯೇ ಈಗ ನಾವಿಬ್ಬರೂ ಮತ್ತೆ ಜನ್ಮವೆತ್ತಿ ಬಂದಿದ್ದೇವೆ' ಎಂಬ ಮಾತುಗಳಂತೂ ಆಗ ನನ್ನ ಮನಸ್ಸಿನಲ್ಲಿ ಸುಳಿಯಲೇ ಇಲ್ಲ.

ನಾನು ಸಿಟ್ಟಿನಿಂದ ಉರಿಯುತ್ತ ಕುಳಿತಿದ್ದಾಗ ಮಿಸೆಸ್ ಕ್ಲಿಂಗೆಲ್ ನನ್ನವಳತ್ತ ತಿರುಗಿ, "ಹೂಂ, ನೀನು ಯಾತ್ರೆ ಹೋಗಿದ್ದೆ, ಇಲ್ಲಿ ನಿನ್ನ ಯಜಮಾನರು ಸುಖ ಪಡ್ತಾ ಇದ್ದರು" ಎಂದು ಹೇಳಿದಳು. ನಂತರ ನನ್ನ ಕಡೆ ಬೆರಳು ಮಾಡಿ ನಗುತ್ತಾ "ಚೆಂದ ಚೆಂದ ಇರೋ ಹುಡುಗಿಯರು ನಿಮ್ಮನ್ನು ಹುಡುಕಿಕೊಂಡು ಬರ್‍ತಿದ್ದರು ಅಂತ ನಾನು ಹೇಳ್ತಿಲ್ಲ–ನಿಮ್ಮ ಹೆಂಡತೀಗೆ" ಎಂದೂ ಸೇರಿಸಿದಳು.

ಆ ದಿನಗಳಲ್ಲಿ ನನಗೆ ಸುಖದ ಕಲ್ಪನೆಯೂ ಇರಲಿಲ್ಲ. ಕನಸಿನಲ್ಲಿ ಕೂಡ ಸುಖ ಕೊಡುವಂಥದೇನೂ ಕಾಣಿಸುತ್ತಿರಲಿಲ್ಲ. ವಸ್ತುಸ್ಥಿತಿ ಹೀಗಿರುವಾಗ ಈಕೆ ನನ್ನ ಹೆಂಡತಿಗೆ "ನಿಮ್ಮ ಯಜಮಾನರ ಹತ್ತಿರ ಚೆಂದ ಚೆಂದದ ಹುಡುಗಿಯರು ಬರ್‍ತಿದ್ದರು, ಅವರ ಜೊತೆ ನಿಮ್ಮವರು ತುಂಬ ಸುಖವಾಗಿದ್ದರು" ಎಂದು ಹೇಳುತ್ತಿದ್ದಾಳೆ. ನನಗೆಷ್ಟು ಕೋಪ ಬಂದಿತೆಂದರೆ ಮೈಯೊಳಗಿನ ಮೂಳೆ ಮೂಳೆಯೂ ನಡುಗುತ್ತಿತ್ತು. ಧಿಗ್ಗನೆ ಮೇಲೆದ್ದು ಅವಳನ್ನು ವಾಚಾಮಗೋಚರ ಬೈಯತೊಡಗಿದೆ. ಗೊತ್ತಿದ್ದ ಕೆಟ್ಟಮಾತುಗಳಲ್ಲಿ ಒಂದನ್ನೂ ಬಿಡದೆ ಅವಳ ಮುಖಕ್ಕೆಸೆದೆ. ಅವಳು, ನನ್ನ ಹೆಂಡತಿ ಇಬ್ಬರೂ ಆಶ್ಚರ್ಯದಿಂದ ನನ್ನನ್ನೇ ನೋಡುತ್ತಿದ್ದರು. ನನಗೂ ಆಶ್ಚರ್ಯವೆ ! ಮಿಸೆಸ್ ಕ್ಲಿಂಗೆಲ್ ತಮಾಷೆ ಮಾಡಿದ್ದಳಷ್ಟೆ. ಅದಕ್ಕೆ ಯಾಕೆ ನಾನು ಇಷ್ಟೆಲ್ಲ ಕೋಪ ಗೊಂಡು ಅವಳನ್ನು ಅವಮಾನಗೊಳಿಸಬೇಕು ? ಆದರೆ ನನಗೆ ಅಸಾಧ್ಯ ಸಿಟ್ಟು ಬಂದಿತ್ತು. ಬಾಯಿಂದ ಬರುತ್ತಿದ್ದ ಒಂದೊಂದು ಮಾತೂ ಶಾಪವಾಗಿ ಸಿಡಿಯು ತ್ತಿತ್ತು. ಕೊನೆಗೆ ನನ್ನವಳ ಕೈಹಿಡಿದುಕೊಂಡು ಬರುತ್ತೇವೆ ಎಂದು ಕೂಡ ಹೇಳದೆ ಹೊರಬಂದೆ.

ಹೊರಗೆ ಬರುವಾಗ ಮಿಸೆಸ್ ಕ್ಲಿಂಗೆಲ್ಲಳ ಮೂವರು ಗೆಳತಿಯರನ್ನೂ ದಾಟಿ ಕೊಂಡು ಬರಬೇಕಾಯಿತು. ಅವರಲ್ಲೊಬ್ಬಳು "ಮಿಸೆಸ್ ಕ್ಲಿಂಗೆಲ್ ತಮಾಷೆ ಮಾಡಿದ್ದೇ ವಿಚಿತ್ರ" ಎಂದು ಅಂದಂತೆ ಕೇಳಿಸಿತು.

ಹೆಂಡತಿ ನನ್ನ ಹಿಂದೆಯೇ ಮೌನವಾಗಿ ಬರುತ್ತಿದ್ದಳು. ಅವಳಿಗೆ ಬೇಸರ ವಾಗಿದ್ದಂತೂ ಸ್ಪಷ್ಟ. ಬೇಸರ ಮಿಸೆಸ್ ಕ್ಲಿಂಗೆಲಳನ್ನು ಅವಮಾನ ಮಾಡಿದೆ ಎಂಬುದಕ್ಕಲ್ಲ ; ನಾನು ಅಷ್ಟೆಲ್ಲ ಕೆರಳಿದೆನಲ್ಲ ಎಂದು. ನನ್ನ ಬಗ್ಗೆ ಪ್ರೀತಿಯಿರುವ ಒಂದೇ ಒಂದು ಕಾರಣದಿಂದ ಏನೂ ಹೇಳದೆ ಸುಮ್ಮನೆ ನಡೆಯುತ್ತಿದ್ದಳು.

ಸರಿ, ನಾವು ಒಂದು ಮಾತೂ ಆಡದೆ ನಡೆಯುತ್ತ ಹೋದೆವು. ದಾರಿಯಲ್ಲಿ ಮೂರು ಮಂದಿ ಸಿಕ್ಕಿದರು. ಅವರಲ್ಲಿ ಒಬ್ಬನ ಪರಿಚಯ ನನಗಿತ್ತು. ಇನ್ನಿಬ್ಬರು ಯಾರೋ ಗೊತ್ತಾಗಲಿಲ್ಲ. ನನಗೆ ಗೊತ್ತಿದ್ದವನು ಹೀಬ್ರೂ ಭಾಷೆ ಹೇಳಿಕೊಡುತ್ತಿದ್ದ ಮೇಷ್ಟ್ರು. ಅವನು ವಿದೇಶಕ್ಕೆ ಹೋಗಿ ಸಾಕಷ್ಟು ದುಡ್ಡು ಮಾಡಿಕೊಂಡು ಬಂದಿದ್ದ. ಈಗ ಯಾವ ಪತ್ರಿಕೆ ನೋಡಿದರೂ ಅವನದೇ ಬರವಣಿಗೆ. ಈ ಮೇಷ್ಟ್ರುಗಳು ಒಂದು ರೀತಿ ಹಾಡಿದ್ದೇ ಹಾಡುವ ಕಿಸುಬಾಯಿ ದಾಸರಿದ್ದಂತೆ. ಆದರೆ ಅವನ ಒಂದು ಲೇಖನ ಮಾತ್ರ ತುಂಬಾ ಚೆನ್ನಾಗಿತ್ತು. ಬರೆದವನು ಎದುರಿಗೇ ಇರುವಾಗ ಸುಮ್ಮನಿರುವುದೆ ? ಒಳ್ಳೆ ಸೊಗಸಾದ ಲೇಖನ ಎಂದೆ. ಅವನ ಮುಖ ಸಂತೋಷದಿಂದ ಬೆಳಗಿತು. ತನ್ನ ಜೊತೆಗಾರರನ್ನು ಪರಿಚಯ ಮಾಡಿಸಿದ. ಒಬ್ಬ ಪೋಲೆಂಡಿನಲ್ಲಿ ಸೆನೇಟರ್ ಆಗಿದ್ದ. ಇನ್ನೊಬ್ಬ ಮಿಸೆಸ್ ಕ್ಲಿಂಗೆಲ್ಲಳ ಆ ಮೂವರು ಗೆಳತಿಯರಲ್ಲಿ ಒಬ್ಬಳ ಅಣ್ಣ ಅಥವಾ ಅಪ್ಪನೊ ? ಬಹುಶಃ ನಾನೇ ತಪ್ಪಾಗಿ ಹಾಗೆ ಭಾವಿಸಿಕೊಂಡಿರಬೇಕು.

ಈ ನಗರವನ್ನು ನೋಡಿ ನಿಮಗೇನನ್ನಿಸುತ್ತೆ ಎಂದು ಮುಂತಾಗಿ ನಾನು ಅವರನ್ನು ಕೇಳಬಹುದಿತ್ತು. ಆದರೆ ಪ್ರವಾಸ ಹೋಗಿಬಂದಿದ್ದ ನನ್ನವಳಿಗೆ ದಣಿವಾಗಿತ್ತು. ಜೊತೆಗೆ ನನ್ನ ವರ್ತನೆಯಿಂದಾಗಿ ಉಂಟಾಗಿದ್ದ ಬೇಸರ ಬೇರೆ. ಸರಿ, ನಾನಿನ್ನು ಬರ್ತೀನಿ ಎಂದು ಅವರಿಂದ ಬೀಳ್ಕೊಂಡೆ

ಆದರೆ ನನ್ನ ಹೆಂಡತಿ ನನಗಾಗಿ ಕಾಯದೆ ಹೊರಟು ಹೋಗಿದ್ದಳು. ಹೇಳದೆ ಹೋದಳಲ್ಲ ಎಂದು ನನಗೇನೂ ಸಿಟ್ಟು ಬರಲಿಲ್ಲ. ಸುಸ್ತಾಗಿರುವಾಗ, ಬೇಸರವಾಗಿರುವಾಗ ಅಪರಿಚಿತರ ಮುಂದೆ ಸುಮ್ಮನೆ ನಿಲ್ಲುವುದೆಂದರೆ ಯಾವ ಹೆಣ್ಣಿಗೂ ಇಷ್ಟವೇ.

ನಾನು ಒಬ್ಬನೇ ನಡೆಯುತ್ತ ಜೇಬಿನಲ್ಲಿ ಕೈಯಿಳಿಸಿದಾಗ ಒಂದು ಲಕೋಟೆಯೋ ಅಥವಾ ಕಾಗದವೋ ಸಿಕ್ಕಿತು. ಅಲ್ಲೇ ನಿಂತು ಓದತೊಡಗಿದೆ : "ಬುಕ್ ಆಫ್ ಜೋಬ್ ಪ್ರಕರಣದಲ್ಲಿ ಬರುವ ಜೋಬನ ಸಂಕಷ್ಟಗಳು ಪವಿತ್ರಾತ್ಮನಾದ ಆ ದೇವರ ಸಂಕಷ್ಟಗಳೇ. ಯಾಕೆಂದರೆ ದೇವರು ಭಗವದ್ವೈರಿಯಾದ ಸೇಟನ್‌ನ ಶಕ್ತಿಯಲ್ಲಿ ತನ್ನ ಸೇವಕ ಜೋಬ್‌ನನ್ನು ಇರಿಸಿದ್ದ. ಅಂದರೆ ಜೋಬ್‌ನ ಸಂಕಷ್ಟಗಳಿಗಿಂತ ಮಿಗಿಲಾದದ್ದು ದೇವರ ಸಂಕಷ್ಟಗಳು..." ಬೈಬಲ್ಲಿನ ಹಳೆಯ ಒಡಂಬಡಿಕೆಗೆ ಸಂಬಂಧಿಸಿದಂತೆ ನಾನು ಈ ರೀತಿ ಬರೆದಿಟ್ಟುಕೊಂಡಿದ್ದನ್ನು ಲಕೋಟೆಯ ಸಮೇತ ಚೂರು ಚೂರು ಮಾಡಿ ಗಾಳಿಗೆ ತೂರಿದೆ. ಸಾಮಾನ್ಯವಾಗಿ ನಾನು ಪ್ರತಿಯೊಂದು ಕಾಗದವನ್ನೂ ಓದುವ ಮೊದಲು ಅಥವಾ ಓದಿದ ಮೇಲೆ ಹೀಗೆ ಹರಿದು ಹಾಕುವುದು ರೂಢಿ.

ಆಮೇಲೆ ನನ್ನ ಹೆಂಡತಿ ಎಲ್ಲಿದ್ದಾಳೋ ಹುಡುಕಬೇಕೆಂದುಕೊಂಡೆ. ಏನೇನೋ ಯೋಚನೆಗಳಿಂದ ಕಂಗೆಟ್ಟು ದಾರಿ ತಪ್ಪಿದ್ದೆ. ಈಗ ಇದ್ದಕ್ಕಿದ್ದಂತೆ ನಾನು ಹಿಂದೆಂದೂ ನೋಡಿರದ ರಸ್ತೆ. ಈ ನಗರದ ಇತರ ರಸ್ತೆಗಳಿಗಿಂತ ಇದು ಯಾವ ರೀತಿಯಲ್ಲೂ ಭಿನ್ನವಲ್ಲ. ನಿಜ. ಆದರೆ ನನಗೆ ಒಂದಿಷ್ಟೂ ಪರಿಚಯವಿಲ್ಲದ ರಸ್ತೆ. ಅಷ್ಟು ಹೊತ್ತಿಗೆ

ಎಲ್ಲ ಅಂಗಡಿಗಳೂ ಮುಚ್ಚಿಕೊಂಡಿದ್ದುವು. ಷಾಪ್‌ವಿಂಡೋಗಳಲ್ಲಿ ಮಾತ್ರ ಎಲ್ಲ ಬಗೆಯ ವಸ್ತುಗಳ ಮೇಲೆ ಚೆಲ್ಲಿದ ಬೆಳಕು. ಮನೆಯಿಂದ ಬಹುದೂರ ಬಂದು ದಾರಿ ತಪ್ಪಿದ್ದೇನೆ ; ಬೇರೊಂದು ರಸ್ತೆ ಹಿಡಿದೇ ಮನೆ ತಲಪಬೇಕು. ಆದರೆ ಯಾವ ರಸ್ತೆ ಎಂದು ಕಳವಳಗೊಂಡೆ. ಎರಡೂ ಕಡೆ ಕಬ್ಬಿಣದ ಬೇಲಿಯಿದ್ದ ಒಂದು ಪಾವಟಿಗೆ ಕಾಣಿಸಿತು. ಅದನ್ನು ಹತ್ತಿಹೋದರೆ ಒಂದು ಹೂವಿನ ಅಂಗಡಿ. ಅಲ್ಲಿ ಐದಾರು ಮಂದಿ ಹೂಗಳಿಗೆ ಬೆನ್ನು ಮಾಡಿಕೊಂಡು ನಿಂತಿದ್ದರು. ಅವರ ನಡುವೆ ಡಾ॥ ರೈಶೆಲ್ ನಿಂತುಕೊಂಡು ವ್ಯಾಕರಣ ಹಾಗೂ ಭಾಷೆಯ ಬಗ್ಗೆ ತನ್ನ ಹೊಸ ವಿಚಾರಗಳನ್ನು ಮಂಡಿಸುತ್ತಿದ್ದ.

ನಾನು ಅವನನ್ನು ಏನು ಸಮಾಚಾರ ಎಂದು ವಿಚಾರಿಸಿ "ದಾರಿ ಯಾವುದು..." ಎಂದು ಉಗ್ಗತೊಡಗಿದೆ. ನನಗೆ ರಸ್ತೆಯ ಹೆಸರೇನೂ ಮರೆತಿರಲಿಲ್ಲ ನಿಜ. ಆದರೆ ಅದನ್ನು ಮಾತ್ರ ಬಾಯಲ್ಲಿ ಉಚ್ಚರಿಸಲಾಗಲಿಲ್ಲ.

ಮನೆಯ ದಾರಿ ತಪ್ಪಿ, ಆ ದಾರಿ ಎಲ್ಲಿದೆ ಎಂದು ಕೇಳುವುದಕ್ಕೇ ಆಗದ ವ್ಯಕ್ತಿಯೊಬ್ಬನ ಭಾವನೆಗಳು ಸುಲಭವಾಗಿ ಅರ್ಥವಾಗಲಾರವು. ನಾನು ಕಂಗೆಡದೆ ಕೇವಲ ತಮಾಷೆಗೆ ಕೇಳಿದಂತೆ ನಟಿಸಿದೆ. ಇದ್ದಕ್ಕಿದ್ದಂತೆ ಮೈತುಂಬ ತಣ್ಣಗೆ ಕೊರೆಯುವ ಬೆವರು. ಏನನ್ನು ಮುಚ್ಚಿಡಬೇಕೆಂದು ಪ್ರಯತ್ನಿಸುತ್ತಿದ್ದೇನೋ ಅದೇ ಬಯಲಾಗುವಂತಾಯಿತು. ಆ ರಸ್ತೆ ಎಲ್ಲಿದೆಯೆಂದು ಮತ್ತೆ ಕೇಳಬಯಸಿದಾಗ ಮೊದಲಿನ ಹಾಗೆಯೇ ಅದರ ಹೆಸರು ಬಾಯಿಗೆ ಬರಲಿಲ್ಲ.

ಡಾ॥ ರೈಶೆಲ್ ಅವಾಕ್ಕಾಗಿ ನಿಂತ. ಅವನು ತನ್ನ ಹೊಸ ವಿಚಾರಗಳನ್ನು ಉತ್ಸಾಹದಿಂದ ವಿವರಿಸುತ್ತಿರುವಾಗ ನಾನು ಮಧ್ಯೆ ತಲೆ ಹಾಕಿದ್ದೆ. ಈ ಮಧ್ಯೆ ಅವನ ಜೊತೆಯಲ್ಲಿದ್ದವರು ನನ್ನನ್ನು ಅಣಕಿಸುವ ಹಾಗೆ ನೋಡುತ್ತ ಹೊರಟು ಹೋಗಿದ್ದರು. ನಾನು ಈ ಕಡೆ ಆ ಕಡೆ ನೋಡಿದೆ. ನನ್ನ ರಸ್ತೆಯ ಹೆಸರನ್ನು ನೆನಪು ಮಾಡಿಕೊಳ್ಳಲು ನೋಡಿದೆ. ಆಗಲಿಲ್ಲ. ಒಮ್ಮೊಮ್ಮೆ ನನ್ನದು ಹಂಬೋಲ್ಟ್ ರಸ್ತೆಯೆಂದೂ, ಇನ್ನು ಕೆಲವೊಮ್ಮೆ ವೆಸ್ಟ್ ಸ್ಟ್ರೀಟ್ ಎಂದೂ ಅನಿಸುತ್ತಿತ್ತು. ಆದರೆ ವಿಚಾರಿಸೋಣ ಎಂದು ಬಾಯಿ ತೆರೆದರೆ ಸಾಕು ಅದು ಹಂಬೋಲ್ಟ್ ರಸ್ತೆಯೂ ಅಲ್ಲ, ವೆಸ್ಟ್‌ಸ್ಟ್ರೀಟೂ ಅಲ್ಲ ಎಂದು ಅನಿಸುತ್ತಿತ್ತು. ನನ್ನ ವಿಳಾಸವಿರುವ ಕಾಗದವೇನಾದರೂ ಸಿಕ್ಕಬಹುದೆಂದು ಜೇಬಿಗೆ ಕೈಹಾಕಿದೆ. ನಾನಿನ್ನೂ ಹರಿದು ಹಾಕದ ಎರಡು ಕಾಗದಗಳೇನೋ ಸಿಕ್ಕಿದುವು. ಆದರೆ ಅವು ನಾನು ಖಾಲಿಮಾಡಿದ್ದ ಹಳೆಯ ಮನೆಗೆ ಬಂದ ಕಾಗದಗಳು. ಈಗಿದ್ದ ಮನೆಗೆ ಬಂದಿದ್ದು ಒಂದೇ ಒಂದು ಕಾಗದ. ಅದನ್ನು ಕೆಲವು ದಿನಗಳ ಹಿಂದೆ ಹರಿದುಹಾಕಿದ್ದೆ. ಈಗ ರಸ್ತೆಗಳಿಗೆ ಸಾಮಾನ್ಯವಾಗಿ ಇರುವ ನಗರಗಳ ಮತ್ತು ಹಳ್ಳಿಗಳ, ದೊರೆಗಳ ಮತ್ತು ಅಧಿಕಾರಿಗಳ, ಸನ್ಯಾಸಿಗಳ ಮತ್ತು ಕವಿಗಳ, ಮರಗಳ ಮತ್ತು ಹೂವುಗಳ ಹೆಸರುಗಳನ್ನೆಲ್ಲ ಜೋರಾಗಿ ಹೇಳತೊಡಗಿದೆ_ಬಹುಶಃ

ಬೀಗಾವರೂ ನನ್ನ ರಸ್ತೆಯ ಹೆಸರು ನೆನಪಾಗಬಹುದು ಎಂದು. ಇಲ್ಲ, ನೆನಪಾಗಲೇ ಇಲ್ಲ.

ಆದರೆ ಡಾ॥ ರೈಶಲ್‌ನ ಸಹನೆ ಮಿತಿಮೀರುತ್ತಿತ್ತು. ಅವನು ಕಾಲಿನಿಂದ ನೆಲ ಉಜ್ಜತೊಡಗಿದ. 'ನಾನಿಷ್ಟು ತೊಂದರೆಯಲ್ಲಿರುವಾಗ ಜಾಗ ಖಾಲಿ ಮಾಡಲು ನೋಡುತ್ತಿದ್ದಾನೆ' ಎಂದುಕೊಂಡೆ. ನಾವು ಸ್ನೇಹಿತರು, ಮನುಷ್ಯರು ಅಲ್ಲವೆ? ಇಷ್ಟು ಸಂಕಷ್ಟದಲ್ಲಿರುವಾಗ ಬಿಟ್ಟುಹೋಗಲು ಮನಸ್ಸಾದರೂ ಹೇಗೆ ಬರುತ್ತದೆ? ಇವತ್ತು ನನ್ನ ಹೆಂಡತಿ ಪ್ರವಾಸ ಮುಗಿಸಿಕೊಂಡು ಹಿಂತಿರುಗಿದ್ದಾಳೆ. ಈಗ ನನ್ನ ವಿಳಾಸ ಮರೆತಿದೆಯೆಂಬ ಕ್ಷುಲ್ಲಕ ಕಾರಣಕ್ಕಾಗಿ ನಾನು ಅವಳ ಬಳಿ ಹೋಗುವಂತಿಲ್ಲ. ಡಾ॥ ರೈಶಲ್ "ಈ ಟ್ಯಾಕ್ಸಿ ಹತ್ತಿ ನನ್ನ ಜೊತೆ ಬಾ" ಎಂದ. ಅವನ ಈ ಅಸಂಗತ ಸೂಚನೆ ಕೇಳಿ ಆಶ್ಚರ್ಯವಾಯಿತು. ಆದರೆ ಅವನು ನನ್ನ ತೋಳು ಹಿಡಿದುಕೊಂಡು ಜೊತೆಯಲ್ಲೇ ಟ್ಯಾಕ್ಸಿ ಹತ್ತಿದ.

ನನಗೆ ಇಷ್ಟವಿಲ್ಲದ ಪ್ರಯಾಣ. ರೈಶಲ್ ಯಾಕೆ ನನ್ನನ್ನು ಈ ಟ್ಯಾಕ್ಸಿಯಲ್ಲಿ ಎಳೆದು ಕರೆತಂದ ಎಂದು ಆಶ್ಚರ್ಯ. ಮನೆಗೆ ಕರೆದೊಯ್ಯುವುದು ಹಾಗಿರಲಿ, ನಮ್ಮ ರಸ್ತೆಯಿಂದ ನನ್ನನ್ನು ಇನ್ನಷ್ಟು ದೂರ ಕೊಂಡೊಯ್ಯುವ ವಿಧಾನ ಇದು. ಯಾಕೋ ನನ್ನ ಜೊತೆ ರೈಶಲ್ ಕನಸಿನಲ್ಲಿ ಕುಸ್ತಿಯಾಡುತ್ತಿರುವುದನ್ನು ನಾನೇ ನೋಡಿದಂತೆ ನೆನಪಾಯಿತು. ತಕ್ಷಣ ಟ್ಯಾಕ್ಸಿಯಿಂದ ಹೊರಕ್ಕೆ ನೆಗೆದು, ಅವನಿಂದ ದೂರವಾದೆ.

ಟ್ಯಾಕ್ಸಿಯಿಂದ ನೆಗೆದು ಹೊರಬಂದಾಗ ನಾನು ಪೋಸ್ಟ್ ಆಫೀಸಿನ ಬಳಿ ನಿಂತಿದ್ದೆ. ಕೂಡಲೇ ತಲೆಯಲ್ಲೊಂದು ವಿಚಾರ ಹೊಳೆಯಿತು : ಇಲ್ಲಿ ನನ್ನ ಮನೆಯ ವಿಳಾಸ ವಿಚಾರಿಸಿದರೆ ಹೇಗೆ? ತಲೆ ಉತ್ತರಿಸಿತು : ಹುಶಾರು, ಅಲ್ಲಿರುವ ಕ್ಲರ್ಕು ಇವನೊಬ್ಬ ಹುಚ್ಚ ಎಂದುಕೊಂಡಾನು. ಯಾಕೆಂದರೆ ಸ್ವಸ್ಥನಾಗಿರುವ ಮನುಷ್ಯನಿಗೆ ಅವನ ಮನೆ ಎಲ್ಲಿದೆ ಅಂತ ಗೊತ್ತೇ ಇರುತ್ತೆ. ಸರಿ, ನಾನು ಅಲ್ಲಿ ಸಿಕ್ಕಿದ ಒಬ್ಬನಿಗೆ ಕ್ಲಾರ್ಕನ್ನು ವಿಚಾರಿಸು ಅಂತ ಕೇಳಿಕೊಂಡೆ.

ಅದೇ ಹೊತ್ತಿಗೆ ಚೆನ್ನಾಗಿ ಡ್ರೆಸ್ ಮಾಡಿಕೊಂಡ ಧಡಿಯನೊಬ್ಬ ಒಳಗೆ ಬಂದ. ಇನ್‌ಷೂರೆನ್ಸ್ ಏಜೆಂಟಾಗಿದ್ದ ಅವನು ಸಂತೃಪ್ತಿಯಿಂದ ಕೈಗಳನ್ನು ಉಜ್ಜಿಕೊಳ್ಳುತ್ತಾ ಬಂದು ಏನನ್ನೋ ಬಡಬಡಿಸತೊಡಗಿದ. ಅಸಾಧ್ಯ ಸಿಟ್ಟಿನಿಂದ ನನ್ನ ರಕ್ತ ಕುದಿಯಿತು. "ಏನ್ರಿ, ಮರ್ಯಾದೆ ಇಲ್ವಾ. ಇಬ್ಬರು ಮಾತಾಡ್ತಾ ಇರೋವಾಗ ಮಧ್ಯೆ ಬಂದು ಬಾಯಿ ಹಾಕ್ತೀರಲ್ಲಾ" ಎಂದುಬಿಟ್ಟೆ. ಹೌದು, ನಾನು ಹಾಗೆ ಹೇಳಿದ್ದು ಸರಿ. ಆದರೆ ತುಂಬಾ ಸಿಟ್ಟಿನಲ್ಲಿದ್ದ ನನ್ನ ಧ್ವನಿಯಲ್ಲೇ ಸಭ್ಯತೆಯ ಸೂಚನೆ ಇರಲಿಲ್ಲ. ಏಜೆಂಟು ನನ್ನನ್ನು ಪೆಕ್ಕಸಬೆರಗಾಗಿ ನೋಡಿದ. ನಾನು ನಿನಗೇನು ಮಾಡಿದೆ? ಯಾಕೆ ಹೀಗೆ ಅವಮಾನಿಸುತ್ತೀಯ? ಎಂದು ಕೇಳುವಂತಿತ್ತು, ಅವನ ಮುಖ. ಈಗ ಸುಮ್ಮನಿದ್ದು ಬಿಟ್ಟರೆ ಆಸಾಮಿ ಬಡಪೆಟ್ಟಿಗೆ ಬಿಡುವುದಿಲ್ಲವೆಂದು "ನಾನು ಮನೆಗೆ ಹೋಗಲೇಬೇಕು.

ಅದನ್ನೇ ಹುಡುಕ್ತಾ ಇದೀನಿ. ನಮ್ಮ ರಸ್ತೆಯೇ ಮರೆತು ಹೋಗಿದೆ. ನನ್ನ ಹೆಂಡತಿಯನ್ನು ಎಲ್ಲಿ ಹೋಗಿ ನೋಡಲಿ" ಎಂದು ಕೂಗಿಕೊಳ್ಳತೊಡಗಿದೆ. ಅವನು ಒಳಗೇ ವ್ಯಂಗ್ಯವಾಗಿ ನಗತೊಡಗಿದ. ನನ್ನ ಧ್ವನಿ ಕೇಳಿಸುತ್ತ ನೆರೆದುಬಿಟ್ಟಿದ್ದ ಜನರೂ ಅಷ್ಟೆ. ಈ ಮಧ್ಯೆ ಕ್ಲಾರ್ಕ್ ತನ್ನ ಕಿಟಕಿಯನ್ನು ಮುಚ್ಚಿ ಹೊರಟುಹೋಗಿದ್ದ. ಕೊನೆಗೂ ನನ್ನ ವಿಳಾಸ ಸಿಕ್ಕಲಿಲ್ಲ.

ಪೋಸ್ಟ್ ಆಫೀಸಿನ ಎದುರಿಗೇ ಒಂದು ಕಾಫಿ ಹೌಸ್ ಇತ್ತು. ಅಲ್ಲಿ ಜಾಕೋಬ್ ತ್ಸೋರೆಫ್ ಇದ್ದುದನ್ನು ನೋಡಿದೆ. ಜಾಕೋಬ್ ತ್ಸೋರೆಫ್ ಇನ್ನೊಂದು ನಗರದಲ್ಲಿ ಬ್ಯಾಂಕರ್ ಆಗಿದ್ದವನು. ಯುದ್ಧಕ್ಕೆ ಮೊದಲು ಅವನ ಪರಿಚಯವಿತ್ತು. ನಾನು ವಿದೇಶಕ್ಕೆ ಹೋಗಿ ಅಲ್ಲಿ ತೊಂದರೆಗೆ ಸಿಕ್ಕಿಕೊಂಡಾಗ ಅವನು ಹಣ ಕಳಿಸಿದ್ದ. ಅದನ್ನು ಹಿಂತಿರುಗಿಸಿದ ಮೇಲೆ ಅವನ ಭೇಟಿಯೇ ಆಗಿರಲಿಲ್ಲ. ಎಂದಾದರೂ ಇಸ್ರೇಲಿಗೆ ಹೋಗಿ ಅವನ ಜೊತೆ ಮಾತಾಡಿಯೇ ತೀರುತ್ತೇನೆ ಎಂದು ಅಂದುಕೊಳ್ಳುತ್ತಿದ್ದೆ. ಹಾಗೆ ಅಂದುಕೊಂಡು ಹತ್ತಿರ ಹತ್ತಿರ ಇಪ್ಪತ್ತು ವರ್ಷವಾಗಿತ್ತು. ಈಗ ಅವನನ್ನು ನೋಡಿದ ತಕ್ಷಣ ಕಾಫಿ ಹೌಸಿನೊಳಗೆ ನುಗ್ಗಿ ಹಿಂದಿನಿಂದ ಅವನ ಎರಡೂ ಕೈಗಳನ್ನು ಹಿಡಿದುಕೊಂಡು ಸಂತೋಷದಿಂದ ಅವನ ಹೆಸರೆತ್ತಿ ಕೂಗಿದೆ. ನನ್ನ ಕಡೆ ತಲೆ ತಿರುಗಿಸಿದವನು ಏನೂ ಮಾತಾಡಲಿಲ್ಲ. ಯಾಕೆ ಇವನು ಮಾತಾಡುತ್ತಿಲ್ಲ, ನಮ್ಮ ಸ್ನೇಹವನ್ನೇ ಮರೆತುಬಿಟ್ಟನೇ ಎಂದು ಬೆರಗಾಯಿತು. ನಾನು ಎಷ್ಟೆಲ್ಲ ಪ್ರೀತಿಸುತ್ತಿದ್ದೇನೆ ಎಂದು ಇವನಿಗೆ ತಿಳಿಯದೇ ಹೋಯಿತೆ ?

ಹುಡುಗನೊಬ್ಬ "ಅಪ್ಪನಿಗೆ ಕಣ್ಣು ಕಾಣಿಸೋಲ್ಲ" ಎಂದು ಪಿಸುಗುಟ್ಟಿದ. ನಾನು ಸುಮ್ಮನೆ ನೋಡಿದೆ. ಹೌದು ಅವನೀಗ ಕುರುಡ. ಈಗ ನಗಬೇಕೋ ಅಳಬೇಕೋ ತಿಳಿಯಲಿಲ್ಲ. ಯಾಕೆಂದರೆ ನಾನು ವಿದೇಶಕ್ಕೆ ಹೋಗುವ ಮುಂಚೆ ಅವನ ಕಣ್ಣುಗಳಲ್ಲಿ ಬೆಳಕಿತ್ತು. ಈಗ ಬರೀ ಕತ್ತಲು.

ಹೇಗಿದ್ದೀಯ, ನಿನ್ನ ಮನೆಯವರು ಹೇಗಿದ್ದಾರೆ ಎಂದು ಕೇಳಬೇಕೆಂದುಕೊಂಡೆ. ಬಾಯಿ ತೆರೆದು ಕೇಳಿದ್ದು ನನ್ನ ಮನೆಯ ದಾರಿ ಯಾವುದು ಎಂದು. ಅವನ ಕಣ್ಣುಗಳ ಕೆಳಗೆ ಎರಡು ಮಡಿಕೆಗಳು ಕಾಣಿಸಿದುವು. ಅದರ ಮೂಲಕ ಅವನು ನೋಡುತ್ತಿದ್ದಂತಿತ್ತು. ಇದ್ದಕ್ಕಿದ್ದಂತೆ ತನ್ನ ಕೈಯಿಂದ ತಡಕಾಡುತ್ತಾ ಅವನು ಮಗನ ಕಡೆ ತಿರುಗಿ "ಈತ ನನ್ನ ಸ್ನೇಹಿತ" ಎಂದ. ನಾನು ತಲೆಯಾಡಿಸಿ, "ಹೌದು, ಸರಿಯಾಗಿ ಹೇಳಿದೆ. ನಾನು ನಿನ್ನ ಸ್ನೇಹಿತನಾಗಿದ್ದೆ. ಈಗಲೂ ಆಗಿದ್ದೇನೆ" ಎಂದೆ. ಆದರೆ ಹುಡುಗನ ಮೇಲೆ ಅವನ ತಂದೆಯ ಮಾತಾಗಲಿ, ನನ್ನ ಮಾತಾಗಲಿ ಯಾವುದೇ ಪರಿಣಾಮ ಬೀರಿದಂತಿರಲಿಲ್ಲ. ಅವನು ನನ್ನನ್ನು ಗುರುತಿಸದಂತೆಯೇ ಕುಳಿತಿದ್ದ. ಸ್ವಲ್ಪ ಹೊತ್ತಿನ ಮೇಲೆ ತ್ಸೋರೆಫ್ ತನ್ನ ಮಗನನ್ನು ಉದ್ದೇಶಿಸಿ, "ಹೋಗು, ಈ ಸ್ನೇಹಿತನಿಗೆ ಮನೆ ಹುಡುಕಿಕೊಡು" ಎಂದು ಹೇಳಿದ.

ಹುಡುಗ ಸ್ವಲ್ಪ ಹೊತ್ತು ಒಂದಿಷ್ಟೂ ಕದಲದೆ ಕುಳಿತಿದ್ದ. ತಂದೆಯನ್ನು ಬಿಟ್ಟುಬರಲು ಅವನಿಗೆ ಏನೇನೂ ಇಷ್ಟವಿರಲಿಲ್ಲವೆಂಬುದು ಸ್ಪಷ್ಟ. ಕೊನೆಗೆ ಹುಡುಗ ತನ್ನ ಕಣ್ಣು ತೆರೆದು ನನ್ನನ್ನೇ ದಿಟ್ಟಿಸಿ ನೋಡಿದ. ಅವನ ಎರಡು ಸುಂದರ ಕಣ್ಣುಗಳೂ ಫಳ ಫಳ ಮಿನುಗಿದುವು. ನಾನು ನನ್ನ ಮನೆಯ ಪಕ್ಕದಲ್ಲೇ ನಿಂತಿದ್ದೆ.

'ಕಥಾ ಜಗತ್ತು' ಕೃತಿಯಿಂದ

# ಕಥಿ ಹೇಳುವುದು ಹೇಗ....

ಜರ್ಮನ್ ಮೂಲ : ಫ್ರೆಡ್ ವಾಂಡರ

ಅನು : ರಾಘವೇಂದ್ರ ಪಾಟೀಲ

[ಯೆಹೂದೀ ಮೂಲದ ಫ್ರೆಡ್ ವಾಂಡರ್ 1917ರಲ್ಲಿ ವಿಯೆನ್ನಾದಲ್ಲಿ ಹುಟ್ಟಿದನು. ಅವನು ತಿಳುವಳಿಕೆಯ ವಯಸ್ಸಿಗೆ ಬರುತ್ತಿದ್ದಂತೆಯೇ ಐತಿಹಾಸಿಕ ತುಮುಲಗಳುಂಟಾದವು. ಮೊದಲನೆಯದಾಗಿ 1930ರ ಮಹಾ ಕುಸಿತ ಮತ್ತು ಎರಡನೆಯದಾಗಿ ಆಸ್ಟ್ರಿಯದ ಮೇಲೆ ಹಿಟ್ಲರ್‌ನ ಆಕ್ರಮಣ. ಲಕ್ಷಾಂತರ ನಿರುದ್ಯೋಗಿಗಳಲ್ಲಿ ಒಬ್ಬನಾದ ಇವನು ಇಟಲಿ, ಸ್ವಿಟ್ಜರ್‌ಲೆಂಡ್ ಮತ್ತು ಫ್ರಾನ್ಸ್‌ಗಳಲ್ಲಿ ಅಂಡಲೆಯುತ್ತ ತೋಟಗಳಲ್ಲಿ ಕೂಲಿಯಾಗಿ, ರಸ್ತೆ ಮತ್ತು ಕಟ್ಟಡಗಳ ಕೆಲಸದ ಕೂಲಿಮಾಡಿ, ಹೋಟೆಲ್ಲುಗಳಲ್ಲಿ ಮಾಣಿಯಾಗಿ ಡ್ರಾಫ್ಟ್‌ಮನ್ ಆಗಿ ಫೋಟೋಗ್ರಾಫರ್ ಆಗಿ ಕೆಲಸಮಾಡಿ ಹೊಟ್ಟೆಹೊರೆದುಕೊಂಡ. ಎರಡನೆಯ ಜಾಗತಿಕ ಯುದ್ಧ ಆರಂಭವಾದಾಗ ಪ್ಯಾರೀಸಿನಲ್ಲಿದ್ದ ಇವನನ್ನು ಹಿಡಿದು ಜರ್ಮನಿಗೆ ಸಾಗಿಸಿದರು. ಅಲ್ಲಿ ಬುಚೆನ್‌ವಾಲ್ಡ್ ಕಾನ್ಸನ್‌ಟ್ರೇಶನ್ ಕ್ಯಾಂಪಿಗೆ ಸೇರಿಸಿದರು. ಮುಂದೆ 1945ರಲ್ಲಿ ಬಿಡುಗಡೆ ಹೊಂದಿದ ಮೇಲೆ ಇವನು ಆಸ್ಟ್ರಿಯನ್ ಕಮ್ಯುನಿಸ್ಟ್ ಪಾರ್ಟಿಯ ಸದಸ್ಯನಾದ. ವಿಯೆನ್ನಾದಲ್ಲಿ ವರದಿಗಾರನಾಗಿ ಬದುಕತೊಡಗಿದ. ಮುಂದೆ 1955ರಲ್ಲಿ ಅವನು ಜರ್ಮನ್ ಡೆಮಾಕ್ರಟಿಕ್ ರಿಪಬ್ಲಿಕ್‌ಗೆ ಬಂದು ಜೋಹಾನ್ಸ್ ಆರ್ ಬೀಶರ್ ಇನ್‌ಸ್ಟಿಟ್ಯೂಟ್‌ನಲ್ಲಿ ಸಾಹಿತ್ಯದ ಅಧ್ಯಯನ ಮಾಡಿದನು. ಆಗಿನಿಂದ ಬರವಣಿಗೆ ಇವನ ಬದುಕಾಯಿತು. ಇವನು ತನ್ನ ಸಾಹಿತ್ಯ ಕೃತಿಗಳಿಗಾಗಿ ಫಾಂಟೇನ್ ಪ್ರಶಸ್ತಿ ಮತ್ತು ಹೆನ್ರೀಮನ್ ಪ್ರಶಸ್ತಿಗಳನ್ನು ಪಡೆದಿದ್ದಾನೆ.]

ನಾನು ಹೇಳಲಿರುವ ಈ ಮಾತುಕತೆ ನಡೆದ ಮೂರು ವಾರಗಳಲ್ಲೇ ಮೆಂಡೆಲ್ ತೀರಿಹೋದ. ಹೀಗಾಗುತ್ತದೆಂದು ನನಗೆ ಗೊತ್ತಿರಲಿಲ್ಲ...ನನಗೇ ಏಕೆ–ಸಾಕಷ್ಟು ಅಶಕ್ತನಾದ ಮೆಂಡೆಲನಿಗೇ ತಾನು ಇನ್ನೇನು ಮೂರು ವಾರಗಳಲ್ಲಿ ಸಾಯಲಿರುವೆನೆಂದು ಅನಿಸಿರಲಿಕ್ಕಿಲ್ಲ. ಅವನು ಅಶಕ್ತನಾಗಿದ್ದರೂ ಅವನ ದೃಷ್ಟಿ ಮನುಷ್ಯರ ನಡವಳಿಕೆಯನ್ನು ಭೇದಿಸುವಂಥ ತೀಕ್ಷ್ಣವಾಗಿತ್ತು. ಅವನಿಗೆ ಜನರ ಅಂತರಂಗವನ್ನು ಬಗೆದು ನೋಡುವ ಧ್ಯಾನದ ತೀವ್ರತೆ ಸಾಧ್ಯವಾಗಿತ್ತು...ಮರದ ದಿಮ್ಮಿಗಳನ್ನು ಅನ್‌ಲೋಡ್ ಮಾಡುವಾಗ ಇಲ್ಲವೇ ನಮ್ಮನ್ನೆಲ್ಲ ಕೆಲಸಕ್ಕೆ ಅಟ್ಟಿಕೊಂಡು ಹೊರಟ ದಾರಿಯಲ್ಲಿ, ಅವನು ಬಯ್ಯುತ್ತಿರುತ್ತಿದ್ದ...ಇಲ್ಲವೇ ಅವನು ತನ್ನ ಪದ್ಯಗಳಲ್ಲಿನ

ಸೌಂದರ್ಯದ ವೈಭವೀಕರಣದಿಂದ, ನಿಗೂಢ ದೃಷ್ಟಾಂತಗಳಿಂದ ನಮ್ಮನ್ನು ಮುಚ್ಚಿ ಹಾಕಿ ಬಿಡುತ್ತಿದ್ದ. ಅವನ ಮಾತುಗಳೆಂದರೆ ಅದೊಂದು ಹಿಮಪಾತ–ಶಬ್ದಗಳದ್ದು... ವಿಚಿತ್ರ ಅತ್ಯಪೂರ್ವವಾದ್ದು!...ಒಮ್ಮೆ...ನಾವೆಲ್ಲ ಕಟ್ಟಿಗೆಯನ್ನ ಜೋಡಿಸಿ ಒಟ್ಟು ತ್ತಿದ್ದೆವು. ನಿಶ್ಯಕ್ತನಾದ ಮೆಂದೆಲ್ ವಿಪರೀತ ದಣಿವಿನಿಂದ ಒಂದು ಕ್ಷಣ ಕಣ್ಣು ಮುಚ್ಚಿದಾಗ ಗಾರ್ಡುಗಳಲ್ಲಿ ಒಬ್ಬನು ಒಂದು ಜಾಡಿಯ ತುಂಬ ತಣ್ಣೀರನ್ನು ಅವನ ಮೇಲೆ ಸುರಿದುಬಿಟ್ಟ. (ಅಂದು ಉಷ್ಣತೆ ನೀರನ್ನು ಹೆಪ್ಪುಗಟ್ಟಿಸುವದಕ್ಕಿಂತ ಕಡಿಮೆ ಯಾಗಿತ್ತು) ಕುರಿಯ ತುಪ್ಪಳದ ಬೆಚ್ಚಗಿನ ಕೋಟು ಧರಿಸಿದ ಗಾರ್ಡುಗಳೆಲ್ಲ ಹೋ... ಅಂತ ನಕ್ಕರು. (ನಾವು ಈ ಗಾರ್ಡುಗಳಿಗೆ ಜಾಕ್‌ಬೂಟ್ಸ್ ಅನ್ನುತ್ತಿದ್ದೆವು) ಅವರ ಗುಲಾಬಿ ಗಲ್ಲ ಮತ್ತು ಉಬ್ಬಿದ ಹೊಟ್ಟೆಗಳು ಕುಲು ಕುಲು ಅಂತ ನಕ್ಕವು... ಮೆಂದೆಲನ ಒದ್ದೆಯಾದ ಬೂದು ಬಣ್ಣದ ಕೂದಲು ಹೆಪ್ಪುಗಟ್ಟುತ್ತ ಹಣೆಗೆ ಅಂಟಿ ಕೊಳ್ಳತೊಡಗಿದವು...ಆಗ ಮೆಂದೆಲ್ ನಿಧಾನವಾಗಿ ಸೆಟೆದು ನಿಂತ—ಈಗ ಅವನ ಕಣ್ಣುಗಳು ಮಾಡಿದ್ದೇನು...?...ಅವು ಜೋಪಾಗಿ ಮುಂದೆ ಚಾಚಿಕೊಂಡು ಹಣಕಿ ನೋಡುತ್ತ ಈ ಮನಶಾ...ಇವ–ಇವರಪ್ಪನ ಮಗ...ಇವ ಏನ ಮಾಡಲಿಕ ತ್ಯಾನೆ...? ಅಂತ ಕೇಳಿದವು. ಅವನ ಆ ಮಾತಾಡೂ ಕಣ್ಣೊಳಗ ದ್ವೇಷ ಅಥವಾ ತಕರಾರೆನ್ನುವುದು ಒಂದಿಷ್ಟೂ ಇರಲಿಲ್ಲ. ಅವುಗಳೊಳಗೆ ಇದ್ದದ್ದು ಬರೀ ತೀಕ್ಷ್ಣತೆ.

ತಿಂಗಳಿನಲ್ಲಿ ಎರಡು ರವಿವಾರ–ಒಂದು ಬಿಟ್ಟು ಒಂದು–ನಮಗೆ ವಿಶ್ರಾಂತಿಯ ದಿನಗಳು. ಈ ರವಿವಾರಗಳ ಮಧ್ಯಾಹ್ನಗಳಲ್ಲಿ ಮೆಂದೆಲ್ ನಮಗೆ ಕಥೆಗಳನ್ನು ಹೇಳುವವ. ಮೆಸ್ಸಿನ ಬ್ಯಾರಕ್ಕಿನಲ್ಲಿ ನಾವೆಲ್ಲ ಸೇರುತ್ತಿದ್ದೆವು. ನಾವೆಲ್ಲ ಅಂದರೆ–ಜ್ಯೂ ಗಳು...ವಾರ್ಸಾದವರು, ಸೊಸ್ನೊವೆಯಿಕ್‌ನವರು. ಕ್ರಾಕೋವವರು...ಮಾತಿನಿಂದಲೇ ಉತ್ತೇಜಿತರಾಗುವವರು...ಅವನ ಮಾತಿಗೆ ಜಾದೂಶಕ್ತಿ ಇತ್ತು. ಅದು ನಮಗೆ ಪಂಚಪಕ್ವಾನ್ನಗಳ ಸಬ್ಬತ್ ಹಬ್ಬದ ಊಟದ ಮೋಜನ್ನ ಜ್ಯೂ ಷೋಡಶಿಯ ಸೌಂದರ್ಯವನ್ನ...ಹಣ್ಣಿನ ಹೋಳುಗಳನ್ನು ಸೇರಿಸಿ ಮಾಡಿದ ಕೇಕ್, ಸವಿ ಮಧುರ ವಾಸನೆಯ ಪಾಲೆಸ್ಟೀನಿನ ಮದಿರೆಯನ್ನ...ಒಟ್ಟು ನಾವು ಕಳೆದುಕೊಂಡ ಸುಂದರ ಲೋಕದ ನೆನಪನ್ನ ನಮ್ಮಲ್ಲಿ ಹುಟ್ಟಿಸುತ್ತಿತ್ತು. ಮಾತುಗಳು ನಮ್ಮಲ್ಲಿ ಬದಲಾವಣೆ ಯನ್ನು ಹುಟ್ಟಿಸುತ್ತಿದ್ದವು...ಬೆಚ್ಚಿಬೀಳುವಂತೆ ಭಯಾವಹವಾಗುತ್ತಿದ್ದವು. ನಮ್ಮನ್ನು ಅಂತರ್ಮುಖಿಗಳನ್ನಾಗಿಸುತ್ತಿದ್ದವು, ಕಣ್ಣೀರು ಸುರಿಸುವಂತೆ, ಬಿದ್ದು ಬಿದ್ದು ನಗುವಂತೆ ಮಾಡುತ್ತಿದ್ದವು. ಮಾತುಗಳು ನಮ್ಮನ್ನು ಚಬಕದಿಂದ ಬಾರಿಸುತ್ತಿದ್ದವು, ಉಸಿರು ಗಟ್ಟಿಸುತ್ತಿದ್ದವು. ಬೆವರುವಂತೆ, ನಿಟ್ಟುಸಿರುಬಿಡುವಂತೆ ಮಾಡುತ್ತಿದ್ದವು. ಇಷ್ಟೆಲ್ಲ ಮಾಡುವ ಮಾತಿನ ಗಾರುಡಿಗಾರ ಮೆಂದೆಲ್ ಟೆಯಿಚ್‌ಮನ್–ಸುಮಾರು ಐವತ್ತು ವರ್ಷಗಳ ಕಡ್ಡಿಯಂತಹ, ಎತ್ತರವಾದ ವ್ಯಕ್ತಿ–ಒಳಗೊಳಗೇ ಉರಿಯುತ್ತ, ಬೆಂಚಿನ ಮೇಲೆ ನಿಂತು ಹಾವಭಾವ ಮಾಡುತ್ತ ಮಾತಾಡುವವನು...

ಒಮ್ಮೆ ಉಳಿದವರೆಲ್ಲ ಬಚ್ಚಲುಮನೆಯಲ್ಲಿ ಸೇರಿದಾಗ ನಾನು ಅವನನ್ನು ಆ ಕ್ಯಾಂಪಿನ ಇಪ್ಪತ್ತು ಬ್ಯಾರಕ್ಕುಗಳ ಆಚೆ ಕರೆದುಕೊಂಡು ಹೋಗಿ, ಗಾರ್ಡುಗಳಿಗೆ ಕಾಣದಂತೆ ಮರೆಯಲ್ಲಿ ನಿಂತು ನಡುಗುವ ದನಿಯಿಂದ ಕೇಳಿದ್ದೆ–ಮೇವೆಲ್...ನಾನೂ ಕಥೀ ಹೇಳೂದು ಕಲೀಬೇಕು...ಅವ ನನ್ನ ಮಾತು ಕೇಳಿಸಿಕೊಳ್ಳದವನಂಗ ಅನ್ಯಮನಸ್ಕನಾಗಿ ನಿಂತಿದ್ದ. ಆಮೇಲೆ ಒಮ್ಮೆಗೇಲೇ ರಭಸವಾಗಿ ಮಾತಾಡಲಿಕ್ಕೆ ಸುರುಮಾಡಿದ. ಶಬ್ದಗಳ ಪ್ರವಾಹ ! ನನಗೆ ಆಗ ಅವ ಹೇಳಿದ್ದು ಏನೇನೂ ಅರ್ಥವಾಗಲಿಲ್ಲ. ಈಗ ಬಹಳ ದಿನಗಳಾದ ಮ್ಯಾಲೆ ತಿಳಿಧಂಗನಸತದ. ಆದರ ಅದನ್ನ ನಿಮಗ ಹೆಂಗ ಹೇಳೇನು ?...ಅವನ ಮಾತಿನ ಬಲದ ಮುಂದ ನನ್ನದು ಬರೇ ತೊದಲು ತೊದಲು !

ಅವ–ನೂ... ಹಂಗರ ನಿನಗ ಕಥೀ ಹೇಳೂದು ಕಲೀಬೇಕಾಗೇದ ಅನ್ನು... ನಿನ್ನೊಳಗ ಈಗಾಗಲೇ ಇದು ಇದ್ದರೂ ಇರಬಹುದು....ಯಾರಿಗೆ ಗೊತ್ತು.... ಯಾಕಂದರ...ಒಮ್ಮೆ ಲೋರ್ಝನ್‌ನಾಗೋ ಅಥವಾ ಪಾರ್ಸದಾಗೋ....ಸಬ್ಬತ್ ಹಬ್ಬದಾಗ ನಾನು ನನ್ನ ಗೆಳ್ಯಾರಿಗೆ ಕಥಿ ಹೇಳಲಿಕ್ಕತ್ತಿದ್ದೆ. ಆಗ ಮಗುವಿನಂಥಾ ಮೋತಿಯ ಒಬ್ಬ ಯುವಕ ನನ್ನ ಹತ್ತಿರ ಬಂದ....ಬಂದು–ಹಾಂ....ಅಂದು ನೀನು ಈಗ ಕೇಳಿದ್ದನ್ನs ಕೇಳಿ, ಸುತ್ತಲೂ ಮಂದಿ ಇದ್ದದ್ದರಿಂದ ಒಂದು ನಮೂನಿ ಗಾಬರಿಯಾದವನಂಗೆ ನಿಂತುಕೊಂಡ. ನಾಯೇನು ಮಾತಾಡಲಿ ?...ನಾ ಕವಿಯಾಗಬೇಕು.... ಕವಿತಾ ಕಟ್ಟಿ ಹಾಡಬೇಕು. ಆದರ ನನಗ ಅದು ಸಾಧ್ಯ ಆಗವಲ್ಲದು...ಅಂತ ಯಾರರೇ ಬಂದು ನನಗ ಹೇಳಿದರ ನನಗ ಒಂದು ಥರದ ಖುಷಿ ಆಗತದ. ನಾನು ಆ ತರುಣನಿಗೆ ಪಂಪ್ ಹೊಡಿಯಲಿಕ್ಕತ್ತಿದೆ...ಅದ್ಯಾಕ ಸಾಧ್ಯ ಆಗವಲದು ?....ನೀ ಎಲ್ಲಿ ಇರತೀ ಹೇಳು ? ....ನನಗನಿಸುವ ಮಟ್ಟಿಗೆ ಈ ಜಗತ್ತಿನೊಳಗೆ ಬದುಕುವವ ಯಾರೂ ಜೀವನದಿಂದ ಬಚ್ಚಿಟ್ಟುಕೊಳ್ಳುವುದು ಸಾಧ್ಯವೇ ಇಲ್ಲ. ಆ ಯುವಕ ಹೇಳಿದ–ಊರಿನ ಆಕಡೇ ದಂಡಿಗೆ ಕೊಳಚಿ ತುಂಬಿದ ಒಂದ ಓಣಿ ಅದ. ಆ ಓಣೀವಳಗ ಒಂದ ಹಳೇ ಮನಿಯೊಳಗ ಇರತನು .. ಹುಟ್ಟಿದಾಗಿನಿಂದ ಅಲ್ಲೇ ಇದ್ದು ಇದ್ದು–ಅವಗ ಮತ್ತೇನೂ ಗೊತ್ತಿರಲಿಲ್ಲ....ಮಸೆತುಂಬ ಕಪ್ಪಿಗಳಂಥ–ನೋಡಿದರೆ ದೂರ ಓಡಿಹೋಗಬೇಕನಿಸುವಂತಹ ಜನ...ಆ ಬುದ್ಧಿವಂತ ಪುಟ್ಟ ತರುಣ ಇದಕ್ಕಿಂತ ಹೆಚ್ಚಿಗೇನು ಹೇಳಲಿಲ್ಲ... ಹಾಂ....ಆದರ ಇದಕ್ಕಿಂತಾ ಹೆಚ್ಚಿಗೇನು ಬೇಕು. ಇಷ್ಟರಮ್ಯಾಲs ನಾ ಮನೀ ನೋಡಬಲ್ಲೆ. ಆದರ ವಾಸನಿಯನ್ನ ತಿಳಿಯಬಲ್ಲವನಾಗಿದ್ದೆ .. ನೀವು ಅಲ್ಲಿ ಒಳಗ ಹೆಜ್ಜೀ ಇಟ್ಟಕೂಡಲೇ ಬಾಗಲೊಂದು ತೆರೆಯುತ್ತದೆ. ಡೊಣ್ಣೆಮೂಗಿನ ಮುದುಕ ಒಬ್ಬ ಹಣಿಕ ನೋಡ್ತಾನೆ. ಅವ ಇದೇ ಈಗ ಗಡ್ಡಾ ಕೆರಕೊಂಡಿದ್ದು ಅವನ ಗಲ್ಲಕ್ಕೆ ಇನ್ನೂ ಸಾಬಾಣು ಮೆತ್ತಿಕೊಂಡಿದೆ. ತ್ಯಾಪೀ ಹಚ್ಚಿದ ಅವನ ಅಂಗಿಯ ತೆರೆದ ಕುತ್ತಿಗಿಯೊಳಗಿಂದ ಅವನ ಜಿಗುಟು ಜಿಗುಟಾದ ಮೈಯ್ಯು ಕಾಣುತ್ತದೆ...ಜೀವಮಾನ ಎಲ್ಲಾ ದುಡದು ದುಡದು ಸಣ್ಣಗಾದ ಅವನ ಮೈಯಿಂದ ಎಲುಬುಗಳು ಹಸಿರು ನರಗಳು ಹೊರಗ ಚಾಚಿಕೊಂಡಿದ್ದವು...ಬಾಗಲ ಹೊರಗ ಇಷ್ಟುದ್ದ ಗೋಣು ಚಾಚಿ ಅವನು ಯಾರ

ಬೇಕಾಗಿತ್ತು...ಅಂತಲೋ ಎಲ್ಲಿಗೆ ಹೋಗಬೇಕಾಗಿತ್ತು ? ಹಾದೀ ತಪ್ಪಿಗೊಂಡೀರೇನು ಅಂತಲೋ ಕೇಳುವನು...ದೇವರಿಗೇ ಗೊತ್ತು. ಯಾರಾದರೂ ಅತಿಥಿ ಅಭ್ಯಾಗತರು ಏನಾದರೂ ಈ ಮನೆಗೆ ಬಂದಿರಬಹುದೆ ?...ಯುವಕನ ಹೆಸರು ಹೇಳಿದೆ. ಆ ಮುದುಕ ತಲೆಯಾಡಿಸುತ್ತಾನೆ...ಅವನಿಗೆ ಈ ಹೆಸರಿನವನ ಪರಿಚಯವೇ ಇಲ್ಲ. ಆದರೆ ಅವನು ಒಮ್ಮೆಗೇ ನೆನಪು ಬಂದವನಂಗೆ–ಹಾಂ. ಹೌದು. ಮ್ಯಾಲ, ಅಟ್ಟದ ಮ್ಯಾಲಿನ ಕಡೀ ರೂಮ್ನಾಗ ಇರಬೇಕು...ಆದರ ಅವನ ಹೆಸರು ಬ್ಯಾರೇ ಏನೋ ಅದ... ಪೋಯೆಟ್ ಲೀಪರ್ ಅಂತೂ ಏನೊ ...ಆದರ ನೀವು ಹುಡುಕ್ಯಾಡಲಿಕ್ಹತ್ತಿದ್ದು ಅವನ್ನs ಇರಬೇಕು. ಯಾಕಂದರ ಪೋಯೆಟ್ ಅಂದರ ಉಗ್ರಗಾಮಿ ಇದ್ದಂಗ. ಇಡೀ ಮನೀಗs ಅವ ಅಂದರ ನಡುಗತದ. ಹಾಂ. ಅಂದಂಗ ನೀವು ಶಿಶು ಕಲ್ಯಾಣ ಇಲಾಖೆಯವರು ಹೌದಲ್ಲೋ ?...ಹೌದು. ಇಲ್ಲಿ ಯಾರರೇ ಹೊರಗಿನವರು ಬರ್ತಾರಂದರ ಅವರs ಇರಬೇಕು. ಪೊಲೀಸ ಇಲಾಖೆಯವರು ಇದ್ದಿರಲಿಕ್ಕಿಲ್ಲ ಅಂತ ಅನಕೋತೇನು...ಹಾಂ. ಈಗರೇ ಬಂದಿರಿಲಾ. ತಡಾ ಏನೋ ಆಗೇದ. ಆಗವಲ್ಲದ್ಯಾಕ. ಅಂತೂ ಕಡೀಕ ಬಂದರೆಲಾs...ಹಾಂ. ಆ ಹುಡುಗಾs...ಅಪ್ಪ ಇಲ್ಲದs ಕಟ್ಟೋಕೆಣ್ಣೀ ಇಲ್ಲದs ಬೆಳದದ್ದು. ಅವ್ವ ಒಬ್ಬಾಕಿ ಇದ್ದಾಳೆ. ರೋಗಿಷ್ಟೆ. ಆಕಿ ಇವನ ಕಾಟಾ ತಾಳಲಾರದೆ ಹೊಡದರ ಇವ ಆಕಿನ್ನs ತಿರಿಗಿ ಹೊಡೀತಾನ. ಕಿರಿಚಾಡೂದೇನೂ...ಟೇಬಲ್ಲು ಬೆಂಚುಗೋಳನ ಎತ್ತೆತ್ತಿ ಒಗದು ಮುರದ ಹಾಕೂದೇನೂ...! ಛೀ ಛೀ !...ಒಂದೆರಡಲ್ಲ ಬಿಡ್ರಿ. ಸರ್ವಗುಣ ಸಂಪನ್ನ !...ಕಡೀತಾನೆ. ಹಾದೀ ಬಡೀತಾನೆ...ಹಾ... ಇಷ್ಟ ಇದ್ದಾನ–ಹೆಂಗಸರ ಚಟಾ ಸೈತ ಅದ...ಕದೀಮ ಅಂದರ ಕದೀಮ. ಮುಟಗೀ ಅಷ್ಟ ಇದ್ದಾನ ಏರೇ ಕಾಳರಾತ್ರಿಯಂಗ ಕೆಡುಕನಿದ್ದಾನ...ಮಹಾವಿಕ್ಷಿಪ್ತ ಇದ್ದಾನ್ರಿ...ಹೂ...ಅವನೂ ಏರೇ ಅನ್ರಿ...ಈ ಮನ್ಯಾಗ ಇದ್ದು ಅದ್ಯಾವ ಮಂಗಾ ವಿಕ್ಷಿಪ್ತ ಆಗದ ಉಳದಾನು !...

ಆ ಮುದುಕ ಮಾತಾಡೇ ಮಾತಾಡಿದ. ನಿಧಾನವಾಗಿ–ಧಾರಾಕಾರವಾಗಿ. ನಾನು ಈ ಪೋಯೆಟ್ ಲೀಪರನ್ನ ಸೈತ ಭೆಟ್ಟಿಯಾಗಲಿಕ್ಕೆ ಹೋಗಲಿಲ್ಲ. ಆದರ ಇಷ್ಟು ಸಾಕು. ಇದಕಿಂತಾ ಹೆಚ್ಚಿಗೇನು ಬೇಕು ? ಇಷ್ಟರವ್ಯಾಲೆ ಆ ಮುದುಕ ತನಗೇನೂ ಇದು ಹತ್ತಿದ್ದಲ್ಲ ಅಂತನ್ನುವ ಹಂಗೆ ಮಹಾ ಬುದ್ಧಿವಂತಿಕೆಯಿಂದ ಮಾತಾಡುವದನ್ನು ನೋಡಿದರೆ ಅವಗೆ ಮಾತಾಡಲಿಕ್ಕೆ ಒಂದು ನೆವ ಬೇಕಾಗಿತ್ತು ಅಂತನಿಸಬೇಕು. ಹೆಂಗರೇ ಮಾಡಿ ಅವ ನಿಮ್ಮನ್ನ ವಾದಕ್ಕ ಎಳೀಬೇಕು. ತನ್ನ ಜೀವ–ಸಾವಿನ ಪ್ರಶ್ನೆ ಇದು ಅಂತನ್ನುವಂಗೆ ಆಕಾಶ ಪಾತಾಳ ಒಂದು ಮಾಡಿ ವಾದಕ್ಕ ಎಳೆಯುವವ... ಅದರಾಗೂ ಒಬ್ಬ ಅಪರಿಚಿತ–ಹೇಳಿದ್ದನ್ನೇ ಹೇಳುವ ತನ್ನ ಈ ಮಾತುಗಳನ್ನ ಕೇಳದೇ ಇರುವವ ಒಬ್ಬ ಸಿಕ್ಕರೆ ಬಿಟ್ಟಾನೆಯೆ !...ಇನ್ನು ಮುಂದೆ ಇಂಥಾ ಎಷ್ಟು ಹೊಸಾ ಮುಖಗಳು ಅವನಿಗೆ ಸಿಕ್ಕಾವು ! ಈಗಾಗಲೇ ಅವನ ಎಲುಬುಗಳು ಸವೆದು ಹೋಗಿವೆ...ಈಗ ಅವನು ನಿಮ್ಮನ್ನು ಪುಸಲಾಯಿಸಿ ರೂಮೊಳಗೆ ಬಂದು ಕುಳಿತು

ಕೊಳ್ಳುವಂತೆ ಮಾಡುತ್ತಾನೆ...ಇದೀಗ ನಿಮ್ಮಿಂದ ಮತ್ತಗೆ ಸಿಗರೇಟೊಂದನ್ನು ಕಸಿಯುತ್ತಾನೆ...(ಅಹಾ !...ಬಲು ದಿನಗಳಿಂದ ದೊರೆಯುದ ಸುವಾಸನೆಯ ಪರದೇಶೀ ಸಿಗರೇಟು !)...ಅವನು ಉತ್ತೇಜಿತನಾಗಿ ಕೂತಲ್ಲಿಯೇ ಚಡಪಡಿಸುತ್ತಾನೆ. ಧ್ವನಿ ತಗ್ಗಿಸಿ ಆಪ್ತನಂತೆ ಪಿಸುಗುಟ್ಟತೊಡಗುತ್ತಾನೆ...ಆ ಮನಿಯ ಬಗ್ಗೆ ಅವನಿಗೆ ಎಲ್ಲ ಗೊತ್ತಿರುವದರಿಂದ ಅವನ ಮಂಗಾಟ ತಾಳಿಕೊಳ್ಳಬೇಕಲ್ಲ !...

ಈಗ ಆ ಮುದುಕ ಪೋಟ್ಲ್ ಲೀಪರನ್ನ ಬಿಟ್ಟು ತನ್ನ ಬಗ್ಗೆಯೇ ಮಾತಾಡ ತೊಡಗುತ್ತಾನೆ. ಒಬ್ಬಂಟಿಯಾಗಿದ್ದಾನವ. ಒಂಟಿ ನಾಯಿಯಂತೆ ಒಬ್ಬಂಟಿ. ಆರು ಮಕ್ಕಳು. ಆರೂ ಓಡಿಹೋಗಿವೆ...ಹಾಂ...ಅಂಥಂಗ ಮನೀಬಿಟ್ಟು ಓಡಿಹೋದ ಮಕ್ಕಳ ವಿಚಾರಾನೂ ನಿಮ್ಮ ಇಲಾಖದನs ಹೌದಲ್ಲೋ...ಅವನ ಹೆಂಡತಿಯದು ಅತ್ಯಂತ ನೋವಿನ ಸಾವು...ಅವ ಮಾತಾಡುತ್ತಿರಬೇಕಾದರೆ ಬಾಗಿಲು ತೆರೆದು ತೆರೆದು ಮುಚ್ಚಿಕೊಳ್ಳುತ್ತಿತ್ತು. ಕುತೂಹಲದಿಂದ ಗಾಯಗೊಂಡ ಮುಖಗಳು ಹಣಕಿಕ್ಕುತ್ತಿದ್ದವು. ಆ ಇಡೀ ಮನೆ ತಳಮಳಕ್ಕ ಸಿಕ್ಕಂತಿತ್ತು. ಎದ್ದು ನಿಂತು ಮೈಮುರಿದುಕೊಳ್ಳುತ್ತಿದ್ದಂತಿತ್ತು...ಅದು ಹಿಂಸೆ ಮತ್ತು ಕೊಲೆಗಳ ತಾಣದಂತಿತ್ತು...ಅಲ್ಲಿರುವವರೆಲ್ಲ ಜೀವ ತೇದು ದುಡಿಯುವವರು. ಮೂವತ್ತು ವರ್ಷಗಟ್ಟಲೇ ಬೆಳಗಿನ ನಾಲ್ಕಕ್ಕೇ ಎದ್ದು, ಆ ನಡುಗುವ ಚಳಿಯಲ್ಲಿ ಹೊರಬಿದ್ದು–ಹೊಟ್ಟೆಯಲ್ಲಿ ಹಿಡಿಸಲಾರದಷ್ಟು ಜನರನ್ನು ಹೊತ್ತು, ಇನ್ನೇನು ಬಿರಿದೇಹೋಗುತ್ತದೆ ಅನ್ನುವಂಥ ಆ ಗಲಾಟೆಯ ಟ್ರೇನನ್ನು ಹತ್ತಿ ಹೊರಡುವದು...ಸಾಯಂಕಾಲ ಮರಳುವರು...ಕಪ್ಪು ಹೊಗೆಯ ಫ್ಯಾಕ್ಟರಿಗಳಿಂದ, ಒದ್ದೆಯಾದ ನೆಲಮಾಳಿಗೆಗಳಿಂದ...ಮರಳುವದು ಆ ಗಬ್ಬುವಾಸನೆಯ ಓಣಿಗೆ...ಹಳೆಯ ಆ ಮನೆಗೆ. ಅವರು ದಣಿದಿರುತ್ತಾರೆ...ಜಪ್ಪುಗಟ್ಟಿದಂಗಾಗಿರುತ್ತಾರೆ. ಹಿಂಗೆ ನೀನು ಎಷ್ಟು ಕಾಲ ಬದುಕುತ್ತೀ ? ಒಂದು ದಿನ ಕುಸಿಯಲೇಬೇಕು... ಗಂಡಸರು ಕುಡಿಯುತ್ತಾರೆ. ಕುಡಿದು ಹೆಂಡಂದಿರನು ಹೊಡೆಯುತ್ತಾರೆ... ಹೆಂಗಸರು ?...ಅವರು ಬಸಿರಾಗುತ್ತಾರೆ...ಕಂದಮ್ಮಗಳನ್ನು ಹೂಳುತ್ತಾರೆ...ಮತ್ತೆ ಬಸಿರಾಗುತ್ತಾರೆ...ಇನ್ನು ಮಕ್ಕಳು ? ಬದುಕಿ ಉಳಿದವು ಬುದ್ಧಿಕುಂಠಿತವಾಗಿ ಬೆಳೆಯುತ್ತವೆ. ಅವು ಈ ಮನೆ ಎನ್ನುವದು ತಮ್ಮ ಜೀವರಸವನ್ನು ಹೀರುತ್ತದೆ ಎನ್ನುತ್ತವೆ... ಹೀರಿ ಹೀರಿ ಹಿಂಡಿ ಹಿಪ್ಪೆಮಾಡುತ್ತದೆ !...ಮುದುಕ ಹೇಳುತ್ತಲೇ ಇರುತ್ತಾನೆ. ಹಾಂ...ನೀವು ನಂಬಲಿಕ್ಕಿಲ್ಲ. ಈ ಮುದುಕ ಮ್ಯಾರ್ಕ್ಸಿಕ್‌ನಸ್ಕೀ ನೋಡಿರಿ. ಎಂಥಾ ಸಾತ್ವಿಕ ಮನಸಾ. ನಿಜವಾದ ಕ್ರಿಶ್ಚಿಯನ್ !...ದುಡದು ದುಡದು ಸಣ್ಣಗಾಗ್ಯಾನೆ. ಇವಗ ನಾಲ್ಕು ಮಕ್ಕಳು. ಎರಡು ಸತ್ತು ಗೋರೀ ಸೇರಿದವು. ಉಪಯೋಗ ಇಲ್ಲದ ಸಣ್ಣದು ಮಾತ್ರ ಉಳಕೊಂಡದ. ಈ ಕ್ರಿಮಿಗಾಗಿ ಅವರು ಏನೆಲ್ಲಾ ಮಾಡಿದರು. ಆದರ ಈಗ ಅದು ದರೋಡೀ ಮಾಡತದ. ಒಬ್ಬನ ತಲೀ ಒಡದು ಜೇಲಿನಾಗ ಅದ. ನೋಡ್ರಿ ! ಅಪ್ಪಗ–ಮಗ್ಗ ಎಲ್ಲೀ ಸಾಮ್ಯತೆ ?...ಜೇಲಿನಾಗ ಯಾರನರೇ ಕೊಲ್ಲದಿದ್ದರ ಇನೊಂದ ಯೋಳವರ್ಷಕ್ಕ ಹೊರಗ ಬರಬಹುದು...ಆದರ ಎಲ್ಲಾ ಹಿಂಗs ಅಂತಲ್ಲ.

ಇಲ್ಲಿ ವಿಚಿತ್ರವಾದದ್ದು ನಡೀಬಹುದು. ಉದಾಹರಣೆಗೆ ಈ ಕಾಮಿನ್ಸ್ಕಿನ ಮಗಳನ್ನ ತಗೋರಿ...ಇಕಿ ಈ ಕಾಮಿನ್ಸ್ಕಿ ಹೆಂತಾಕಿ ಅಂತ ನಿಮಗ ಗೊತ್ತs ಅದ... ಊರಸೂಳಿ...ಹೆಣ್ಣನಾಯಿ ! ಹಿಂತಾಕಿಗೆ ಆ ನೀನಾನಂಥಾ ಮಗಳು...ನೀನಾ ಅಂದವರ ಲಿಲೀ ಹೂವು ಇದ್ದಂಗ...ಅಸಲೀ ಮುತ್ತು...ಪಾಪ. ದೇವರು ಅದನ್ನ ರಕ್ಷಿಸಲಿ...

ಮೆಂಡೆಲ್ ಮಾತಾಡುತ್ತಿದ್ದರೆ ಅವನ ಮೃದುವಾದ ಧ್ವನಿ ಉತ್ತೇಜಿತವಾಗಿ ಏರಿಳಿಯುತ್ತಿತ್ತು. ಅದು ಏನನ್ನೋ ಬಗೆಯುತ್ತ ಹುಡುಕುತ್ತಿರುತ್ತದೆ...ಅದು ಸಂತನೊಬ್ಬನ ವಾಣಿಯ ನೆನಪು ತರುತ್ತಿರುತ್ತದೆ...ಅವನು ಮಾತಾಡುತ್ತ ಮಾತಾಡುತ್ತ ಇರಬೇಕಾದರೆ ನಾವಿಬ್ಬರೂ ಅದೆಷ್ಟು ಸಲ ಆ ಬ್ಯಾರಕ್ಕುಗಳನ್ನು ಸುತ್ತು ಹೊಡೆದೆವೋ ಯಾರಿಗೆ ಗೊತ್ತು. (...ಬೂದುಬಣ್ಣದ ಮಂಜು ಮುಸುಕಿದ ಆಕಾಶದ ಕೆಳಗೆ ಮುಳ್ಳು ತಂತಿಗಳಿಂದ ಬಂಧಿತವಾದ ಎರಡು ತುದಿಗಳ ನಡುವೆ ಮತ್ತೆ ಮತ್ತೆ ಸುತ್ತು ಹೊಡೆಯುತ್ತಿರುವ ಕನಸು ನನಗೆ ಇಂದಿಗೂ ಬೀಳುತ್ತಿರುತ್ತದೆ.. ಎಂದು ಕೊನೆ ಹಾ ಎಂದು ಕೊನೆ...ತಪ್ಪಿಸಿಕೊಳ್ಳಲು ಸಾಧ್ಯವಾದೀತೇ ?....) ಆ ಜಾಕ್ ಬೂಟುಗಳ ಸಂಶಯದ ದೃಷ್ಟಿ ಬಿದ್ದುಗಿದ್ದೀತೆಂದು ನಾವು ಹದಿನೈದು ನಿಮಿಷಗಳಷ್ಟು ಕಾಲ ಕಕ್ಕಸಿನಲ್ಲಿ ಕೂತು ಕಾಲಕಳೆದೆವು. ನಾವು ಹುಣ್ಣಿನಿಂದ ನರಳುವವರನ್ನ ನೋಡುತ್ತ ನೋಡುತ್ತಲೇ ಸುತ್ತು ಹೊಡೆಯುತ್ತಿದ್ದೆವು.. ಕ್ಲೋರಿನ್ನಿನ ಘಾಟುವಾಸನೆ ಇಡಿಗಿತ್ತು. ನಮಗದು ಗೊತ್ತಾಗುತ್ತಲೇ ಇರಲಿಲ್ಲ...ನಾವು ಮತ್ತೆ ಹೊರಗೆ ಬಂದು ಬಚ್ಚಲಿನ ಕಿಡಕಿಯಲ್ಲಿ ಹಣಿಕಿ ಹಾಕಿದೆವು.. ಅಲ್ಲಿ ಸೇರಿದ ಮಂದಿ ಇನ್ನೂ ಹಾಗೇ ನಿಂತು ಪ್ರಾರ್ಥಿಸುತ್ತಲೇ ಇದ್ದಾರೆ. ಅರೇ ! ಅವರೆಲ್ಲ ಪೂಜೆಯ ವ್ಯಾಳ್ಯಾದೊಳಗ ಹೊತಗೊಳ್ಳೊವಂಥಾ 'ತಾಲಿಸ್' (ಮಡಿ) ಹೊತಗೊಂಡಾರ...ಇವನ್ನ ಹೆಂಗ ಉಳಿಸಿಕೊಂಡರಿವರು ? ಜಾಕಬೂಟುಗಳು ನಮ್ಮದೆಲ್ಲಾ ನಾಕನಾಕ ಸರತೆ ಬಿಚ್ಚಿಸಿ ನೋಡಿದ್ದರು. ಎಲ್ಲಾ ಕಿತ್ತಿಗೊಂಡಿದ್ದರು...ನಾವು ಮುಂದ ನಡದೆವು. ಮೆಂಡೆಲ್ ಈಗ ಮೌನಿಯಾಗಿದ್ದ. ಅವ ಡ್ರಿಲ್ ಮೈದಾನದ ಮುಂದೆ ಒಮ್ಮಿಗೆಲೇ ನಿಂತುಕೊಂಡ. ನಿಂತು ಏನನ್ನೋ ಅಪ್ಪಿಕೊಳ್ಳುವವನಂಗೆ ಎರಡೂ ಕೈಗಳನ್ನು ಮ್ಯಾಲಕ್ಕೆತ್ತಿ.... ಜೋರಾಗಿ ಉಸಿರು ಎಳೆದುಕೊಳ್ಳುತ್ತ ಕೈಗಳನ್ನ ಕೆಳಗೆ ಕುಸಿಯಲಿಕ್ಕೆ ಬಿಟ್ಟ...ಮುಂದೆ ಇಲ್ಲೆ...ಸೆಲ್ಯುಲೋಸ್ ಫ್ಯಾಕ್ಟರಿಯ ವಾಸನೆ....ಅಲ್ಲಿ ಬಿಳಿದಾದ ಹಿಮಬಿದ್ದ ಗುಡ್ಡದ ಓರೆಯಲ್ಲಿ ಒಡೆದುಕಾಣುವಂತೆ ಹೊಗೆ ಉಗುಳುವ ಫ್ಯಾಕ್ಟರಿಯ ಕಪ್ಪನೆಯ ಕಟ್ಟಡ. ಅದು ಪೀತವರ್ಣದ ವಿಷಕಾರಿಯಾದ ಸಿಹಿವಾಸನೆಯ ಹೊಗೆಯನ್ನು ಉಗುಳುತ್ತಿದೆ... ಕ್ಯಾಂಪಿನ ಈ ತುದಿಯ ಬ್ಯಾರಕ್ಕಿನಲ್ಲಿ ಈ ಸಿಹಿವಾಸನೆ ಹೆಚ್ಚು. ಅದಕ್ಕೇ ಈ ಭಾಗದಲ್ಲಿ ವಿಶೇಷ ಆಯ್ದು ಕೈದಿಗಳನ್ನು ಇಟ್ಟಿದ್ದಾರೆ.. ಶ್ರೀಮಂತರು....ಗೌರವಾನ್ವಿತರು.... ಇಂಥವರಿಗೆ ಈ ಭಾಗದಲ್ಲಿ ಕೆಲಸ...ಇವರು ಇಲ್ಲಿ ಬೆಚ್ಚಗೆ, ಸಿಹಿವಾಸನೆಯಲ್ಲಿ ಒಳಗಡೆಗೆ ಕೆಲಸ ಮಾಡುವರು. ಅಲ್ಲಿ ಹೊರಗಡೆಗೆ ಅಂಗಳದಲ್ಲಿ ಹೆಪ್ಪುಗಟ್ಟಿಸುವಂಥಾ ಥಂಡಿಯೊಳಗೆ ಮಡಿದು ಸಾಯಲಿಕ್ಕೆ ಅಥವಾ ಮರದ ದಿಮ್ಮಿಗೋಳು ಮೈಮ್ಯಾಲ ಬಿದ್ದು

ಸಾಯಲಿಕ್ಕೆ ನಾವು ಇದ್ದೀವಲ್ಲ!...ನಾವು-ಪಂಚಮರು!...ಹಿಂಗೆ ಈ ಫ್ಯಾಕ್ಟರಿಯ ಗಬ್ಬುವಾಸನಿಯೇ ನಮಗೆ ಸುವಾಸನೆ-ಉಚ್ಚವರ್ಗದವರಿಗೆ ಮೀಸಲಾದ ವಾಸನೆ ಅಂತ ಅನಿಸತೊಡಗಿದೆ...

ನಾನು ಮೆಂದೆಲ್ ಹೇಳಿದ ಆ ಹಳೆಯ ಮನಿಯ ಸಂಗತಿಯನ್ನು ಕೇಳಿ ಗೊಂದಲಗೊಂಡಿದ್ದೆ. ಇದರ ಮ್ಯಾಲೆ ನಮ್ಮಿಬ್ಬರ ನಡವೆ ಬಿದ್ದಿದ್ದ ಭಾರವಾದ ಮೌನವನ್ನು ಸರಸಬೇಕಾಗಿತ್ತು...ನಾನು-ಆ ಮನೀ...ಹಾಂ...ನೀನು ಅಲ್ಲೀದನ್ನೆಲ್ಲಾ ನೋಡಿಬಂದಿರಬೇಕಲಾs...ಆ ಹುಡಗs...?...ಅವನ್ನ ಭೆಟ್ಟಿ ಆಗಲಿಲ್ಲಾ?... ಅಂತಂದೆ. ಮೆಂದೆಲ್ಲ ನನ್ನ ಮಾತಿನಿಂದ ಆಘಾತವಾದವನಂತೆ ಮುಖಮಾಡಿ ನನ್ನನ್ನ ದುರುದುರು ನೋಡಿದ...ಹಂಗಾರ ನಿನಗ ಏನೇನೂ ಅರ್ಥ ಆಗಿಲ್ಲ ಅನ್ನು!...ನನ್ನ ಮಾತಾಡಿಸಿದ ಆ ಯುವಕನ ಮನಿಗೆ ನಾನು ಹೋಗೇ ಇಲ್ಲ ಅದು....ನಾನು ಅಲ್ಲಿಗೆ ಹೋಗೂದು ಮುಖ್ಯ ಅಂತೀ ಏನು?...ಈ ಮನೀ ಆದರವನು ಆ ಮನಿಯಾದರ ಏನು? ಯಾವದಾದರ ಏನು?...ಹುಂ!...ಮನಶಾರೊಳಗ ಶಕ್ತೀ ಹುಕ್ಕೊಂಡಿರ ತಾವ. ಆದರ ಅವರಿಗೆ ಗೊತ್ತ ಆಗೂದs ಇಲ್ಲ. ಅಂಗವಿಕಲರಾಗಿ ಕೂತಿರತಾರ. ಕಣ್ಣು ಮುಚಿಗೊಂಡು ಎಲ್ಲಾ ತೂತಗೋಳನ ಬಂದ ಮಾಡಿಕೊಂಡು ಕೂತಿರತಾರ. ಆದರ ಬದಕನ್ನೋದು ನುಗ್ಗೀ ನುಗ್ಗತಿರತದ...ಪ್ರಬಲವಾಗಿ...ಜನಕ್ಕ ಈ ರಭಸಾತ ಗೊಂಡು ಏನ ಮಾಡಬೇಕಂತ ಗೊತ್ತs ಇರೂದುಲ್ಲ...ಅದು ಈ ಮಂದಿಯ ನಿರ್ಲಿಪ್ತಿಯ ಕವಚವನ್ನ...ಇವರ ಮನಿಯನ್ನ...ಇವರ ಕಾನೂನುಗಳನ್ನ ಎಲ್ಲ ನ್ನೂ ಸಿಕ್ಕ ಸಿಕ್ಕಂಗ ಮುರದು ಮುರದು ಹಾಕತಿರತದ...ಮೆಂದೆಲ್ ಈ ಮಾತು ಹೇಳುವಾಗ ನಾವಿಬ್ಬರೂ ಕ್ಯಾಂಪಿನ ಗೇಟಿನ ಸಮೀಪದಾಗs ನಿಂತಿದ್ದೆವು. ಆದರ ಗಾರ್ಡಗೋಳಿಗೆ ನಾವು ಕಾಣಸತಿರಲಿಲ್ಲ...ಮಳೀ ಹಿಡಿದ ಭಾನುವಾರ ಅದು. ಆಕಾಶದೊಳಗೆ ಮೋಡದ ತುಣುಕಗೋಳು ಆಕಡೆಯಿಂದ ಈಕಡೆ ಈಕಡೆಯಿಂದ ಆ ಕಡೆ ಹರದಾಡಲಿಕ್ಕತ್ತಿದ್ದವು... ಗೇಟಿನ ಹೊರಗೆ ಜಾಕ್‌ಬೂಟುಗಳ ಗೆಳತಿಯರು ಬಂದು ಅವರ ಜೋಡೀ ಮಾತಾಡಿ ಕೋತ ನಿಂತರು. ಒಬ್ಬರಿಗೊಬ್ಬರು ಚಾಷ್ಟೀಮಾಡಿ ನಕ್ಕಾಡುತ್ತಿದ್ದರು...ಈ ಗಾರ್ಡುಗಳು...ಇನ್ನೂ ಗಡ್ಡ ಕೂಡ ಬರದ ತರುಣರು...ಕೆಂಪು ಮೋತಿಯ ತುಂಬ ಚೈತನ್ಯ ಬಸಿಯುತ್ತಿದೆ...ಇವರೆಲ್ಲ ರೈತರ ಮಕ್ಕಳು, ಅಂಚೆ ನೌಕರರ ಮಕ್ಕಳು, ರೇಲ್ವೆ ನೌಕರರ ಇಲ್ಲಾತಂದರ ಪ್ಲಂಬರಗಳ ಮಕ್ಕಳು....ಇವರೆಲ್ಲಾ ಖೂನೀ ಮಾಡ್ಯಾರೆ... ಪ್ರತಿಯೊಬ್ಬರೂ...ಆದರ ಇವರಿಗೆ ಅದು ಕೊಲೆ ಅಂತ ಅನಿಸೇ ಇಲ್ಲ. ಯಾಕಂತಂದರ ನಾವು ಮನಶಾರಂತ ಇವರಿಗೆ ಯಾರೂ ಹೇಳಿಕೊಟ್ಟೇಯಿಲ್ಲ!...ಇವರು ರೈಫಲ್ಲಿನ ಬಟ್ಟಿನಿಂದ-ಬುಲೆಟ್ಟಿನಿಂದ-ಕಬ್ಬಿಣದ ಸರಳಿನಿಂದ...ಗುದ್ದಲಿಯಿಂದ...ಹಾ...ಏನೂ ಕೈಗೆ ಸಿಗಲಿಲ್ಲಮೇ-ಬರೇ ಬರಿಗೈಯಿಂದ ಕೊಂದಿದ್ದಾರೆ....ಇಂಥವರು ಈಗ ಇಲ್ಲಿ ನೋಡಿದರೆ ಆ ಹುಡಿಗಿಯರೊಂದಿಗೆ ಎಷ್ಟು ಮುಗ್ಧಮುಖ ಹೊತ್ತು ಚಲ್ಲುಬಡಿಯುತ್ತಿದ್ದಾರೆ!...ಮೆಂದೆಲ್ ಇದೆಲ್ಲಾ ನನ್ನ ದುಃಖಭರಿತ ಕಣ್ಣುಗಳಿಂದ ಎಲ್ಲಾ

ಘೋಷಿಸುವಂಥಹ ದೃಷ್ಟಿಯಿಂದ ನೋಡುತ್ತಿದ್ದ. ಅವನ ದೃಷ್ಟಿ ಎಲ್ಲ ಅಮಾನುಷ ಹೊಡೆತಗಳಿಗೆ–ಎಲ್ಲ ಅಪಮಾನಗಳಿಗೆ, ಸಾವಿನ ಸಾನ್ನಿಧ್ಯದಲ್ಲಿಯೇ ನಡೆಯುವ ಅಮಾನುಷ, ಕ್ರೂರವಾದ ಹಾಸ್ಯಗಳಿಗೆ ಪರಿಹಾರ ನೀಡಬಲ್ಲಂಥ ಸೂತ್ರವೊಂದನ್ನು... ಮಾಂತ್ರಿಕ ಶಬ್ದಗಳನ್ನ ಹುಡುಕುತ್ತಿತ್ತು.

ಈ ಜೊಸ್ಲ್ ಸಾಯುವದಕ್ಕಿಂತ ಒಂದೆರಡು ವಾರಗಳಷ್ಟು ಮೊದಲು ಒಂದು ನಲವತ್ತು ಹಂಗೇರಿಯನ್ ಜ್ಯೂ ಮಕ್ಕಳ ಗುಂಪು ಕ್ಯಾಂಪಿಗೆ ಬಂತು. ಐವರಿಂದ ಹದಿನೈದು ವರ್ಷಗಳ ಮಕ್ಕಳು. ಅವರೊಳಗೆ ಜೊಸ್ಲ್ ಕೊಸಾಕ್ ಒಬ್ಬನೇ ಪೋಲಂಡಿನವನು. ಜೊಸ್ಲ್‌ನ ಅಣ್ಣ–ಸೊಸ್ನೊವೆಯುಕ್‌ನವನು–ನಮ್ಮ ಜೋಡೀನs ಕ್ಯಾಂಪಿಗೆ ಬಂದಿದ್ದ. ಅಣ್ಣಾ ತಮ್ಮರ ಭೆಟ್ಟಿ ಇಲ್ಲಿ ಆತು.. ನಾವು ಹೊದ್ದವರೆಲ್ಲಾ ಈ ಕಂದಮ್ಮಗಳನ್ನ ಕಾಳಜಿಯಿಂದನs ನೋಡಿಕೊಂಡೆವು. ಅವರ ಅಪ್ಪ ನಮ್ಮ ಮೈಮ್ಯಾಲ ನೊಣಾ ಸಾಯುವಂಗ ಪಟ ಪಟ ಅಂತ ಬಿದ್ದು ಸಾಯಲಿಕ್ಹತ್ತಿದ್ದವು...ಈ ಗಾರ್ಡುಗಳು ಅದಕ್ಕ ಏನಾದರೂ ಮಾಡಿದರೇ...?...ಹೂ...ಅಂದು ಕಟಿಗಿಯ ಅಡ್ಡೇದೊಳಗ ಜೊಸ್ಲ್ ಕುಸದು ಬಿದ್ದಾಗ ಸಿಗರೇಟು ಸೇದಿಕೋತ ನಿಂತ ಗಾರ್ಡ್‌ಗಳೇನು ಮಾಡಿದರು ?...ಒಂದ ಸಲಿಕೀ ತಗೊಂಡು ನೆಲದಮ್ಯಾಲಿನ ಹಿಮ ಎಳದು ಬಳಕೊಂಡು ಅವನ ಮ್ಯಾಲ ಸುರುವಿ ಇದೊಂದು ನಗಿಚಾಟಿಕಿಯ ಸಂಗತಿ ಅನ್ನುವ ಹಂಗ ಬೊಕಾಟೀ ಹೊಡದು ನಕ್ಕರು .. ಮ್ಯಾಲ ಸುರುವಿದ ಹಿಮ ಜಾರಿ ಆ ಹುಡಗನ ಪುಟ್ಟಿ ಕೈಯ್ಯು ಹೊರಗ ಕಾಣಿಸಿದಾಗ ಅವರು ಇನ್ನಷ್ಟು ಹಿಮ ಸುರುವಿದರು... ನಾವು ಆ ಹುಡಗನ್ನ ಅಪ್ಪಿಕೊಂಡು ಬ್ಯಾರಕ್ಕಿನೊಳಗ ಒಯ್ಯುವಾಗ ಅವರು ತಮ್ಮ ಉಬ್ಬಿದ ಗಲ್ಲದೊಳಗ ತುಂಬಿಕೊಂಡ ಹೊಗೀ ಉಗಳತಿದ್ದರು....

ಸಂಜೀತನಕಾ ಜೊಸ್ಲ್ ಸತ್ತಿರಲಿಲ್ಲ. ಅವನ ಮೈಯ್ಯು ಚಳಿಯಿಂದ ಹೆಪ್ಪುಗಟ್ಟಿ ಮುರುಟಿಕೊಂಡಂಗ ಆಗಿತ್ತು. ಬಿಳಿಚಿಕೊಂಡ ಅವನ ಮೋತಿ ಥೇಟ...ಬಳಪ ಧಂಗಾಗಿತ್ತು....ಅಂದರಾತ್ರಿ ಬ್ಯಾರಕ್ಕಿನೊಳಗ, ಜೊಸ್ಲ್‌ನ ಅಣ್ಣ ಮತ್ತು ಸೊಸ್ನೊವೆಯುಕ್‌ನ ಅವನ ನೆಂಟರು ಮತ್ತ ಬ್ಯಾರೇ ಹುಡಗರು ಜೊಸ್ಲ್‌ನ ಹಾಸಿಗಿಯ ಸುತ್ತ ಸೇರಿ ಅವನ ಜೋಡೀ ಮಾತಾಡಿಧಂಗ ಮಾಡಲಿಕ್ಹತ್ತಿದರು. ಅವಗ ಪ್ರಾಸೀ ಮಾಡವರು, ಜೋರ ಮಾಡವರು....ಅವನ್ನ ಅಪ್ಪಿಕೋತs ಕೂಗಿಕೂಗಿ ಹೇಳುವರು–ಜೊಸ್ಲ್...ನಾವು ಒದರಿದ್ದು ಕೇಳಸತದಿಲ್ಲೋ....ಹಾಂ....ನೀ ಬದಕಬೇಕು ಜೊಸ್ಲ್...ನೀ ಹೋಗಬ್ಯಾಡ...ಜೊಸ್ಲ್ ಅವ್ವ ನಿನ್ನ ಹಾದೀ ನೋಡಲಿಕತ್ಯಾಳ.... ಜೊಸ್ಲ್ ಪಪ್ಪಾ ನಿನ್ನ ಹಾದೀ ನೋಡಲಿಕತ್ಯಾನ...ಜೊಸ್ಲ್ ನಮ್ಮ ಜೋಡೀ ಇರಬೇಕ ನೀನು....ಹೋಗಬ್ಯಾಡ ಜೊಸ್ಲ್ !...ಅವರು ಅವನನ್ನ ತಟ್ಟಿ ತಟ್ಟಿ ಮಾತಾಡಿಸುವರು...ಮುತ್ತಿಕ್ಕುವರು....ಅವನ ಮೈಯನ್ನು ಹರಕ ಅರಿವಿಯಿಂದ–ಬರ್ಫಿನಿಂದ ಗಸ ಗಸ ಅಂತ ತಿಕ್ಕುವರು ...ಜೊಸ್ಲ್‌ನ್ನ ರಗ್ಗಗೋಳನ ಸುತ್ತಿ ಗೊಂಬಿನ್ನ ಕೂಡಸೂಹಂಗ ಟೇಬಲ್ಲಿಮ್ಯಾಲ ಕೂಡಿಸಿದರು. ಅವ ಹಂಗs ಕೂತ.

ಹೊಳ್ಳಿ ಬೀಳಲಿಲ್ಲ. ಯಾಕೆಂದರ ಅವನ ಮೈಎಲ್ಲಾ ಬಿಕ್ಕೊಂಡ ಬಿಟ್ಟಿತ್ತು...ಆದರ ಅವ ಸತ್ತಿರಲಿಲ್ಲ ...ಅವನ ಹೆಪ್ಪುಗಟ್ಟಿದ ದೇಹದ ಆಳದೊಳಗ ಜೀವದ ಒಂದು ಸಣ್ಣ ಕಿಡಿ ಮಿಣುಕುತ್ತಿತ್ತು....ಇವರೆಲ್ಲಾ ಸೇರಿಕೊಂಡು ಸಮಿಮಾತಿನಿಂದ–ಪ್ರಾರ್ಥನೆಯ ಮಾಂತ್ರಿಕ ಶಬ್ದಗಳಿಂದ ಆ ಕಿಡಿಯನ್ನ ಉದ್ದೀಪಿಸಲಿಕ್ಕೆ ಗುದ್ದ್ಯಾಡಲಿಕ್ಕತ್ತಿದ್ದರು. ಅವರು ಅಳುವರು– ಅಂಗಲಾಚುವರು...ಜೊಸ್ಲ್ ನೀ ಬದುಕಬೇಕು – ಜೊಸ್ಲ್ ನೀ ಬದುಕ ಬೇಕು...

ಇಡೀ ದಿನದ ಶ್ರಮದಿಂದ ದಣಿದ ನಾವು ಇದನೆಲ್ಲಾ ಕೇಳುತ್ತಲೇ ಬಂಕಿನಲ್ಲಿ (ಕೈದಿಗಳ ಮಂಚ-ಹಾಸಿಗೆ) ಬಿದ್ದುಕೊಂಡಿದ್ದೆವು. ಅದು ಒಮ್ಮೆ ಎಚ್ಚರದಲ್ಲಿ ಕೇಳು ತ್ತಿದ್ದರೆ ಇನ್ನೊಮ್ಮೆ ಕನಸಿನಲ್ಲಿ ಕೇಳಿಸಿದಂತಾಗುವದು...ಅವರು ಪಕ್ಕದ ಬ್ಯಾರಕ್ಕಿನಿಂದ ರಬ್ಬಿ ಶಿಮೊನ್‌ನನ್ನು ಕರಕೊಂಡ ಬಂದರು. ಅವ ಜೊಸ್ಲ್‌ನ ಹಾಸಿಗಿಯ ಮಗ್ಗಲಕ್ಕ ಕೂತು–ತಲೀ ಮುಖದಮ್ಯಾಲ ತಾಲಿಸ್‌ಹೊದ್ದು ಮೌನವಾಗಿ ಪ್ರಾರ್ಥಿಸತೊಡಗಿ ದನು...ಆಗ ಮೆಂಡಲ್‌ಟೆಯಿಚ್‌ಮನ್ ಜೊಸ್ಲ್‌ನ ಮೈಮೇಲೆ ಕೈಯಾಡಿಸಿ ನೋಡಿ ನಿರಾಸೆಯಿಂದ ತಲೆಯಾಡಿಸಿ – ಯಾಕ...? ಯಾಕ ಗೋಳ್ಯಾಡಲಿಕತ್ತೀರಿ ? ಹಿಂಗ ಕಿರಚಲಿಕತ್ತೀರ್ಯಾಕ ? ನಿಮಗ ಅವನ್ನ ಲಗೂನ ಓಡಿಸಬೇಕಾಗೇದ ಏನು ?....ಖುಶಿ ಯಿಂದ ಇರ್ರ್ಯೋ ! ಜೀವ ಇರೂತನಕಾ ಖುಶೀಲೇ ಇರಬೇಕು. ಜೊಸ್ಲ್ ಈಗ ತನ್ನ ಜೀವಾ ತಾ ಬದುಕಲಿಕ್ಕತ್ಯಾನ...ಎರಡ ತಾಸ ಬದುಕತಾನೋ ಏನ ಇಪ್ಪತ್ತ ವರ್ಷ ಬದುಕತಾನೋ ಅನ್ನೂದು ಅನಂತದ ಮುಂದ ಅಷ್ಟ ಮುಖ್ಯ ಅಲ್ಲ... ಅಳಬ್ಯಾಡ್ರೆಪಾ...ಕೊನೆಗಾಲಕ್ಕ ಅವನ್ನ ಖುಶಿಯಿಂದ ಇರಲಿಕ್ಕೆ ಬಿಡ್ರಿ.. ಜೊಸ್ಲ್ ನಿಮ್ಮ ಎಲ್ಲಾರನೂ ನೋಡಲಿಕತ್ತ್ಯಾನ ...

ಈಗ ಆ ಹುಡಗೋರು ಪೆಚಮನ್ನನ್ನ ಕರೀಲಿಕ್ಕೆ ಹೋದರು. ಅವ ಪಶ್ಚಿಮದ ಜ್ಯೂ ಹುಡುಗ. ಮಿಯೆನ್ನಾದವ. ಅವ ನಮ್ಮ ಕಲಾವಿದ. ಒಂದು ಕೈಯಿಂದ ಟೇಬಲ್ಲಿನ ಮ್ಯಾಲ ತಬಲಾ ನುಡಿಸಿಧಂಗೆ ಬಾರಿಸುತ್ತ ಇನ್ನೊಂದು ಕೈಯಿಂದ ಮೂಗನ್ನು ಹಿಡಿದುಕೊಂಡು ಸ್ಯಾಕ್ಸೋಫೋನಿನ ಧ್ವನಿ ಹೊರಡಿಸುತ್ತಿದ್ದ...ಪೆಚಮನ್ ಬಂಕಿನಲ್ಲಿ ಮಲಗಿ ನಿದ್ರಿಸುತ್ತಿದ್ದ. ಈ ಹುಡುಗರು ಅವನ್ನ ಹಾಸಿಗಿಯಿಂದ ಹೊರಗ ಎಳದು ಎಬ್ಬಿಸಿ ಕೈಯೊಳಗ ಇಷ್ಟು ಬ್ರೆಡ್ಡು ತುರುಕಿದರು...ಅವ ಬಂದು ಜೊಸ್ಲ್‌ನ ಮನರಂಜನೆಗಾಗಿ ಸ್ಯಾಕ್ಸೋಫೋನು–ತಬಲಾ ನುಡಿಸತೊಡಗಿದ....ಕನಸುಗಳ ಛಾಯೆ ಯಲ್ಲಿ ನಮಗೆ ಈ ಸಂಗೀತ ತಲುಪುತ್ತಿತ್ತು....ಬೆಳಗಿನ ನಾಲ್ಕು ಗಂಟೆಗೆ ನಮ್ಮೆಲ್ಲರನ್ನು ಕೆಲಸಕ್ಕೆ ಹೊರಡಿಸಿದಾಗ ಆ ಹುಡುಗರು ಜೊಸ್ಲ್‌ನನ್ನು ರಗ್ಗಿನಲ್ಲಿ ಸುತ್ತಿ ಕಬ್ಬಿಣದ ಕಪಾಟಿನಲ್ಲಿಟ್ಟರು ! ಸಂಜೆಗೆ ವಾಪಸ್ಸು ಬರತಿದ್ದಂಗೇ ಜೊಸ್ಲ್‌ನನ್ನ ಕಪಾಟಿನಿಂದ ಹೊರಗ ತಗೊಂಡು ಅವನ ಎದಿಯಮ್ಯಾಲೆ ಜೀವದ ಸದ್ದಿಗಾಗಿ ಕಿವಿಯಾನಿಸಿದರು. ಅವನ ಕಣ್ಣನ್ನು ಮುದ್ದಿಸಿದರು...ಆದರ ಜೊಸ್ಲ್ ಕೊಸಕ್ ಮಾತ್ರ ಬಿಳಿಪದಂಥ ಮುಖಹೊತ್ತು ನಿಶ್ಶಬ್ದನಾಗಿದ್ದ...ಈಗ ಅವನ ಕಣ್ಣುಗಳು ಜರಿದುಕೊಳ್ಳತೊಡಗಿ

ದವು. ಆದರೆ ಅವು ಚಲಿಸುತ್ತಿರಲಿಲ್ಲ. ಚೀನೀ ಮಣ್ಣಿನಂಥ ಹೊಳೆಯುವ ಅವನ ಕೈಗಳು ಎದೆಯಮ್ಯಾಲೆ ಮಡಿಚಿಕೊಂಡಿದ್ದವು...ಎಷ್ಟು ಸೂಕ್ಷ್ಮವಾಗಿದ್ದವು ಆ ಕೈಗಳು!...ಆ ಹುಡುಗರು ಮಾತ್ರ ಜೋಸ್ಲ್ ಸತ್ತಿದ್ದಾನೆಂದರೆ ನಂಬಲಿಕ್ಕೆ ತಯಾರಿಲ್ಲ....ಅವ ಸತ್ತಿಲ್ಲ... ಅವ ನಮ್ಮ ದನಿ ಕೇಳತಾನೆ ಅಂತ ಅವರು ಪಟ್ಟು ಹಿಡಿದುಬಿಟ್ಟಿದ್ದರು.

...ಅಮೇರಿಕದವರು ಇನ್ನೊಂದು ಸೈನ್ಯ ಸಂಘಟಿಸುತ್ತಿದ್ದಾರೆನ್ನುವ ಗಾಳಿಸುದ್ದಿ ಎದ್ದಿತ್ತು. ಆದರೆ ಎಂದು ಬಂದೀತು ಇಲ್ಲಿಗೆ ಆ ಸೈನ್ಯ?...ಜ್ಯೂಗಳೆಲ್ಲ ಬಚ್ಚಲು ಕೋಣೆಗಳಲ್ಲಿ ಸೇರಿ ಪ್ರಾರ್ಥನೆ ಸಲ್ಲಿಸತೊಡಗಿದರು. ಕ್ರಿಶ್ಚಿಯನ್ ಕೈದಿಗಳು ಸಹಿತ ಈ ಪ್ರಾರ್ಥನೆಗಳಲ್ಲಿ ಸೇರಿಕೊಳ್ಳತೊಡಗಿದರು...ಈ ಹಿಮಪಾತದ ಚಳಿಗಾಲದ ನಂತರ ವಸಂತ ಬರುತ್ತದೆ!...ಬೆಚ್ಚನೆಯ ಹಗಲುಗಳು...ಹೊಳೆಯುವ ಸೂರ್ಯ... ಅಮೇರಿಕದ ಹೊಸ ಸೈನ್ಯ!...ಆದರೆ ನನಗೆ ಕಥೆ ಹೇಳುವದು ಹೇಗೆ ಅಂತ ಕಲಿಸಿ ಕೊಡಲಿದ್ದ ಮೆಂದೆಲ್ ಟೆಯಿಚ್‌ಮನ್ ಜೋಸ್ಲ್ ಸತ್ತ ಸ್ವಲ್ಪ ದಿನಗಳೊಳಗೇ ತೀರಿ ಹೋದ...ಅವನದು ಅವಿವೇಕವಾದ ಅನರ್ಥವಾದ ಸಾವು...ಅವನ ಸಾವಿನ ಬಗ್ಗೆ ನಾನು ಏನು ಹೇಳಲೂ ಇಚ್ಛಿಸುವದಿಲ್ಲ...ಅವನ ಕವಿತೆಯ ಸಾಲುಗಳು ಮರೆಯಾಗಿವೆ...ಅವನ ಬೂದಿ ಪೋಲೆಂಡಿನ ಕಾಡು ಹೊಲಗಳಲ್ಲೆಲ್ಲ ಹುದುಗಿಹೋಗಿವೆ... ಮೆಂದೆಲ್...ನನಗೆ ಕಥೆ ಹೇಳುವದನ್ನ ಕಲಿಸುವವನಿದ್ದ...!

# ಬಂದಿ

ಇಂಗ್ಲಿಷ್ ಮೂಲ : ಮಾಲಮುಡ್
ಅನು : ದೇಶ ಕುಲಕರ್ಣಿ

[ಯೆಹೂದೀ ಮೂಲದ ಬರ್ನಾರ್ಡ್ ಮಾಲಮುಡ್ 1914ರಲ್ಲಿ ನ್ಯೂಯಾರ್ಕಿನ ಬ್ರೂಕ್‌ಲಿನ್‌ನಲ್ಲಿ ಜನಿಸಿದರು. ನ್ಯೂಯಾರ್ಕಿನ ಸಿಟಿ ಕಾಲೇಜಿನಿಂದ ಬಿ.ಎ. ಪದವಿಯನ್ನೂ ಕೊಲಂಬಿಯ ವಿಶ್ವವಿದ್ಯಾನಿಲಯದಿಂದ ಎಂ.ಎ. ಪದವಿಯನ್ನೂ ಪಡೆದರು. ಕೆಲವು ಕಾಲ ಬೇರೆ ಬೇರೆ ಕ್ಷೇತ್ರಗಳಲ್ಲಿ ದುಡಿದು. 1939ರಲ್ಲಿ ಶಿಕ್ಷಣ ವೃತ್ತಿಯನ್ನು ಅವಲಂಬಿಸಿದರು.

ಈ ಲೇಖಕರ ಪ್ರಸಿದ್ಧ ಪ್ರಥಮ ಕಾದಂಬರಿ, ದಿ ನ್ಯಾಚುರಲ್ 1952ರಲ್ಲಿ ಪ್ರಕಟವಾಯಿತು. ನಂತರ 1957ರಲ್ಲಿ ಪ್ರಕಟವಾದ ದಿ ಅಸಿಸ್ಟೆಂಟ್ ರೋಸೆಂತಾಲ್ ಹಾಗೂ ಡಾರಫ್ ಸ್ಮಾರಕ ಎಂಬ ಎರಡು ಪ್ರಶಸ್ತಿಗಳನ್ನು ಗಳಿಸಿತು. 1958ರ ದಿ ಮ್ಯಾಜಿಕ್ ಬ್ಯಾರೆಲ್‌ಗೆ ರಾಷ್ಟ್ರೀಯ ಪುಸ್ತಕ ಪ್ರಶಸ್ತಿ ಬಂದಿತು. ಪ್ರಸ್ತುತ ಕತೆ, ಪ್ರಿಸನ್ (ಬಂದಿ), ಈ ಸಂಕಲನದಿಂದಲೇ ಆಯ್ದುದು. ಎ ನ್ಯೂ ಲೈಫ್ ಮತ್ತು ಈಡಿಯಟ್ಸ್ ಫಸ್ಟ್ ಇವರ ಇತರ ಸಂಕಲನಗಳು. ಮಾಲಮುಡ್‌ರ ನಾಲ್ಕನೆಯ ಕಾದಂಬರಿ ದಿ ಫಿಕ್ಸರ್ ಅತ್ಯಂತ ಪ್ರಶಂಸನೀಯವಾದುದಲ್ಲದೆ, ಇನ್ನೊಮ್ಮೆ ರಾಷ್ಟ್ರೀಯ ಪುಸ್ತಕ ಪ್ರಶಸ್ತಿಯನ್ನು ತಂದುಕೊಟ್ಟಿತು. ಈ ಕೃತಿಗೆ ಪುಲಿಟ್ಜರ್ ಬಹುಮಾನ ಕೂಡ ಸಂದಿದೆ.

ಆಮೇಲೆ ಬಂದ ಕೃತಿಗಳೆಂದರೆ ಪಿಕ್ಚರ್ಸ್ ಆಫ್ ಪಿಡೆಲ್ ಮ್ಯಾನ್, ದಿ ಟೆನೆಂಟ್ಸ್, ರೆಂಬ್ರಾಂಡ್ಸ್ ಹ್ಯಾಟ್ ಮತ್ತು ಡೂಬಿನ್ಸ್ ಲೈವ್ಸ್.

ಬರ್ನಾರ್ಡ್ ಮಾಲಮುಡ್‌ಗೆ 1964ರಲ್ಲಿ ಅಮೆರಿಕದ ರಾಷ್ಟ್ರೀಯ ಕಲೆ ಮತ್ತು ಸಾಹಿತ್ಯ ಸಂಸ್ಥೆಯ ಸದಸ್ಯರೆಂದೂ, 1967ರಲ್ಲಿ ಅಮೆರಿಕದ ಕಲೆ ಮತ್ತು ವಿಜ್ಞಾನ ಅಕೆಡಮಿಯ ಸದಸ್ಯರೆಂದೂ ಗೌರವ ಲಭಿಸಿದೆ.]

ಕೇವಲ ಇಪ್ಪತ್ತೊಂಭತ್ತು ವಯಸ್ಸಿಗೇನೆ ಟೋಮಿ ಕ್ಯಾಸ್ಟೆಲ್ಲಿಗೆ ಜೀವನವೆಂದರೆ ಹಡಬೇಸರವಾಗಿತ್ತು. ರೋಸಾ ಅಷ್ಟೇ ಅಲ್ಲ ಅಥವಾ ಪುಡಿಗಾಸು ಲಾಭ ಬರುತ್ತಿದ್ದ ಅಂಗಡಿಯ ಉಸಾಬರಿ ಅಷ್ಟೇ ಅಲ್ಲ ಅಥವಾ ಸೋಡ, ಸಿಗರೇಟು, ಬತ್ತಾಸು ಮಾರುವಾಗಿನ ಮುಗಿವಿಲ್ಲದ ಹರಟೆಯಲ್ಲಿ ನಿಧಾನವಾಗಿ ನೂಕುತ್ತಿದ್ದ ಕಾಲವೂ ಅಲ್ಲ, ಯೋಚಿಸುವುದೇ ಬೇಡ ಎಂದು ಎಷ್ಟು ಯತ್ನಿಸಿದರೂ ಕೂಡ, ಅದೇ ಹೊಟ್ಟೆ ತೊಳಿಸುವಂಥ, ಹಿಂದೆ ಮಾಡಿದ ತಪ್ಪುಗಳಲ್ಲಿ ಬಂದಿಯಾದಂಥ ಭಾವ : ರೋಸಾಳನ್ನು

ಮದುವೆಯಾಗಿ, ಟೋನಿಯ ಹೆಸರು ಹೋಗಿ, ಟೋಮಿ ಎಂಬ ಹೆಸರು ಬರುವ ದಕ್ಕೂ ಮುಂಚೆಯೇ ನಡೆದಂಥವು ಕೆಲವು. ಟೋನಿ ಕನಸು ತುಂಬಿಕೊಂಡ ಹುಡುಗ : ಸಂಸಾರಗಳ ವಠಾರ, ಮಕ್ಕಳ ಚೀರು, ಆ ದರಿದ್ರ ಬಡತನ ಇವೆಲ್ಲದರಿಂದ ಪಾರಾಗ ಬೇಕೆಂದು ಅವನ ಮುಖ್ಯ ಹವಣಿಕೆ. ಆದರೆ ಆಸೆ ಫಲಿಸುವ ಮೊದಲೇ ಎಲ್ಲ ಹಾಳಾಗಿತ್ತು. ಹದಿನಾರಕ್ಕೆ ವೃತ್ತಿ ಶಿಕ್ಷಣ ಶಾಲೆ ಬಿಟ್ಟ. ಕಲಿಯುತ್ತಿದ್ದುದು ಮೋಚಿ ಕೆಲಸ. ಬಿಟ್ಟಮೇಲೆ ಅಲಸಿ ಹುಡುಗರ ಜತೆ ಸೇರಿ ನೆಲಮಾಳಿಗೆಯಲ್ಲಿರುವ ಕ್ಲಬ್ಬುಗಳಲ್ಲಿ ಪೋಲಾಡಿದ. ಆ ಹುಡುಗರೇನು ಕಡಿಮೆ ಅಲ್ಲ : ಎಸ್ಪ್ರೆಸ್ಸೋ, ಟೆಲಿವಿಷನ್ ಇವೆಲ್ಲ ತಂದು ಪಾರ್ಟಿ ಮಾಡುತ್ತ ಹುಡುಗಿಯರನ್ನು ಕರೆತರುತ್ತಿದ್ದರು. ಇಂಥವರ ಜತೆ, ಅವರ ಕಾರುಗಳಲ್ಲಿ ಓಡಾಡಿದ್ದು, ಈಗಿನ ಕಷ್ಟಕ್ಕೆಲ್ಲ ಮೂಲವಾಗಿ, ಬಾರೊಂದರ ಲೂಟಿಯಲ್ಲಿ ಪರ್ಯವಸಾನವಾಗಿತ್ತು. ಸದ್ಯ ಅವನ ಅದೃಷ್ಟಕ್ಕೆ ಮನೆ ಮಾಲೀಕ ತನಗೆ ಗೊತ್ತಿದ್ದ ಮುಖಂಡನೊಬ್ಬನನ್ನು ಹಿಡಿದು ಪಾರುಮಾಡಿಸಿದ ಮೇಲೆ, ಅವನ ಸುದ್ದಿಗೆ ಯಾರೂ ಬರುತ್ತಿರಲಿಲ್ಲ. ಈ ರಂಪದ ಭಯ ಇನ್ನೂ ಹೋಗಿಯೇ ಇಲ್ಲ, ಅವನಿಗೆ ಸುಳಿವು ಸಿಕ್ಕದಂತೆ, ಅಪ್ಪ ರೋಸಾ ಅಗ್ನೆಲ್ಲೋ ತಂದೆಯೊಡನೆ ಮದುವೆ ಮಾತುಕತೆ ನಡೆಸಿಬಿಟ್ಟಿದ್ದ. ಟೋನಿ ರೋಸಾಳನ್ನು ಮದುವೆಯಾಗುವುದು, ಮಾವ ತಾನು ಉಳಿಸಿದ್ದ ಹಣ ಹೂಡಿ ಅವನಿಗೆಂದು ಬತ್ತಾಸು ಅಂಗಡಿ ಹಾಕಿಕೊಟ್ಟು ಪ್ರಾಮಾಣಿಕ ಜೀವನಕ್ಕೆ ಅನುವು ಮಾಡಿಕೊಡುವುದು, ಇತ್ಯಾದಿ. ಟೋನಿಗೆ ಈ ಬತ್ತಾಸು ಅಂಗಡಿ ಯಾವ ಮೂಲೆಗೆ ? ರೋಸಾ ಅಂತೂ ಸೊಣಕಲು ಹುಡುಗಿ, ಅವನ ರುಚಿಯೇ ಬೇರೆ. ಸರಿ, ಒಂದಿಷ್ಟು ದಿನ ಟೆಕ್ಸಾಸಿಗೆ ಓಡಿಹೋಗಿ ಅಡ್ಡಾಡಿಕೊಂಡು ಬಂದ. ಅವನು ಹಿಂತಿರುಗಿದ್ದು ರೋಸಾ ಮತ್ತು ಅಂಗಡಿಯ ಸಲುವಾಗಿ ಅಂದುಕೊಂಡು ಮತ್ತೆ ಅದೇ ಹಂಚಿಕೆ ತೆಗೆದರು. ಅವನೂ, ಬೇಡ ಅನ್ನದೆ ಅದರೊಳಗೆ ಶಾಮೀಲಾದ.

ಆ ಹಳ್ಳಿಯ ಪ್ರಿನ್ಸ್‌ಸ್ಟ್ರೀಟ್‌ನಲ್ಲಿ ಅವನು ತಳ ಊರಿದ್ದು ಹೀಗೆ. ಪ್ರತಿದಿನ ಬೆಳಿಗ್ಗೆ ಎಂಟರಿಂದ ಸರಿಸುಮಾರು ನಡುರಾತ್ರಿಯವರೆಗೂ ಅಂಗಡಿ ಕೆಲಸ, ನಡುವೆ ಮಧ್ಯಾಹ್ನದ ಹೊತ್ತು ಒಂದು ತಾಸು ಮಹಡಿ ಮೇಲೆ ನಿದ್ದೆ. ಮಂಗಳವಾರ ಅಂಗಡಿಗೆ ರಜೆ ಕೊಟ್ಟು ಇನ್ನಷ್ಟು ನಿದ್ದೆಮಾಡಿ, ಆಮೇಲೆ ರಾತ್ರಿ ಒಂಟಿಯಾಗಿ ಸಿನಿಮಾ ನೋಡುತ್ತಿದ್ದ. ಕನಸು, ಯೋಜನೆ ಕಟ್ಟುವಷ್ಟು ಶಕ್ತಿ ಮನಸ್ಸಿಗೆ ಈಗ ಇರಲಿಲ್ಲ ; ಆದರೂ ಒಮ್ಮೆ, ಯಾವುದೋ ಒಂದು ಸಿಂಡಿಕೇಟು ವಿತರಣೆ ಮಾಡುತ್ತಿದ್ದ ಲಾಟರಿಯಲ್ಲಿ ಕೈಹಾಕಿ ಸುಮಾರು ಕಮಿಷನ್ ಗಿಟ್ಟಿಸಿ, ರೋಸಾಗೆ ಗೊತ್ತಾಗದಂತೆ, ಐವತ್ತೈದು ಡಾಲರು ಉಳಿಸಿ ತೆಗೆದಿಟ್ಟ. ಸಿಂಡಿಕೇಟಿನ ಬಗ್ಗೆ ಪತ್ರಿಕೆ ಬರೆದ ಮೇಲೆ ಈ ವ್ಯವಹಾರ ಮುಗಿಯಿತು. ಇನ್ನೊಮ್ಮೆ ರೋಸಾ ತವರಿಗೆ ಹೋಗಿದ್ದಾಗ, ಅಂಗಡಿಯಲ್ಲಿ ಸ್ಲಾಟ್ ಮೆಷಿನ್ ಇಡಿಸುವ ಸಾಹಸ ಮಾಡಿದ. ಸ್ವಲ್ಪದಿನ ಇದ್ದಿದ್ದರೆ ಒಂದಿಷ್ಟು ದುಡ್ಡು ಗ್ಯಾರಂಟಿಯಾಗಿ ಸಿಕ್ಕುತ್ತಿತ್ತು. ಆದರೆ ಅವಳಿಂದ ಇದನ್ನು ಮರೆ

ಮಾಡುವುದು ಮಾತ್ರ ಸಾಧ್ಯವಿರಲಿಲ್ಲ. ಅಂತಲೇ ಅವಳು ಹಿಂತಿರುಗಿ ಬಂದ ಮೇಲೆ ಇದನ್ನು ನೋಡಿ ಬೊಬ್ಬೆ ಹಾಕಿದಾಗ, ಅವನು ಪ್ರತಿಯಾಗಿ ಕಿರುಚಾಡದೆ, ತಾಳ್ಮೆಯಿಂದ, ಉತ್ತರಿಸಲು ಸಿದ್ಧನಾದಂತೆ, ಅದೇನೂ ಜೂಜಲ್ಲ, ಯಾಕೆಂದರೆ ಯಾರೇ ಕಾಸು ಹಾಕಿದರೂ ಒಂದಷ್ಟು ಪೆಪ್ಪರ್‌ಮೆಂಟಾದರೂ ಬಂದೇ ಬರುತ್ತೆ ಹೀಗೆಲ್ಲ ವಿವರಿಸಿದ–ಹಾಗೆಯೇ ಆ ಮೆಷೀನು ಕೊಟ್ಟ ಉಳಿಕೆ ಡಾಲರುಗಳಲ್ಲಿ ಟಿ.ವಿ. ಕೊಂಡು ಮನೆಯಲ್ಲೇ ಬಾಕ್ಸಿಂಗ್ ಪಂದ್ಯಗಳನ್ನು ನೋಡಬಹುದು. ಅದಕ್ಕಾಗಿ ಬಾರಿಗೆ ಹೋಗಬೇಕಾಗಿಲ್ಲ ; ಆದರೆ ಈ ಸಮಾಧಾನಗಳೆಲ್ಲ ರೋಸಾಗೆ ಹಿಡಿಸಲಿಲ್ಲ ; ಅವಳ ತಂದೆಯೇ ಬಂದು ಅವನನ್ನು ಅಪರಾಧಿ ಎನ್ನುವಂತೆ ಕೂಗಾಡಿ ಆ ಮೆಷೀನನ್ನು ಸುತ್ತಿಗೆಯಿಂದ ತುಂಡರಿಸಿದ. ಮಾರನೆಯ ದಿನವೇ ಪೊಲೀಸರು ಅಂಗಡಿಗಳ ಮೇಲೆ ದಾಳಿ ಮಾಡಿ ಸ್ಲಾಟ್ ಮೆಷಿನ್ ಇರಿಸಿದ್ದವರ ಮೇಲೆ ಕೇಸು ದಾಖಲು ಮಾಡಿದಾಗ, ಆ ಕಡೆಯ ಆಸುಪಾಸಿನಲ್ಲಿ ಬಚಾವಾದದ್ದು ಟೋಮಿ ಅಂಗಡಿಯೊಂದೇ. ಆದರೂ ಬಹಳಷ್ಟು ದಿನ ಅವನು ಮೆಷಿನ್ ಬಗ್ಗೆ ಒದ್ದಾಡಿಕೊಳ್ಳುತ್ತಲೇ ಇದ್ದ.

ಇಡೀ ದಿನದಲ್ಲಿ ಅವನಿಗೆ ಅತ್ಯಂತ ಯೋಗ್ಯವಾದ ಸಮಯ ಎಂದರೆ ಬೆಳಿಗ್ಗೆ ಹೊತ್ತು. ಯಾಕೆಂದರೆ ರೋಸಾ ಮಹಡಿಯ ಮೇಲೆ ತೊಳೆದು ಬಳಿದು ಮಾಡಿಕೊಳ್ಳುತ್ತ ಅಲ್ಲಿಯೇ ಇರುತ್ತಿದ್ದಳು. ಅಂಗಡಿಗೆ ಬರುತ್ತಿದ್ದ ಜನವೂ ಕಮ್ಮಿ. ಸರಿ, ಮಧ್ಯಾಹ್ನದವರೆಗೂ ಒಬ್ಬನೇ ಕೂತು ಹಲ್ಲು ಸಂದಿಗೆ ಕಡ್ಡಿ ಚುಚ್ಚಿಕೊಳ್ಳುತ್ತಲೋ ಕೌಂಟರಿನ ಪತ್ರಿಕೆಗಳ ಮೇಲೆ ದೃಷ್ಟಿ ಹಾಯಿಸುತ್ತಲೋ ಹೊತ್ತು ಹೋಗುತ್ತಿತ್ತು ಅಥವಾ ಸಿಗರೇಟು ಪ್ಯಾಕಿಗೆಂದು ಬಂದ ಹಳೆಯ ಕ್ಲಬ್ ಪೈಕಿಯ ಮಿತ್ರನ ಜತೆ ಅವತ್ತು ಯಾವ ಕುದುರೆ ಓಡುತ್ತೆ ಅಂತಲೋ ಈಚೆಗೆ ಓ-ಸಿ-ನಂಬರುಗಳು ಲಾಭದಾಯಕವೇ ಹೇಗೆ ಅಂತಲೋ ಹರಟೆ ಕೊಚ್ಚಬಹುದಾಗಿತ್ತು. ಅದೂ ಇಲ್ಲ, ಕಾಫಿ ಹೀರುತ್ತ ಸುಮ್ಮನೆ ಕೂತು ಉಗ್ರಾಣದಲ್ಲಿ ಬೈತಿಟ್ಟ ಐವತ್ತೈದು ನಿಧಿಯ ಆಧಾರದ ಮೇಲೆ ಏನೆಲ್ಲ ಮಾಡಬಹುದೆಂದು ಯೋಚಿಸಬಹುದಿತ್ತು. ಸಾಧಾರಣವಾಗಿ ಬೆಳಗಿನ ಸಮಯ ಹೀಗಿದ್ದರೂ, ಸ್ಲಾಟ್ ಮೆಷಿನ್ ಹಗರಣದ ನಂತರ, ಪೂರಾದಿನ ಗಬ್ಬೆದ್ದು ಹೋಗುತ್ತಿತ್ತು. ಅವನು ಕೂಡ, ಯಾಕೆಂದರೆ ಅವನಿಗೆ ಕೊಳೆಯುವಷ್ಟು ಸಮಯ ಬಿದ್ದಿರುತ್ತಿತ್ತು. ಬೆಳಗಾದರೆ, ಮಧ್ಯಾಹ್ನದ ನಿದ್ದೆ ಯೋಚನೆ. ಎಚ್ಚರಾದರೆ ಮುಂದೆ ಕಳೆಯಬೇಕಾದ ದೀರ್ಘರಾತ್ರಿಯ ಹುಳಿಹುಳಿ ನೆನಕೆ. ತನಗೆ ಮಾತ್ರ. ಮಿಕ್ಕವರು ತಮಗೆ ಬೇಕಾದ ಹಾಗೆ ಇರಬಹುದಿತ್ತು. ಹೀಗಾದಾಗೆಲ್ಲ ಅಂಗಡಿಯನ್ನು, ರೋಸಾಳನ್ನು ಶಪಿಸುತ್ತಿದ್ದ, ಅಷ್ಟೇಕೆ ಮುಂಚಿನಿಂದ ಅಸುಖಕರವಾಗಿಯೇ ತಳ್ಳಿದ ತನ್ನ ಬದುಕನ್ನೂ ಶಪಿಸುತ್ತಿದ್ದ.

ಇಂಥದೇ ಒಂದು ಬೆಳಿಗ್ಗೆ ಹತ್ತು ವರ್ಷ ವಯಸ್ಸಿನ ಹುಡುಗಿಯೊಬ್ಬಳು, ಆ ಸುತ್ತುಮುತ್ತಿನವಳೇ, ಅಂಗಡಿಗೆ ಬಂದು ಎರಡು ತೆಳು ಕಾಗದ ಬೇಕೆಂದು ಕೇಳಿದಳು, ಒಂದು ಕೆಂಪು, ಒಂದು ಹಳದಿ. ಪೀಡಿಸಬೇಡ, ಎಲ್ಲಾದರೂ ಹಾಳಾಗಿ ಹೋಗು

ಎಂದು ಹೇಳುವ ಮನಸ್ಸು ಅವನಿಗೆ. ಆದರೂ, ಕೆಟ್ಟ ಮುಖಭಾವದಲ್ಲಿ ಅಂಗಡಿಯ ಹಿಂಬದಿಗೆ–ಅಲ್ಲೇ ಅಂಥ ಪದಾರ್ಥವನ್ನು ರೋಸಾ ಇಡುತ್ತಿದ್ದುದು, ಅವಳಿಗೇ ಇಂಥ ದ್ದೆಲ್ಲ ಹೊಳೆಯುತ್ತಿದ್ದುದ್ದು–ಹೋದ. ಹೋದ ಅಂದರೆ ಅಭ್ಯಾಸಬಲದಿಂದ ; ಈ ಬೇಸಿಗೆಯಲ್ಲಿ ಪ್ರತಿ ಸೋಮವಾರ ಆ ಹುಡುಗಿ ಬಣ್ಣದ ಕಾಗದಕ್ಕೆಂದೇ ಬಂದು ದುಂಟು. ಅವಳ ಅಮ್ಮ, ಆ ಬಂಡೆಮುಖದವಳು, ಮುಂಡೆ ಪಟ್ಟವನ್ನು ತಾನಾಗಿಯೇ ಬರಿಸಿಕೊಂಡಂತೆ ಕಾಣುವವಳು, ಶಾಲೆ ಮುಗಿದ ಮೇಲೆ ಬರುವ ಚಿಕ್ಕ ಮಕ್ಕಳನ್ನು ನೋಡಿಕೊಳ್ಳುತ್ತಿದ್ದಳು. ಆ ಮಕ್ಕಳು ಜೋಂಬಿಯೋ ಇನ್ನೊಂದೋ ಮಾಡಲಿ, ಎಂದು ಈ ಬಣ್ಣದ ಕಾಗದಗಳನ್ನು ಕತ್ತರಿಸಲಿಕ್ಕೆ ಕೊಡುತ್ತಿದ್ದಳು. ಈ ಹುಡುಗಿಯೂ ಅವರಮ್ಮನನ್ನೇ ಹೋತಿದ್ದಳು. ಮುಖಲಕ್ಷಣ ಮಾತ್ರ ಅಷ್ಟು ಚೂಪಿಲ್ಲ ಸದ್ಯ, ಬಿಳಿಯಾದ ಚರ್ಮ ಮತ್ತು ಕಪ್ಪು ಕಣ್ಣು. ಆದರೆ ಸಾಧಾರಣ ಹುಡುಗಿ : ಇಪ್ಪತ್ತು ಮುಟ್ಟುವ ಹೊತ್ತಿಗೆ ಇನ್ನೂ ಸಾಧಾರಣವಾಗುತ್ತಾಳೆ. ಅವನು ಕಾಗದ ತರಲು ಹಿಂದೆ ಹೋದಾಗಲೆಲ್ಲ, ಮುಂದೆ ಸರಿದರೆ ಯಾವ ಕತ್ತಲೆಯೋ ಎಂಬ ಭಯ ಇರುವ ಹಾಗೆ ಅಲ್ಲೇ ಇದ್ದ ಕಾಮಿಕ್ಸ್‌ನ್ನು ಕೂಡ ಬಿಟ್ಟು ಅವಳು ಅಲ್ಲಿಯೇ ಉಳಿದುಕೊಳ್ಳು ವುದನ್ನು ಗಮನಿಸಿದ್ದ. ಬೇರೆ ಹುಡುಗರು ಬಂದರೆ ಕಾಮಿಕ್ಸ್ ಮುಟ್ಟಿದ ಹಾಗೆ ಹಿಂದೆ ತಳ್ಳಬೇಕಾಗಿತ್ತು. ಅವನ ಗಮನಕ್ಕೆ ಬಂದ ಇನ್ನೊಂದು ಸಂಗತಿ ಎಂದರೆ, ಕಾಗದ ತಂದು ಅವಳ ಕೈಲಿಟ್ಟ ತಕ್ಷಣ. ಇನ್ನಷ್ಟು ಬಿಳಿಚಿಕೊಳ್ಳುತ್ತಿದ್ದಳು, ಕಣ್ಣುಗಳು ಹೊಳಪಾಗುತ್ತಿದ್ದುವು. ಎರಡು ಡೈಮುಗಳನ್ನು ಅವನಿಗೆ ಕೊಡುವುದೆ ತಡ, ಹಿಂತಿರುಗಿಯೂ ನೋಡದೆ ಹೊರಟುಬಿಡುತ್ತಿದ್ದಳು.

ಯಾರನ್ನೂ ನಂಬದ ರೋಸಾ ಅಂಗಡಿಯ ಹಿಂಭಾಗದ ಗೋಡೆಗೆ ಒಂದು ಕನ್ನಡಿ ತೂಗುಹಾಕಿದ್ದಳು. ಈ ಸೋಮವಾರ ಬೆಳಗ್ಗೆ, ಟೋಮಿ, ಆ ಹುಡುಗಿಗಾಗಿ ಕಾಗದದ ಡ್ರಾ ತೆಗೆಯುತ್ತ ಏನೋ ಬೇಸರದಿಂದ ತಲೆಯೆತ್ತಿ ಕನ್ನಡಿಯಲ್ಲಿ ನೋಡುತ್ತಾನೆ, ಏನೋ ಕನಸಿನಲ್ಲಿಯಂತೆ ಭಾಸವಾಯಿತು. ಹುಡುಗಿ ಅದೃಶ್ಯಳಾಗಿ ಒಂದು ಬಿಳಿಯ ಕೈ ಬತ್ತಾಸಿನ ಪೆಟ್ಟಿಗೆಯೊಳಗೆ ಸಿಲುಕಿ, ಒಂದಾದ ಮೇಲೊಂದು ಎರಡು ಚಾಕೊಲೇಟ್ ತುಂಡನ್ನು ತೆಗೆದುಕೊಂಡಿದೆ ; ಬಳಿಕ ಕೌಂಟರಿನ ಹಿಂಬದಿಯಿಂದ ಹುಡುಗಿ ಹಿಂತಿರುಗಿ, ಅವನಿಗಾಗಿ ಮುಗ್ಧ ನಿರೀಕ್ಷೆಯಲ್ಲಿ ನಿಂತುಕೊಂಡಿದ್ದಾಳೆ. ಆ ಕ್ಷಣವೇ ಅವನಿಗೆ ಅವಳನ್ನು ಹಿಡಿದುಕೊಂಡು ವಾಂತಿಯಾಗುವ ಹಾಗೆ ಗುದ್ದಬೇಕು ಎನಿಸಿತು. ಆದರೆ ಯಾಕೋ, ಆಗಾಗ್ಗೆ ಬರುವಂತೆ, ಡೋಮ್ ಚಿಕ್ಕಪ್ಪನ ಯೋಚನೆ ಬಂದು, ಹಾಗೆಯೇ ಸಿಲುಕಿದ. ಎಲ್ಲ ಮಕ್ಕಳನ್ನೂ ಬಿಟ್ಟು, ಡೋಮ್ ಟೋನಿಯನ್ನು ಮಾತ್ರ, ಶೀಪ್‌ಶೆಡ್ ಬೇಗೆ ಏಡಿ ಹಿಡಿಯಲೆಂದು ಕರೆದೊಯ್ಯುತ್ತಿದ್ದ. ಒಂದು ರಾತ್ರಿ ಹೀಗೆಯೇ ಹೋಗಿರುವಾಗ ಗಾಳಕ್ಕೆ ಒಂದು ಹಸಿರು ನಳ್ಳಿ ಬಲಿಬಿತ್ತು. ಎಲ್ಲಿದ್ದನೋ ಒಬ್ಬ ಗಡವ ಮೂತಿ ಪೋಲೀಸಿನವನು ಬಂದು ಆ ನಳ್ಳಿ ಒಂಭತ್ತು ಅಂಗುಲ ಇಲ್ಲ ದಿದ್ದರೆ ತಿರುಗಿ ಬಿಟ್ಟು ಬಿಡಬೇಕು ಎಂದು ಆಗ್ರಹಪಡಿಸಿದ. ಡೋಂ ಅದರ ಉದ್ದ

ಒಂಭತ್ತು ಅಂಗುಲ ಅಂತ ಹೇಳಿದರೂ ಅವನು ನಂಬಲಿಲ್ಲ. ಕೊನೆಗೆ ಅಳತೆ ಮಾಡಿ ನೋಡಿದರೆ ಹತ್ತು ಅಂಗುಲ ಇತ್ತು. ಅವತ್ತು ರಾತ್ರಿಯೆಲ್ಲ ಅವರು ನಕ್ಕಿದ್ದೇ ನಕ್ಕಿದ್ದು. ಬಳಿಕ ಡೋವ್ ಎಲ್ಲೋ ಹೊರಟು ಹೋಗಿದ್ದು ಜ್ಞಾಪಕಕ್ಕೆ ಬಂದು ಕಣ್ಣಲ್ಲಿ ನೀರಾಡಿತು. ಹಾಗೇ ಯೋಚಿಸಿದರೆ, ತನ್ನದೇ ಜೀವನ ಏನಾಗಿಬಿಟ್ಟಿತು ಎನಿಸಿ, ಈಗ ಈ ಹುಡುಗಿ ಇಷ್ಟು ಸಣ್ಣವಯಸ್ಸಿಗೇ ಕಳ್ಳಿಯಾಗಿದ್ದಾಳೆ ಅಂತ ಮನಸ್ಸಿಗೆ ಬಂತು. ಎಂದೋ ಒಂದು ದಿನ ಸಿಕ್ಕಿಬಿದ್ದು, ಬದುಕು ಶುರುವಾಗುವ ಮೊದಲೇ ಹಾಳಾಗುತ್ತಾಳಲ್ಲ, ಬೇಡ, ಇದನ್ನು ಬಿಟ್ಟುಬಿಡು ಎಂದು ಎಚ್ಚರಿಸುವ ಇಚ್ಛೆ ಪ್ರಬಲವಾಯಿತು. ಆದರೆ ಇವನು ಇಷ್ಟು ಹೊತ್ತು ಮಾಡಿದನಲ್ಲ ಅನ್ನುವ ಭಯ ಅವಳಲ್ಲಿ ಪ್ರಕಟವಾದ ಹಾಗೆ ಅವನಿಗೆ ಕಂಡಿತು. ಅವಳ ಕಣ್ಣುಗಳಲ್ಲಿನ ಭಯಕ್ಕೆ ಗೊಂದಲಿಸಿ, ಅವನು ಏನೂ ಹೇಳದೆ ಹೋದ. ಅವಳು ಡೈಮುಗಳನ್ನು ನೀಡಿ, ಕಾಗದಗಳನ್ನು ಕಿತ್ತುಕೊಂಡು ಅಂಗಡಿಯಿಂದ ಓಟಕಿತ್ತಳು.

ಅವನು ಬಲವಂತವಾಗಿ ಕೂತುಕೊಂಡು ಜಿಜ್ಞಾಸೆ ಮಾಡಿದ : ಅವಳಿಗೆ ಹೇಳ ಬೇಕು ಎಂಬ ಆಸೆ ಪ್ರಬಲವಾಗಿದೆ, ಆದರೂ ಆ ಆಸೆಯನ್ನು ಬಿಡಬೇಕೆಂದು ಯತ್ನಿಸು ತ್ತಾನೆ. ಬತ್ತಾಸನ್ನು ಲಪಟಾಯಿಸಿದಳೆ ? ಸರಿ, ಲಪಟಾಯಿಸಲಿ, ಹೆಚ್ಚು ವ್ಯತ್ಯಾಸ ವೇನೂ ಆಗಲಿಲ್ಲ ಅಲ್ಲವೆ ? ಸುಧಾರಕನ ಪಾತ್ರ ತನಗೆ ಹೇಳಿದ್ದಲ್ಲ. ಏನು ಮಾಡ ಬೇಕು ಅಂದುಕೊಂಡನೋ ಅದು ಅಮುಖ್ಯ ಅಂತ ತೀರಾ ಮನಸ್ಸಿಗೆ ಖಾತರಿಯೂ ಆಗುತ್ತಿಲ್ಲ. ಏನು ಹೇಳಬೇಕೋ ತಿಳಿಯದಾಗಿ ನೊಂದುಕೊಂಡ. ಯಾವಾಗಲೂ, ಹೀಗೇ, ಅದೂ ಹೊಸ ಸನ್ನಿವೇಶಗಳು ಉದ್ಭವಿಸಿದಾಗ, ಸರಿ ಎನಿಸಿದ್ದನ್ನು ಹೇಳಲು ಕಷ್ಟಪಡುತ್ತಿದ್ದ, ಮಾತುಗಳು ತೊದಲುತ್ತಿದ್ದವು. ಏನೋ ಶುದ್ಧ ಅಪ್ರಯೋಜಕನ ತರಹ ಕಾಣುತ್ತಾನೆ ಎಂದು, ಅವಳು ಗಂಭೀರವಾಗಿ ತೆಗೆದುಕೊಳ್ಳದೆ ಹೋಗಬಹುದು ಎಂಬ ಅನುಮಾನವೂ ಕಾಡಿತು. ಅವಳಿಗೆ ಯಾವ ರೀತಿ ಹೇಳಬೇಕೆಂದರೆ, ಸ್ವಲ್ಪ ಭಯವಾದರೂ ಸರಿ, ಇವನು ತನ್ನ ಒಳ್ಳೆಯದಕ್ಕೇ ಹೇಳುತ್ತಿದ್ದಾನೆ ಎಂದು ಅವಳಿಗೆ ಮನವರಿಕೆಯಾಗಬೇಕು. ಅವಳನ್ನೇ ಕುರಿತು ಹೀಗೆ ಚಿಂತಿಸುತ್ತಿದ್ದರೂ, ಅವನು ಈ ಬಗ್ಗೆ ಎಲ್ಲೂ ಉಸಿರೆತ್ತಲಿಲ್ಲ. ಆಚೆ ಕಿಟಕಿ ಸ್ವಚ್ಛ ಮಾಡುವಾಗಲೋ ಇಲ್ಲವೆ ಒಪ್ಪಾರ ಎತ್ತರಿಸುವಾಗಲೋ, ಬೀದಿಯಲ್ಲಿ ಆಟ ಆಡುತ್ತಿರುವ ಹುಡುಗಿಯರು ಕಂಡಾಗ ಅಲ್ಲಿ ಅವಳಿರಬಹುದೆ ಎಂದು ಕಣ್ಣಾಡಿಸುತ್ತಿದ್ದ. ಮುಂದಿನ ಸೋಮವಾರ ಅಂಗಡಿ ಬಾಗಿಲು ತೆರೆದ ಒಂದು ತಾಸಿನೊಳಗಾಗಿ ಒಂದು ಪ್ಯಾಕು ಸಿಗರೇಟು ಸೇದಿ ಖಾಲಿ ಮಾಡಿದ್ದ. ತಾನು ಏನು ಹೇಳಬೇಕೆನ್ನುವುದು ಈಗ ಗೊತ್ತಾಗಿದೆ, ಆದರೆ ಏನೋ ಕಾರಣಕ್ಕಾಗಿ ಅವಳು ಬಾರದೆ ಇರಬಹುದು, ಬಂದರೂ ಬತ್ತಾಸು ತೆಗೆದುಕೊಳ್ಳುವು ದಕ್ಕೆ ಈ ಸಲ ಭಯಪಡಬಹುದು ಎಂದು ಅನುಮಾನಿಸಿದ. ಹೀಗಾಗಬಾರದು, ನಾನು ಹೇಳಬೇಕಾದ್ದನ್ನು ಹೇಳುವವರೆಗೂ ; ಹಾಗೆಂದು ಆ ಎಣಿಕೆಯೂ ಸಿಸ್ಟಯ

ವಲ್ಲ. ಸರಿಸುಮಾರು ಹನ್ನೊಂದು ಗಂಟೆಗೆ, ಅವನು ಪತ್ರಿಕೆಯನ್ನು ಓದುತ್ತಿದ್ದಾಗ, ಅವಳು ಬಂದು ಬಣ್ಣದ ಕಾಗದ ಕೇಳಿದಳು. ಅವಳ ಕಣ್ಣುಗಳಲ್ಲಿನ ಹೊಳಪು ನೋಡಲಾರದೆ ದೃಷ್ಟಿ ಬದಲಿಸಿದ. ಅವಳಿಗೆ ಕದಿಯುವ ಉದ್ದೇಶವಿದೆ ಎಂಬುದನ್ನು ಗ್ರಹಿಸಿದ. ಅಂಗಡಿಯ ಒಂಬದಿಗೆ ಹೋಗಿ ಮೆಲ್ಲಗೆ ಟೇಬಲ್ಲಿನ ಡ್ರಾಯರನ್ನು ತೆಗೆಯುತ್ತ, ತಲೆಯನ್ನು ಬಗ್ಗಿಸಿಕೊಂಡೇ, ಕನ್ನಡಿಯಲ್ಲಿ ಇಣುಕಿ ನೋಡಿದ. ನೋಡುತ್ತಿದ್ದಂತೆ, ಆ ಹುಡುಗಿ ಕೌಂಟರಿನ ಹಿಂದೆ ನುಸುಳಿಕೊಂಡಳು. ಅವನ ಎದೆ ಡವಡವ ಬಡಿಯಿತು, ಕಾಲುಗಳಿಗೆ ಮೊಳೆ ಬಡೆದಂತೆ ಕೀಳಲಾರದೆ ನಿಂತುವು. ಏನು ಹೇಳಬೇಕು ಅಂದುಕೊಂಡಿದ್ದನೋ ಅದನ್ನು ಜ್ಞಾಪಿಸಿಕೊಳ್ಳಲು ಯತ್ನಿಸಿದ. ಆದರೆ ಅವನ ಮನಸ್ಸು ಕತ್ತಲಿನ ಖಾಲಿ ಕೋಣೆಯಂತಾಗಿ, ಕೊನೆಗೆ ಅವಳು ಹೊರಟು ಹೋಗಲು ಬಿಟ್ಟುಕೊಟ್ಟ. ನಾಲಿಗೆ ಕಟ್ಟಿದಂತಾಗಿ, ಅಂಗೈಯಲ್ಲಿದ್ದ ಡೈಮುಗಳು ಬಿಸಿ ಹತ್ತಿ, ಹಾಗೆಯೇ ನಿಂತುಕೊಂಡ.

ನಂತರ ಯೋಚಿಸುತ್ತ, ಬತ್ತಾಸು ಅವಳ ಕೈಯಲ್ಲಿಯೇ ಇರುವಾಗ ತಾನೇನಾದರೂ ಮಾತಾಡಿದರೆ, ಬೇಕಾಗಿದ್ದಕ್ಕಿಂತ ಹೆಚ್ಚು ಭಯಪಟ್ಟಾಳು ಅಂದುಕೊಂಡೆ ಎಂದು ಸಮರ್ಥಿಸಿಕೊಂಡ. ಎಂದಿನಂತೆ ಮಹಡಿಗೆ ಹೋದರೂ ನಿದ್ರಿಸಲಿಲ್ಲ. ಅಡಿಗೆ ಮನೆ ಕಿಟಕಿಗೆ ಹೋಗಿ ಅಂಗಳವನ್ನು ನೋಡುತ್ತ ಕೂತ. ಎಂಥ ಮೊದುಗಸ್ಥ ತಾನು ಎಂದು ಹಳಿದುಕೊಂಡರೂ, ಇನ್ನು ಉತ್ತಮವಾದ ವಿಧಾನ ಇದ್ದೇ ಇರುತ್ತದೆಂದು ಸಮಾಧಾನ ಪಟ್ಟುಕೊಂಡ. ನೇರವಾಗಿ ಹೇಳುವುದು ಬೇಡ, ಈ ವಿಷಯ ತನಗೆ ಗೊತ್ತಿದೆ ಎಂದು ಅವಳಿಗೆ ಹೇಗೋ ಸುಳಿವು ಕೊಟ್ಟರೆ ಇನ್ನು ಸುಮ್ಮನಾಗುತ್ತಾಳೆ, ಖಂಡಿತ. ಸರಿ, ಸ್ವಲ್ಪ ಸಮಯದ ಬಳಿಕ ಅವಳು ಸುಮ್ಮನಿದ್ದದ್ದು ಎಷ್ಟು ಒಳ್ಳೆಯದೆಂದು ತಿಳಿಯ ಹೇಳಿದರಾಯಿತು. ಅಂತಲೇ ಈ ಸಲ ಅವಳು ಬರುವ ಹೊತ್ತಿಗೆ, ಅವಳು ಕೈ ಹಾಕುತ್ತಿದ್ದ ತಿಂಡಿ ತಟ್ಟೆಯನ್ನು ತೆಗೆದು ಎತ್ತಿಟ್ಟುಬಿಟ್ಟ. ಹೀಗಾವರೂ ಅವಳಿಗೆ ತಿಳಿಯಲಿ ಎಂದು ಅವನ ಯೋಚನೆ. ಆದರೆ ಆ ಹುಡುಗಿ ಅಂಥ ಅರಿವನ್ನೇನೂ ತೋರ್ಪಡಿಸಲಿಲ್ಲ, ಕೊಂಚ ಕೈ ಹಾಕುವಾಗ ಹಿಂದೇಟು ಹಾಕಿದ್ದುಂಟು, ಆದರೂ ಪಕ್ಕದ ತಟ್ಟೆಯಿಂದ ಎರಡು ಬತ್ತಾಸನ್ನು ಎಗರಿಸಿ ಯಾವಾಗಲೂ ತರುತ್ತಿದ್ದ ಕರಿಯ ಚರ್ಮದ ಚೀಲದೊಳಗೆ ಇಳಿಬಿಟ್ಟಳು. ಇದಾದಮೇಲೆ, ಮೇಲಟ್ಟದ ಎಲ್ಲ ತಟ್ಟೆಯನ್ನೂ ತೆಗೆದು, ನೋಡಿದ. ಇಷ್ಟಾಗಿಯೂ ಅವಳಿಗೆ ಯಾವ ಸುಳಿವೂ ಸಿಗಲಿಲ್ಲ, ಇನ್ನೊಂದು ಶೆಲ್ಫಿನಿಂದ ಇನ್ನೇನೋ ಬೇರೆ ತಿಂಡಿ ಎತ್ತಿದಳು. ಒಂದು ಸೋಮವಾರವಂತೂ, ಒಂದಿಷ್ಟು ಚಿಲ್ಲರೆ ಕಾಸನ್ನು ಬತ್ತಾಸಿನ ತಟ್ಟೆಯಲ್ಲಿಟ್ಟು ಕಾದ. ಅವಳಾದರೋ ಅದನ್ನೆಲ್ಲ ಬಿಟ್ಟು, ಬತ್ತಾಸನ್ನು ಮಾತ್ರ ತೆಗೆದುಕೊಂಡಳು. ಅವನಿಗೆ ಈಗ ಸ್ವಲ್ಪ ಚಿಂತೆಗಿಟ್ಟುಕೊಂಡಿತು. ರೋಸಾಗೂ ಸ್ವಲ್ಪ ಅನುಮಾನವಾಗಿ ಯಾತರ ಬಗ್ಗೆ ತಲೆ ಕೆಡಿಸಿಕೊಳ್ಳುತ್ತಿದ್ದೀ ಎಂತಲೂ ಈಚೆಗೆ ಯಾಕೆ ಚಾಕೊಲೇಟ್ ತಿನ್ನುತ್ತಿದ್ದೀ ಎಂತಲೂ ಕೇಳುವಂತಾಯಿತು. ಉತ್ತರ ಬಾರದೆ ಹೋದಾಗ, ಅಂಗಡಿಗೆ ಬರುವ ಚಿಕ್ಕ,

ದೊಡ್ಡ ಹೆಣ್ಣುಮಕ್ಕಳನ್ನೆಲ್ಲ ಗುಮಾನಿಯಿಂದ ನೋಡಹತ್ತಿದಳು. ಅವನಿಗಂತೂ ಅವಳ ಮೂತಿಯ ಮೇಲೆ ಒಂದು ಕೊಟ್ಟು ಹಲ್ಲು ಮುರಿಯೋಣ ಅನ್ನಿಸಿದರೂ, ತನ್ನ ಮನಸ್ಸಿನಲ್ಲಿದ್ದುದು ಅವಳಿಗೆ ಗೊತ್ತಾಗದೆ ಇರುವತನಕ ಪರವಾಗಿಲ್ಲ ಎಂದು ಸುಮ್ಮನಿದ್ದ. ಅದೇ ಹೊತ್ತಿಗೆ, ಯಾವ ವಿಧಾನದಿಂದಲಾದರೂ ಇದನ್ನು ತಡೆಯದಿದ್ದರೆ, ಆ ಹುಡುಗಿ ಕಳ್ಳತನವನ್ನು ಬಿಡುವುದು ಇನ್ನೂ ಕಷ್ಟವಾಗಬಹುದು ಅಂತಲೂ ಮನಸ್ಸಿಗೆ ಬಂತು. ಈ ವಿಷಯದಲ್ಲಿ ಗಟ್ಟಿಯಾಗಬೇಕು. ಹೀಗೆ ಯೋಚಿಸುವಾಗ ಒಂದು ತೃಪ್ತಿಕರವಾದ ಉಪಾಯ ಹೊಳೆಯಿತು. ತಿಂಡಿ ತಟ್ಟೆಯಲ್ಲಿನ ಎರಡು ಚಾಕೊಲೆಟ್ ಬಾರ್‌ಗಳಲ್ಲಿ ಒಂದರ ಹೊದಿಕೆಯೊಳಗೆ ಸಂದೇಶದ ಚೀಟಿ ಇರಿಸುವುದು, ಅದನ್ನು ಒಯ್ದುಮೇಲೆ ಅವಳು ಒಂಟಿಯಾಗಿದ್ದಾಗ ಓದಿಯೇ ಓದುತ್ತಾಳೆ. ಸರಿ, ಹಾಳೆ ತೆಗೆದುಕೊಂಡು ಏನೆಲ್ಲ ಸಂದೇಶದ ಟಿಪ್ಪಣಿಗಳನ್ನು ಕಲ್ಪಿಸಿಕೊಳ್ಳುತ್ತಾ ಹೋದ. ಅವುಗಳಲ್ಲಿ ಉತ್ತಮ ಎನಿಸಿದ ಸಂದೇಶ ಹೀಗಿತ್ತು : 'ಇನ್ನು ಮೇಲೆ ಹೀಗೆ ಮಾಡಬೇಡ, ಅನ್ಯಾಯವಾಗಿ ನಿನ್ನ ಜೀವನವನ್ನೆಲ್ಲ ಹಾಳುಮಾಡಿಕೊಳ್ಳುತ್ತಿ.' ಒಂದು ಸಣ್ಣ ರೊಬ್ಬನ ಪಟ್ಟಿಯ ಮೇಲೆ ಇದನ್ನೇ ನೀಟಾಗಿ ಬರೆದು ಚಾಕೊಲೆಟ್ ಬಾರ್‌ನ ಹೊದಿಕೆಯೊಳಗೆ ತೂರಿಸಿದ. ಅಂಕಿತ ಹಾಕುವಾಗ ಇತಿ ಸ್ನೇಹಿತ ಅಂತಲೋ ಇತಿ ನಿನ್ನ ಸ್ನೇಹಿತ ಅಂತಲೋ ಸಮಸ್ಯೆ ಬಂತು. 'ನಿನ್ನ ಸ್ನೇಹಿತ'ನೇ ಸರಿ ಎಂದು ಕಡೆಗೆ ತೀರ್ಮಾನಿಸಿದ.

ಇದು ನಡೆದಿದ್ದು ಶುಕ್ರವಾರ. ಇನ್ನೂ ಸೋಮವಾರದವರೆಗೂ ಕಾಯಬೇಕಲ್ಲ ಎಂದು ಅವನ ಸಹನೆ ಮೀರಿತು. ಆದರೆ ಆ ಸೋಮವಾರ ಸಹ ಅವಳು ಬರಲಿಲ್ಲ. ಎಷ್ಟೋ ಹೊತ್ತು ಕಾದು, ರೋಸಾ ಕೆಳಗಿಳಿದು ಅಂಗಡಿಗೆ ಬಂದಮೇಲೆ, ತಾನು ಮೇಲೆ ಹೋಗಬೇಕಲ್ಲ, ಆದರೂ ಆ ಹುಡುಗಿ ಇನ್ನೂ ಬಂದಿರಲಿಲ್ಲ. ಅವನಿಗೆ ತುಂಬ ನಿರಾಶೆಯಾಯಿತು, ಯಾಕೆಂದರೆ ಅವಳು ಎಂದೂ ತಪ್ಪಿಸಿಕೊಂಡವಳೇ ಅಲ್ಲ. ಶೂ ಹಾಕಿಕೊಂಡೇ, ತಾರಸಿಯನ್ನು ದೃಷ್ಟಿಸುತ್ತ ಹಾಸಿಗೆಯ ಮೇಲೆ ಬಿದ್ದುಕೊಂಡ· ತನಗೆ ಕೈಕೊಟ್ಟು ಮುಗಿಸಿದಳು, ಬಹುಶಃ ಇನ್ನ್ಯಾರಲ್ಲೋ ಆಟ ಆಡುತ್ತಿರಬೇಕು ಎನಿಸಿ ಮನಸ್ಸಿಗೆ ನೋವಾಯಿತು. ಯೋಚಿಸಿದಷ್ಟೂ ಈ ಭಾವವೇ ಅತಿಯಾಗುತ್ತ ಬಂದಿತು. ನಿದ್ದೆ ಮಾಡಲೂ ಬಿಡದಂತೆ ತಲೆ ಹಿಡಿಯುವಂಥ ತಲೆನೋವು, ಮತ್ತೆ ಇದ್ದಕ್ಕಿದ್ದಂತೆ ನಿದ್ದೆ, ನಂತರ ಎಚ್ಚರವಾದರೆ ತಲೆನೋವಿಲ್ಲ. ಆದರೆ ಎಚ್ಚೆತ್ತಾಗ ಖಿನ್ನತೆ, ವಿಷಾದ; ಡೋವರ್ ಚಿಕ್ಕಪ್ಪ ಜೈಲಿನಿಂದ ಹೊರಬಿದ್ದು ಎಲ್ಲಿ ಹೊರಟು ಹೋದನೋ ದೇವರೇ ಬಲ್ಲ. ಇವತ್ತಲ್ಲ ನಾಳೆ, ತಾನು ಈ ಕೂಡಿಟ್ಟ ಐವತ್ತೈದರ ನಿಧಿ ತೆಗೆದುಕೊಂಡು ಹೋಗುತ್ತೇನಲ್ಲ, ಎಲ್ಲೋ ಒಂದು ಕಡೆ ಅವನು ತನಗೆ ಸಿಕ್ಕುತ್ತಾನೆಯೇ ಎಂದು ಭ್ರಮಿಸಿಕೊಂಡ. ಸಿಕ್ಕಿದರೂ ಕೂಡ, ಈ ವೇಳೆಗೆ ಡೋವರ್ ತೀರಾ ಮುದುಕನಾಗಿಬಿಟ್ಟು, ಗುರುತು ಹಿಡಿಯುವುದೇ ಕಷ್ಟವಾಗಬಹುದು. ಬದುಕಿನ

ವಿಷಯವನ್ನೇ ತೆಗೆದುಕೋ. ನಿನಗೆ ಬೇಕಾದ್ದು ನಿನಗೆ ಸಿಕ್ಕಲೇ ಇಲ್ಲ. ಎಷ್ಟು ಬೇಡವೆಂದುಕೊಂಡರೂ, ತಪ್ಪು ಮಾಡುವುದು ಮತ್ತು ಅದನ್ನು ದಾಟದೆ ಹೋಗುವುದು. ಒಳಗೇ ಬಂದಿಯಾಗಿರುವುದರಿಂದ ಹೊರಗಿನ ಆಕಾಶವಾಗಲಿ, ಸಮುದ್ರವಾಗಲಿ, ನೀನು ಎಂದೂ ನೋಡಲಾರೆ. ಆದರೆ ಮಾತ್ರ ಯಾರಿಗೂ ಇದು ಸರಿಯಾಗಿ ಕಂಡಿಲ್ಲ, ನೀನು ಹಾಗೆಂದು ಹೇಳಿದರೂ ಅವರಿಗೆ ಅರ್ಥವಾಗುವುದಿಲ್ಲ ಅಥವಾ ಹಾಗೇಂದು ಹೇಳುತ್ತಾರೆ. ಹಾಗೇ ಮಂಕು ಕವಿದ ಹಾಗಾಗಿ, ಅವನು ನಿರ್ಲೋಚನೆಯಿಂದ, ತನ್ನ ಬಗ್ಗೆಯಾಗಲಿ ಬೇರೆ ಯಾರ ಬಗ್ಗೆಯಾಗಲಿ ಯಾವ ಸಹಾನುಭೂತಿಯೂ ಇಲ್ಲದೆ, ಅಲ್ಲಾಡದೆ ಮಲಗಿದ.

ರೋಸಾ ಯಾವ ತಗಾದೆಯೂ ತೆಗೆಯದೆ ಇಷ್ಟು ಹೊತ್ತು ತನಗೆ ಬಿಡುವು ಕೊಟ್ಟಿಳಲ್ಲ ಎಂಬ ಒಂದು ರೀತಿಯ ವ್ಯಂಗ್ಯ ಖುಷಿಪಡುತ್ತ ಅವನು ಕೊನೆಗೂ, ಕೆಳಗಿಳಿದು ಬಂದಾಗ, ಅವಳು ಚೀರಾಡುತ್ತಿರುವುದು ಕೇಳಿಸಿತು. ಅಂಗಡಿಯಲ್ಲಿ ಜನ ಸೇರಿದ್ದರು. ಗುಂಪಿನಲ್ಲಿ ಹಾಗೇ ದಾರಿಮಾಡಿಕೊಳ್ಳುತ್ತ ರುಜಿನ ದೃಷ್ಟಿಯಲ್ಲಿ ನೋಡುತ್ತಾನೆ ; ರೋಸಾ, ಆ ಹುಡುಗಿಯನ್ನು ಬತ್ತಾಸು ಸಮೇತ ಹಿಡಿದು ಹಾಕಿ ಬಲವಾಗಿ ಅಲ್ಲಾಡಿಸುತ್ತಿದ್ದಾಳೆ, ಆ ಕೂಸಿನ ತಲೆ ಚಿತ್ತಕ್ಕೆ ಕಟ್ಟಿದ ಬಲೂನಿನಂತೆ ಹಿಂದಕ್ಕೂ ಮುಂದಕ್ಕೂ ಚಿಮ್ಮುತ್ತಿದೆ. ಅವನು ಶಾಪ ಹಾಕುತ್ತ, ರೋಸಾಳನ್ನು ಹುಡುಗಿಯಿಂದ ದೂರ ಸೆಳೆದ. ಅವಳ ಪೇಲವ ಮುಖದಲ್ಲಿ ಬರೀ ಗಾಬರಿಯೇ ಕಾಣಿಸುತ್ತಿತ್ತು.

'ಏನು ಸಂಗತಿ ? ಅವಳನ್ನು ಕೊಂದು ಬಿಡುತ್ತೀಯೇನು ?' ಎನ್ನುತ್ತಾ ಅವನು ರೋಸಾಳನ್ನು ಗದರಿಸಿದ.

'ಅವಳೊಬ್ಬ ಕಳ್ಳಿ' ಎಂದು ರೋಸಾ ಕಿರುಚಿದಳು.

'ಬಾಯಿ ಮುಚ್ಚು'

ರೋಸಾ ಒರಲುವುದನ್ನು ನಿಲ್ಲಿಸಲೆಂದು, ಅವನು ಅವಳಿಗೆ ಒಂದು ತಪರಾಕಿ ಕೊಟ್ಟ. ಆ ಪೆಟ್ಟು ಅಷ್ಟು ಬಲವಾಗಿರುತ್ತೆಂದು ಅವನು ಎಣಿಸಿರಲಿಲ್ಲ, ರೋಸಾ ತೇಕುತ್ತ ಹಿಂದಕ್ಕೆ ಬಿದ್ದಳು. ಅವಳು ಅಳದೆ ಒಂದು ಬಗೆಯ ಗಾಬರಿಯಲ್ಲಿ ಸುತ್ತುಮುತ್ತು ನೋಡುತ್ತ ಮುಗುಳ್ನಗಲು ಯತ್ನಿಸಿದಳು. ಅವಳ ಹಲ್ಲಿಗೆ ಪೆಟ್ಟು ಬಿದ್ದು ರಕ್ತ ಕಾಣಿಸಿಕೊಂಡಿದ್ದನ್ನು ಯಾರೂ ಗಮನಿಸಬಹುದಿತ್ತು.

ಟೋಮ ಆ ಹುಡುಗಿಗೆ 'ಮನೆಗೆ ನಡಿ' ಎಂದು ಆಜ್ಞಾಪಿಸಿದ. ಇಷ್ಟರಲ್ಲಿ ಬಾಗಿಲ ಬಳಿ ಗಲಿಬಿಲಿಯಾಯಿತು. ಆ ಹುಡುಗಿಯ ಅಮ್ಮ ಅಂಗಡಿ ಒಳಗೆ ಬಂದಳು. ಬಂದವಳೆ 'ಏನಾಯಿತು' ಎಂದು ಪ್ರಶ್ನಿಸಿದಳು.

ರೋಸಾ 'ಅವಳು ನಮ್ಮ ಬತ್ತಾಸನ್ನು ಕದ್ದಿದ್ದಾಳೆ' ಎಂದು ಅಬ್ಬರಿಸಿದಳು.

ಟೋಮಿ 'ನಾನೇ ಅವಳಿಗೆ ತೆಗೆದುಕೊಳ್ಳಲು ಹೇಳಿದೆ' ಎಂದ.

ರೋಸಾ ಮತ್ತೆ ಪೆಟ್ಟು ತಿಂದವಳಂತೆ ಅವನನ್ನೇ ದುರುಗುಟ್ಟಿ ನೋಡಿ, ಸ್ವಲ್ಪ ಹೊತ್ತಿನ ಮೇಲೆ ಬಾಯಿ ಕಿವುಚಿ, ಬಿಕ್ಕಳಿಸಲು ಶುರು ಮಾಡಿದಳು.

ಆ ಹುಡುಗಿ 'ಅಮ್ಮ, ಅದರಲ್ಲಿ ಒಂದು ನಿನಗೆ' ಎಂದಳು.

ಅಮ್ಮ, ಅವಳ ಮುಖಕ್ಕೆ ಮುಷ್ಟಿಯಿಂದ ಒಂದು ಗುಮ್ಮಿಕಿದಳು—

'ಕಳ್ಳ ಹುಡುಗಿ, ಈ ಸಲ ನಿನ್ನ ಕೈಗೆ ಸರಿಯಾಗಿ ಬರೆ ಇಡುತ್ತೇನೆ ನೋಡು'

ಹೀಗಂದವಳೆ, ಹುಡುಗಿಯ ಮೇಲೆ ಹರಿಹಾಯ್ದು, ಅವಳ ತೋಳನ್ನು ಅವುಚಿ ಹಿಡಿದು ಅದನ್ನು ತಿರುಚಿದಳು. ಆ ಹುಡುಗಿ, ದೆವ್ವ ಕುಣಿಯುವಂತೆ, ಬೀಳುವುದು, ಏಳುವುದು, ಸ್ವಲ್ಪ ಓಡುವುದು ಹೀಗೆ ಮಾಡುತ್ತಿದ್ದಳು. ಬಾಗಿಲ ಬಳಿ ತಲುಪಿದಾಗ ಮಾತ್ರ ತನ್ನ ಬಿಳಿ ಮುಖವನ್ನ ತಿರುಗಿಸಿ, ಅವನ ಕಡೆ ನೋಡುವಷ್ಟು ವ್ಯವಧಾನ ಮಾಡಿಕೊಂಡು ತನ್ನ ಕೆಂಪು ನಾಲಗೆಯನ್ನು ಹೊರಚಾಚಿದಳು.

## ಕೆಲವು ಟಿಪ್ಪಣಿಗಳು

### ೧. ಯೆಹೂದಿ ಹಾಗೂ ಕ್ರಿಶ್ಚಿಯನ್ನರ ದೈವತ್ವದ ಕಲ್ಪನೆ

ಮೂಲ : ಜಾನ್‌ಹಿಕ್

ಏಕೇಶ್ವರವಾದದಲ್ಲಿ ಸಂಪೂರ್ಣ ನಂಬಿಕೆ ಹೊಂದಿರುವ ಯೆಹೂದಿ ಧರ್ಮದ ಮೂಲ ನಮಗೆ 'ಓಲ್ಡ್ ಟೆಸ್ಟ್‌ಮೆಂಟ್–ಹಳೆಯ ಒಡಂಬಡಿಕೆ'ಗಳಲ್ಲಿ ಕಾಣಸಿಗುತ್ತದೆ. ಒಂದು ರೀತಿಯಲ್ಲಿ ಇದರಿಂದ ಯೆಹೂದಿ ಧರ್ಮವನ್ನು ಕ್ರಿಶ್ಚಿಯನ್ ಧರ್ಮದ ತಾಯಿ ಯೆಂದು ಪರಿಗಣಿಸಿದರೂ ತಪ್ಪಾಗಲಾರದು.

'ಏಕೇಶ್ವರವಾದ'–'ದೇವರು ಒಬ್ಬನೇ' ಎಂದಾಗ ಶ್ರೇಷ್ಠತಮವಾದ ಒಂದು ಸತ್ಯದ ಕಲ್ಪನೆ ನಮಗೆ ಬರುತ್ತದೆ. ಹಾಗೂ ಆ ಸತ್ವ ನೈತಿಕವಾಗಿ, ಚಾರಿತ್ರಿಕವಾಗಿ ಮನುಷ್ಯ ಮಾತ್ರರಿಗೆ ಮಾರ್ಗದರ್ಶನ ನೀಡಬಲ್ಲ ಶಕ್ತಿಯುತವಾದ ಪರಾಶಕ್ತಿ ಎಂಬ ನಂಬಿಕೆ ಹೊರಮೂಡುತ್ತದೆ. 'ಓ ಇಸ್ರೇಲ್ ಕೇಳಿಲ್ಲಿ! ನಮ್ಮ ದೇವರು ಒಬ್ಬನೇ ಒಬ್ಬ! ಆ ಪರಮಾತ್ಮನಿಗೆ ನಿನ್ನನ್ನು ನೀನು ಸಂಪೂರ್ಣವಾಗಿ ಅರ್ಪಿಸಿಕೊಂಡು ಧ್ಯಾನ ಮಾಡು!' ಎಂಬ ವಾಕ್ಯದಲ್ಲಿ ನಾವು ಈ ಧ್ವನಿಯನ್ನು ಕಂಡುಕೊಳ್ಳಬಹುದು. ಹೀಬ್ರೂ ಸಲ್ಲಿ ಕಂಡುಬಂದ ಈ 'ದೇವರ' ಕಲ್ಪನೆ ಮುಂದೆ ಕ್ರಿಶ್ಚಿಯನ್ ಧರ್ಮದಲ್ಲೂ ಮುಂದು ವರಿದದ್ದನ್ನೂ ನೋಡಬಹುದು.

ಹೀಬ್ರೂಸಲ್ಲಿ ಮೊದಲು ಜನಪದದಿಂದ ಮೂಡಿಬಂದ ದೇವರ ಆರಾಧನೆ ಕಂಡು ಬರುತ್ತದೆ. ಫಿಲಿಸ್ಟೀನಿನ ಡ್ಯಾಗನ್, ಮಾಪೊರ್ಟರ ಚೆಮೋಶ್‌ಗೆ ವಿರುದ್ಧ ಇಸ್ರೇಲಿನ ಜಹೋವಾನನ್ನು ಅವರು ಆರಾಧಿಸಿದರು. ಕ್ರಿಸ್ತಪೂರ್ವ ಕಾಲದ ಜಹೋವಾನನ್ನು ಅವರು ಬರಿಯ ದೇವರಾಗಿ ಮಾತ್ರ ಆರಾಧಿಸಲಿಲ್ಲ. ಅವರ ದೇವರು ಭೂಮಿ–ಸ್ವರ್ಗ ಗಳ ನಿರ್ಮಾಪಕನಾಗಿ ಮೂಡಿಬಂದಿದ್ದ, ಹಾಗೂ ಇತಿಹಾಸ ಕಾಲದಿಂದ ಮನುಷ್ಯ ಜಾತಿಗೇ ತೀರ್ಪುಗಾರನಾಗಿ ಮೂಡಿಬಂದಿದ್ದ. ಹೀಬ್ರೂ ಸಂದೇಶವಾಹಕರು ದೇವರು ತಮ್ಮ ದೇಶವನ್ನು, ವಿಶೇಷ ಕಾರ್ಯಸಾಧನೆಗಾಗಿ ತನ್ನ ಅಸ್ತಿತ್ವವನ್ನು ಮನಗಾಣಿಸು ಪುದಕ್ಕಾಗಿ ಕಳುಹಿಸಿರುವನೆಂದು ಸಾರಿದನು. ಜೊತೆಗೆ ದೇವರು ತಮಗೆ ಮಾತ್ರ ವಲ್ಲದೆ ಇಡೀ ಮಾನವಕುಲಕ್ಕೇ ಸೇರಿದವನೆಂದು ಕೂಡ ಸಾರಿದರು. 'ಹೀಬ್ರೂಗಳ

ಏಕೇಶ್ವರವಾದದ ಕಲ್ಪನೆಯಲ್ಲಿ ದೇವರ ಬಗೆಗೆ ಒಂದು ಭ್ರಾಮಕ ಕಲ್ಪನೆ ಮೂಡಿದೆ ಯೆಂದೂ, ಅದರಂತೆ ಆತ ಎಲ್ಲ ವಿಧದಲ್ಲೂ ಪರಿಪೂರ್ಣನೆಂದೂ, ಧರ್ಮದಷ್ಟೇ ಅವನು ವಿಶ್ವದೇವನೆಂಬ ಭಾವನೆ ಇದೆ' ಎಂದು ಒಬ್ಬ ಬೈಬಲ್ ತಜ್ಞ ಉಸು ರುತ್ತಾರೆ. 'ಆತ ತನ್ನ ಜೊತೆಗಾರರಿಗೆ, ಹಿಂಬಾಲಕರಿಗೆ ಮಾತ್ರ ಹಿತೈಷಿಯಾಗಿದ್ದರೆ ಸಾಲದು, ವಿಶ್ವದ ಪ್ರತಿಯೊಂದು ಜೀವಕ್ಕೂ ಸಮಾನವಾಗಿ ಹಿತೈಷಿಯಾಗಿರಬೇಕು.' ಹೀಗೆ ಅವರ ದೇವರು ಜಾತ್ಯಾತೀತ ವಿಶ್ವದ ಪ್ರತಿಯೊಂದು ಪದಾರ್ಥದ ಸೃಷ್ಟಿಕರ್ತ 'ಪ್ರತಿಯೊಂದು ದಿನ ಕೂಡ ಅವನು ಮಾಡಿದ್ದು. ಪ್ರತಿಯೊಬ್ಬ ಶ್ರೇಷ್ಠ ವ್ಯಕ್ತಿಯನ್ನು ಅಸ್ತಿತ್ವಕ್ಕೆ ತಂದಿರುವವನು ಅವನೇ. ಆತನ ಮಹಿಮೆಯನ್ನು ಸಾರಲೆಂದು ಆತ ಪ್ರತಿಯೊಬ್ಬ ಶ್ರೇಷ್ಠ ವ್ಯಕ್ತಿಯನ್ನು ನಿರ್ಮಿಸಿ ಕಳುಹಿಸಿಕೊಟ್ಟಿದ್ದಾನೆ. ಆದುದರಿಂದ ಆತ ತನ್ನ ಪ್ರತಿಬಿಂಬ–ಪ್ರತಿರೂಪವಾಗಿ ನಿರ್ಮಿಸಿರುವ ಈ ಪ್ರತಿಯೊಬ್ಬ ವ್ಯಕ್ತಿಯೂ ಶ್ರೇಷ್ಠನೇ. ಇಲ್ಲಿರುವ ಪ್ರತಿಯೊಂದು ಜೀವದ ನಿರ್ವಾಪಕ ಆತ. ಹಾಗಾಗಿ ಈ ಪ್ರತಿಯೊಂದು ವಸ್ತುವೂ ಆತನ ಮಹಿಮೆಯನ್ನೇ ಘೋಷಿಸುತ್ತದೆ; ಭೂಮಿಯ ಕಣ ಕಣವೂ ಅದನ್ನೇ ಪ್ರತಿಧ್ವನಿಸುತ್ತದೆ. ಶೂನ್ಯತೆ ಆವರಿಸಿರುವ ಆಕಾಶ ಒಂದು ದೇವಸ್ಥಾನ, ಆತನ ಮುಂದೆ ಸೃಷ್ಟಿಯೆಲ್ಲವೂ ಮೌನ ವಹಿಸುತ್ತದೆ.' ಸೀಮಾತೀತನಾಗಿ ಅಸ್ತಿತ್ವ ಹೊಂದಿರುವ ಆ ಪರಮಾತ್ಮ ತತ್ವ: ಏಕೇಶ್ವರವಾದದ ಆರಂಭಿಕ ಸ್ಥಿತಿಯಲ್ಲಿ ಪ್ರಾರ್ಥನೆ, ಉಪದೇಶ, ಬೈಬಲ್‌ನ ಪಾಠ-ಪ್ರವಚನಗಳಲ್ಲಿ ಕಾಣಿಸಿಕೊಂಡು ನಂತರದ ಕ್ರಿಶ್ಚಿಯನ್ ಚಿಂತನೆಯಲ್ಲಿ ವಿಕಾಸಗೊಂಡಿದೆ.

ಹೀಗೆ ಜೂಡಾಯಿಸಂ ಮತ್ತು ಕ್ರಿಶ್ಚಿಯನ್ ಧರ್ಮಕ್ಕನುಗುಣವಾಗಿ ದೇವರು ಸೀಮಾತೀತ. ಆತನ ಗುಣಗಳು ವಿಧ-ವಿಧವಾಗಿ ಆತನ ಅಸ್ತಿತ್ವವನ್ನು ಸಾರುತ್ತದೆ. ಅದರಂತೆ ಆತ ಯಾವುದೇ ಮೀರಿದ ಮಹತ್ ಸತ್ವದಿಂದ ನಿರ್ಮಾಣಗೊಂಡಿಲ್ಲ. ಆತನ ಇಚ್ಛೆಯನ್ನು ಮೀರಿ ಯಾವ ಸೃಷ್ಟಿ-ಲಯ ಕಾರ್ಯ ನಡೆಯುವುದಿಲ್ಲ. ಆತ ಯಾವುದೇ ರೂಪಾಕಾರಕ್ಕೆ, ಎಲ್ಲೆಗೆ ಸೀಮಿತನಾಗದೆ ಎಲ್ಲರನ್ನೂ ನಡೆಸುವ ಯೋಗ್ಯತೆ ಹೊಂದಿದ್ದಾನೆ.

ಆತ ಆದಿ-ಅಂತ್ಯ ರಹಿತ. ಆನ್‌ಸೆಲ್ಮ್‌ನ ಹೇಳಿಕೆಯನ್ನು ಇಲ್ಲಿ ಉದ್ಧರಿಸುವುದು ಉಚಿತ, 'ನೀನು ನೆನ್ನೆ–ಈದಿನ–ನಾಳೆಯ ಎಲ್ಲೆಗೆ ಒಳಪಡುವವನಲ್ಲ, ನೀನು ಕಾಲಾತೀತ. ನಾಳೆಗೆ ಒಂದು ಎಲ್ಲೆ ಇದೆ. ನೀನಿಲ್ಲದೆ ಯಾವ ಕಾರ್ಯ ಜರುಗದಿದ್ದರೂ ನೀನು ಕಾಲಾತೀತ, ನೀನಲ್ಲದ ವಸ್ತು ಯಾವುದೂ ಇಲ್ಲ.

ಆತ ಕರ್ತಾರ, ಈ ಕರ್ತೃತ್ವ 'Creation out of nothing' 'ಶೂನ್ಯದಿಂದ ಸೃಷ್ಟಿರಚನೆ ಮಾಡುವವನು'—ಅಂದರೆ ದೇವರು–ಸೃಷ್ಟಿ ಎರಡೂ ಭಿನ್ನ ಅಸ್ತಿತ್ವ ಪಡೆದಿರುವುದೆಂಬ ಅಭಿಪ್ರಾಯ ಹೊರಮೂಡುತ್ತದೆ; ತಾರ್ಕಿಕವಾಗಿ ವಿಚಾರ ಮಾಡಿದಾಗ ಯಾವುದೇ ವಸ್ತುವನ್ನು ಸೃಷ್ಟಿಸುವವನು ದೇವರಲ್ಲದೆ ಬೇರೆ ಅಲ್ಲ; ಅಂದರೆ

ಯೆಹೂದಿ–ಕ್ರಿಶ್ಚಿಯನ್ ಕಲ್ಪನೆಯಲ್ಲಿ ಮನುಷ್ಯ ದೇವರಾಗಬಲ್ಲ ಎಂಬ ಕಲ್ಪನೆ ಊಹಾತೀತವಾಗುತ್ತದೆ.

ಬೇರೆ ರೀತಿಯಲ್ಲಿ ಹೇಳುವುದಾದರೆ ರಚಿತವಾದ ವಸ್ತು ತನ್ನ ಪ್ರತಿಯೊಂದು ಕ್ರಿಯೆಗೂ ಕರ್ತಾರನ ಆಸರೆಯನ್ನು ಬಯಸುತ್ತದೆ. ಅಂದರೆ ಮನುಷ್ಯ ತನ್ನ ಪ್ರತಿಯೊಂದು ವರ್ತನೆಗೆ ದೇವರ ಹ್ಞೂಗುಟ್ಟುವಿಕೆಗೆ ಕಾದಿರುತ್ತಾನೆ. ನಮ್ಮ ಪ್ರತಿಯೊಂದು ದಿನವೂ ಆತನ ಕೃಪಾಭಿಕ್ಷೆಯಿಂದ ದೊರಕುತ್ತದೆ. ಆದುದರಿಂದ ನಾವು ಆತನಿಗೆ ಕೃತಜ್ಞತೆಯನ್ನು ತೋರಿ ಅದನ್ನು ಅನುಭವಿಸಬೇಕು. ದೇವರ ಕೃಪೆಯಿಂದ ಮಾತ್ರ ನಾವಿಲ್ಲಿ ಬದುಕಿದ್ದೇವೆ. ಆದುದರಿಂದ ನಾವು ಆತನಿಗೆ ಜವಾಬ್ದಾರಿಯುತವಾಗಿ ವರ್ತಿಸಿ ಈ ಜೀವನವನ್ನು ಅನುಭವಿಸಬೇಕು.

ದೇವರು ವೈಯಕ್ತಿಕ ಅಸ್ತಿ ಎಂಬ ಕಲ್ಪನೆ ಯೆಹೂದಿ ಹಾಗೂ ಕ್ರಿಶ್ಚಿಯನ್ ಧರ್ಮಗಳೆರಡರಲ್ಲೂ ಕಂಡುಬರುತ್ತದೆ. 'ನೀನು ನಮ್ಮ ತಂದೆಯು ದೇವರು, ಅಬ್ರಾಹಾಮನ ದೇವರು, ಐಸಕ್‌ನ ದೇವರು, ಜೇಕಬ್‌ನ ದೇವರು' ಎಂದೆಲ್ಲಾ ದೇವದೂತರು, ಹಾಡುಗಾರರು ದೇವರ ಕೀರ್ತನೆ ಮಾಡಿ ಆತನಿಗೆ ವೈಯಕ್ತಿಕವಾಗಿ ಪ್ರಾರ್ಥನೆ ಸಲ್ಲಿಸುತ್ತಾರೆ. 'ಓ ದೇವರೇ, ನನ್ನ ಅಳುವನ್ನು ಕೇಳು, ನನ್ನ ಪ್ರಾರ್ಥನೆಯನ್ನು ಕೇಳು' ಎಂದು ಕೂಗುತ್ತಾರೆ. 'ಹೊಸ ನಡವಳಿಕೆ'ಯಲ್ಲೂ ದೇವರ ಕುರಿತಾದ ಈ ವೈಯಕ್ತಿಕತೆ ಉಳಿದುಕೊಂಡು ಬಂದಿರುವುದನ್ನು ನಾವು ಕಾಣಬಹುದು.

ನಮ್ಮ ಸಮಕಾಲೀನ ಯೆಹೂದಿ ಚಿಂತಕ ಮಾರ್ಟಿನ್ ಬೂಬರ್ ದೇವರೊಡನೆ ಎರಡು ವಿಧವಾದ ಸಂಬಂಧಗಳನ್ನು ಗುರುತಿಸುವುದು ಕಾಣಿಸುತ್ತದೆ. 'Thou' 'I' 'ನೀನು–ನಾನು' ಇದೇ ರೀತಿಯಲ್ಲಿ ಅನೇಕ ಕ್ರಿಶ್ಚಿಯನ್ ಸಾಧಕರು ದೇವರನ್ನು ಅಲೌಕಿಕವಾದ 'ನೀನು' ಎಂದು ಕಂಡು ಆತ ಪ್ರತಿರೂಪವಾಗಿ ನಮ್ಮನ್ನು ಸೃಷ್ಟಿಸಿ, ಜ್ಯೂಗಳ ವೈಯಕ್ತಿಕ ಸ್ವಾತಂತ್ರ್ಯವನ್ನೂ ಜವಾಬ್ದಾರಿಯನ್ನೂ ಕಾಪಾಡುತ್ತಾನೆ ಎಂದೂ ಹೇಳುತ್ತಾರೆ.

ಒಳ್ಳೆಯತನ, ಪ್ರೀತಿ ಇವೆರಡೂ ಯಾವುದೇ ಧರ್ಮವಲ್ಲಾದರೂ ದೇವರಿಂದ ಅಪೇಕ್ಷಿಸುವ ಎರಡು ತತ್ವಗಳು. ಹೊಸ ನಡವಳಿಕೆಯಲ್ಲಿ ಸಭ್ಯತೆ, ಪ್ರೀತಿ, ಕೃಪೆ ಇವು ಮೂರೂ ಪ್ರೀತಿ ಎಂಬ ಶಬ್ದವಲ್ಲಡಗಿರುವುದು ಕಂಡುಬರುತ್ತದೆ. ಗ್ರೀಕ್ ಭಾಷೆಯ ಪದ 'ಇರೋಸ್–ಪ್ರೀತಿಯ ಅಪೇಕ್ಷೆ' ಇದು ಹೊಸ ನಡವಳಿಕೆಯಲ್ಲಿ 'ಅಗೇಪ್' ಪ್ರೀತಿಯನ್ನು ಕೊಡುವುದು ಎಂದು ಬಳಕೆಯಲ್ಲಿದೆ. 'ಇರೋಸ್'ನ ಹಾಗೆ 'ಅಗೇಪ್'ಗೆ ಯಾವುದೇ ನೀತಿ–ನಿಯಮವಿಲ್ಲ. ಅದು ಎಲ್ಲೆಡೆ ಸೀಮಾತೀತವಾಗಿ ನೀಡುವ ಪ್ರೀತಿ, ಪ್ರೀತಿ ಕೊಡುವ ವ್ಯಕ್ತಿಯ ಸೌಖ್ಯ-ತೃಪ್ತಿಯ ಚಿಂತನೆ ಅಗೇಪ್‌ನಲ್ಲಿದೆ. 'ದೇವರ ಆಸಕ್ತಿ ನಮಗಿದೆ, ಆತ ನಮ್ಮ ಶಕ್ತಿ, ಯಾವಾಗಲೂ ನಮ್ಮೊಡನಿದ್ದು, ನಮ್ಮ ಕಷ್ಟ ಕಾಲದಲ್ಲಿ ಆತ ಸಹಾಯ ನೀಡುತ್ತಾನೆ.' 'ದೇವರು ಹೀಗೆ ಪ್ರಪಂಚವನ್ನು ಪ್ರೀತಿಸಿದ...' ಎಂದು ಹೇಳುವಾಗ 'ಅಗೇಪ್' ಪದವೇ ಬಳಕೆಯಾಗಿದೆ.

ದೇವರನ್ನು 'Lord', 'King', 'Father' ಎಂದು ಕರೆಯುವಾಗ ದೇವರು ನಮ್ಮಿಂದ ಸಂಪೂರ್ಣ ವಿಧೇಯತೆಯನ್ನು ಬಯಸುತ್ತಾನೆಂದು ಹೇಳಿದರೂ ದೇವರು ಒಳ್ಳೆಯವನೇ ಎಂಬ ನಂಬಿಕೆ ಕೂಡ ಎದ್ದು ಕಾಣಿಸುತ್ತದೆ.

ಯೆಹೂದಿ-ಕ್ರಿಶ್ಚಿಯನ್ ಧರ್ಮಗಳೆರಡರಲ್ಲೂ ಒಟ್ಟಿನಲ್ಲಿ ದೇವರು ಅಪರಂಪಾರ, ಶಾಶ್ವತ, ಆದಿ-ಅಂತ್ಯಹೀನ, ವೈಯಕ್ತಿಕ ಸತ್ಯ, ತನ್ನನ್ನು ಬಿಟ್ಟು ಮಿಕ್ಕೆಲ್ಲದರ ಕರ್ತಾರ ಹಾಗೂ ತಾನು ರಚಿಸಿದ ಮನುಷ್ಯ ಜೀವಗಳಿಗೆ ತನ್ನ ಪವಿತ್ರತೆಯನ್ನು ಪ್ರೀತಿಯನ್ನು ಸಾರಿದವನು' ಎಂಬ ತತ್ವ ಕಂಡುಬರುತ್ತದೆ.

ಸಂಗ್ರಹ : ಬಿ. ವೈ ಲಲಿತಾಂಬ

## ೨. ಜ್ಯೂ ಸಂತತಿ

ಜುಡಿಯಾ ಪ್ರದೇಶದಲ್ಲಿ ವಾಸವಾಗಿದ್ದ ಜುಡಾ ಬುಡಕಟ್ಟಿನ ಧರ್ಮವೇ ಜ್ಯುಡಾಯಿಸಂ. ಈ ಧರ್ಮವನ್ನು ಆಚರಿಸುವವರೇ ಜ್ಯೂ ಜನಾಂಗ. ಜ್ಯೂಗಳು ಏಷ್ಯಾಟಿಕ್ ಮೂಲದವರು. ಬೈಬಲ್ಲಿನ ಹಳೇ ಒಡಂಬಡಿಕೆಯಲ್ಲಿ ಜ್ಯೂಗಳ ನಾಡಿನ ಪ್ರಾಚೀನ ದಾಖಲೆಗಳು ದೊರೆಯುತ್ತವೆ. ಕ್ರಿ.ಪೂ. 2100–2000ದಷ್ಟು ಹಿಂದಕ್ಕೆ ಜ್ಯೂಗಳ ಇತಿಹಾಸವನ್ನು ಸಂಶೋಧಕರು ಒಯ್ಯುತ್ತಾರೆ. ಅಬ್ರಹಂ ಈ ಸಂತತಿಯ ಮೂಲ ಪುರುಷ. ಮೆಸಪೊಟೇಮಿಯದಿಂದ ಅಬ್ರಹಂ ತನ್ನ ಗುಂಪಿನೊಂದಿಗೆ ಜ್ಯೂಗಳ ದೈವದತ್ತ ಭೂಮಿ ಜ್ಯುಡಿಯಾ ಪ್ರದೇಶಕ್ಕೆ ಬಂದಿರಬೇಕು. (ಜುಡಿಯಾ ಮುಂದೆ ಪ್ಯಾಲೆಸ್ಟೈನ್ ಆಗಿ, ಈಗ ಇಸ್ರೇಲ್ ಆಗಿದೆ.) ಜ್ಯೂಗಳು ನೆಲೆಸಿದ ಈ ಭೂಪ್ರದೇಶ ಉತ್ತರ ದಕ್ಷಿಣ ಚಕ್ರವರ್ತಿಗಳ ಯುದ್ಧಭೂಮಿಯೋ, ಸೈನ್ಯಚಾಲನೆಯ ಮಾರ್ಗವೋ ಆಗಿ ಉದ್ದಕ್ಕೂ ಯುದ್ಧಭೀತಿಯಲ್ಲೇ ಉಸಿರಾಡಿಕೊಂಡು ಬಂದ ನಾಡು.

ಅಬ್ರಹಂ ನಂತರದ ಎರಡನೆಯ ಪೀಳಿಗೆ ಪ್ರಾಯಶಃ ಸುದೀರ್ಘ ಬರಗಾಲದ ಪರಿಣಾಮವಾಗಿ ಈಜಿಪ್ಟ್‌ಗೆ ವಲಸೆ ಹೋಗಬೇಕಾಯಿತು. ಅಲ್ಲಿ ಜ್ಯೂಗಳು ಗುಲಾಮರಾಗಿ ಪಡಬಾರದ ಕಷ್ಟಪಟ್ಟನಂತರ ಮೋಸೆಸ್, ಅವರ ಉದ್ಧಾರಕನಾಗಿ ಪರಿಣಮಿಸಿದ. ಆತನ ನಾಯಕತ್ವದಲ್ಲಿ ಜ್ಯೂಗಳು ಕೆಂಪು ಸಮುದ್ರವನ್ನು ದಾಟಿ ಸಿನಾಯ್ ಮರುಭೂಮಿಯಲ್ಲಿ ಸುಮಾರು ನಲವತ್ತು ವರ್ಷಗಳ ಅಜ್ಞಾತಪರ್ವದ ಅಲೆದಾಟ ಮುಗಿಸಿ ಮತ್ತೆ ಕ್ರಿ. ಪೂ. 1200ರ ಹೊತ್ತಿಗೆ ಜೆರೋಸಲಮ್‌ಗೆ ಹಿಂದಿರುಗಿದರು. ಆ ಪ್ರದೇಶದಲ್ಲಿ ವಾಸವಾಗಿದ್ದ ಸ್ಥಳೀಯರನ್ನು ಹಿಮ್ಮೆಟ್ಟಿಸಿ ತಮ್ಮ ಪ್ರಬಲ ಶತ್ರುಗಳಾದ ದಕ್ಷಿಣ ಪಶ್ಚಿಮದ ಪ್ಯಾಲಿಸ್ಟೈನರೊಂದಿಗೆ ನಿರಂತರವಾಗಿ ಹೋರಾಡುತ್ತ

ಹೇಗೋ ತಮ್ಮ ನೆಲೆಯನ್ನು ತಮ್ಮ ಪವಿತ್ರ ನಾಡಿನಲ್ಲಿ ಸ್ಥಾಪಿಸಿಕೊಂಡು ಜೀವಿಸ ತೊಡಗಿದರು. ಬಹುಸಂಖ್ಯಾತರ ಬೇಡಿಕೆಯ ಪರಿಣಾಮವಾಗಿ ಸಾಲ್ ಅವರ ಪ್ರಥಮ ದೊರೆಯಾಗಿ ಆಯ್ಕೆಗೊಂಡ. ಆತನ ಮಗ ಡೇವಿಡ್. ಮತ್ತು ಅವನ ಮಗ ಸಾಲೊಮನ್ ಕಾಲದಲ್ಲಿ (ಕ್ರಿ. ಪೂ. 1933) ಜೆರೋಸಲಮ್‌ನಲ್ಲಿ ದೇವಾಲಯ ಸ್ಥಾಪಿತವಾಯಿತು. ಜ್ಯೂ ಇತಿಹಾಸದ ಸುವರ್ಣ ಕಾಲ ಅದು.

ಕ್ರಿ.ಪೂ. 63ರಲ್ಲಿ ರೋಮ್ ಚಕ್ರಾಧಿಪತ್ಯದ ನೆರಳು ಮಧ್ಯಪೂರ್ವ ಪ್ರದೇಶ ಗಳಲ್ಲೆಲ್ಲಾ ಹರಡತೊಡಗಿತು. ಕ್ರಿ.ಪೂ. 63ರಲ್ಲಿ ಪಾಂಪೆ ಜೆರೋಸಲಿಮ್‌ನ್ನು ಆಕ್ರ ಮಿಸಿದ. ಪ್ರಾರಂಭದಲ್ಲಿ ರೋಮನ್ನರು ಸ್ಥಳೀಯ ಅರಸರ ಮೂಲಕ ಪರೋಕ್ಷ ಆಡಳಿತ ನಡೆಸಿದರು. ನಂತರ ನೇರವಾಗಿ ತಮ್ಮವನೇ ರಾಜ್ಯಪಾಲನನ್ನು ನೇಮಿಸಿ ಸ್ಥಳೀಯ ಹೋಳಿಗೆಯನ್ನು ಬದಿಗೊತ್ತಿದರು. ಏಸುಕ್ರಿಸ್ತನನ್ನು ಶಿಲುಬೆಗೆ ಏರಿಸಿದಾಗ ಇಂಥ ರೋಮನ್ ಪ್ರತಿನಿಧಿಯ ಆಳ್ವಿಕೆಯಿತ್ತು. ರೋಮನ್ ಆಳ್ವಿಕೆ ಜ್ಯೂಗಳ ಧಾರ್ಮಿಕ ಭಾವನೆಯನ್ನು ನೋಯಿಸುತ್ತ ಹೋದುದರ ಪರಿಣಾಮವಾಗಿ ಕ್ರಿಸ್ತಶಕ 70ರಲ್ಲಿ ಕ್ರಾಂತಿಯೊಂದು ಉಂಟಾಗಿ ಜೆರೋಸಲಮ್ ನಗರದ ನಾಶಕ್ಕೆ ಕಾರಣ ವಾಯಿತು. ಕ್ರಿಸ್ತಶಕ 130ರಲ್ಲಿ ಮತ್ತೆ ತಲೆವೆತ್ತಿದ ಚಳವಳಿಯ ಪರಿಣಾಮವಾಗಿ ಜ್ಯೂಗಳು ತಮ್ಮ ನಾಡನ್ನು ತ್ಯಜಿಸಿ ದೇಶಭ್ರಷ್ಟರಾದರು. ಆಮೇಲೆ ಈ ಜನಾಂಗ ವಿಶ್ವದಾದ್ಯಂತ ನೆಲೆತಪ್ಪಿ ಅಲೆಯಬೇಕಾಯಿತು. ಬೇರೆ ಬೇರೆ ದೇಶಗಳಲ್ಲಿ ಜ್ಯೂಗಳು ನೆಲಸಿ ವ್ಯಾಪಾರ ಉದ್ದಿಮೆಗಳು ನಡೆಸುತ್ತಾ ಜೀವಿಸತೊಡಗಿದರು. ಬಡ್ಡಿಯ ಮೇಲೆ ಸಾಲ ಕೊಡುವುದು ಅವರ ಮುಖ್ಯ ವೃತ್ತಿಯಾಯಿತು. (ಕ್ರಿಶ್ಚಿಯನ್ ಮತ್ತು ಇಸ್ಲಾಂ ಧರ್ಮಗಳಲ್ಲಿ ಇದು ನಿಷಿದ್ಧ) ಇದರಿಂದ ಯೆಹೂದಿ ಜನಾಂಗದ ಬಗ್ಗೆ ಮಿಶ್ರ ಪ್ರತಿಕ್ರಿಯೆ ಉಂಟಾಯಿತು. ಕ್ರಿ.ಶ. 1290ರಲ್ಲಿ ಜ್ಯೂಗಳು ಇಂಗ್ಲೆಂಡ್‌ನಲ್ಲಿ ಬಹಿಷ್ಕೃತ ರಾದುದನ್ನು ಇಲ್ಲಿ ಸ್ಮರಿಸಬಹುದು. ಕ್ರಿ.ಶ. 1306ರಲ್ಲಿ ಫ್ರಾನ್ಸ್‌ನಲ್ಲೂ ಜ್ಯೂಗಳಿಗೆ ಅದೇ ಗತಿ ಒದಗಿಸಿತು. ಸ್ಪೇನ್‌ನಲ್ಲಿ ಸಹಾ ಇಂಥ ಒತ್ತಡಕ್ಕೆ ಅವರು ಒಳಗಾದರು.

ಶತಮಾನಗಳ ನಂತರ ಜ್ಯೂಗಳು ಯೂರೋಪಿನಲ್ಲಿ ಮತ್ತೆ ಸ್ಥಾನಮಾನ ಗಳಿಸ ತೊಡಗಿದರು. ಕಾಮನ್‌ವೆಲ್ತ್ ಸಂದರ್ಭದಲ್ಲಿ (1649-58) ಆಲಿವರ್ ಕ್ರಾಮ್ ವೆಲ್ ಜ್ಯೂಗಳು ಇಂಗ್ಲೆಂಡ್‌ಗೆ ಹಿಂದಿರುಗುವುದನ್ನು ಪ್ರೋತ್ಸಾಹಿಸಿದನಾದರೂ ಇಂಗ್ಲೆಂಡ್‌ನ ಪೌರತ್ವ ಅವರಿಗೆ ದೊರಕಲು ಮುಂದೆ 200 ವರ್ಷಗಳೇ ಬೇಕಾದವು. ರಷ್ಯಾದಲ್ಲಂತೂ ಜ್ಯೂಗಳು ಸಾಮಾಜಿಕ ಆಕ್ರೋಶಕ್ಕೆ ಮತ್ತೆ ಮತ್ತೆ ಒಳಗಾದರು. ದ್ವಿತೀಯ ಜಾಗತಿಕ ಮಹಾಯುದ್ಧದ ಕಾಲದಲ್ಲಿ ಜರ್ಮನ್ ನಾಜಿಗಳಿಂದ ಜ್ಯೂಗಳು ಅನುಭವಿಸಿದ ಹಿಂಸೆಯಂತೂ ಅತಿರೇಕದ ಮಟ್ಟವನ್ನು ಮುಟ್ಟಿತು. ಆ ಕಾಲದಲ್ಲಿ ನಾಜಿಗಳ ಹಿಂಸೆಗೆ ಒಳಪಟ್ಟು ಮೃತರಾದ ಜ್ಯೂಗಳ ಸಂಖ್ಯೆ 60 ಲಕ್ಷ. ಅದರಲ್ಲಿ ಮಕ್ಕಳ ಸಂಖ್ಯೆಯೇ 10 ಲಕ್ಷ. ಈ ಬಗೆಯ ಅಮಾನವೀಯ ಬರ್ಬರತೆ ಮಾನವ

ಇತಿಹಾಸದಲ್ಲೇ ಕಳಂಕಪ್ರಾಯವಾದುದು. ಇವತ್ತೂ ಕೂಡ ಪೋಲೆಂಡಿನಲ್ಲಿ ಜ್ಯೂಗಳ ಬದುಕು ಅಸಹನೀಯವಾಗಿದೆ. ರಷ್ಯಾವನ್ನು ತ್ಯಜಿಸಿ ಇಸ್ರೇಲಿಗೆ ಹಿಂದಿರುಗಲು ಅಪೇಕ್ಷಿಸುವ ಜ್ಯೂಗಳ ಮನವಿಯನ್ನು ಏಕಪ್ರಕಾರವಾಗಿ ಅಧಿಕಾರಿ ವಲಯ ತಿರಸ್ಕರಿಸುತ್ತಾ ಬಂದಿದೆ.

ಈ ಮಧ್ಯೆ ಜ್ಯೂಗಳ ಸ್ವತಂತ್ರರಾಷ್ಟ್ರ ಸ್ಥಾಪನೆಗಾಗಿ ಜಿಯೋನಿಸಂ ಚಳವಳಿ 1860ರಿಂದಲೂ ನಡೆಯುತ್ತಲೇ ಬಂದು, ಅದರ ಪರಿಣಾಮವಾಗಿ 1948ರಲ್ಲಿ ಬ್ರಿಟಿಷರು ಪ್ಯಾಲಿಸ್ಟೇನ್ ಬಿಡುವಾಗ (ಪ್ರಥಮ ವಿಶ್ವ ಸಮರದ ನಂತರ ಅದು ಅವರ ಆಳ್ವಿಕೆಯಲ್ಲಿತ್ತು) ಜ್ಯೂಗಳಿಗೆ ಆ ನಾಡನ್ನು ಒಪ್ಪಿಸಿ ಇಸ್ರೇಲ್ ಗಣರಾಜ್ಯ ಸ್ಥಾಪನೆಗೆ ಪರೋಕ್ಷವಾಗಿ ಕಾರಣರಾದರು. ಅಮೇರಿಕದ ಒತ್ತಾಸೆಯೂ ಅದಕ್ಕೆ ಪೂರಕವಾಗಿತ್ತು. ಇಸ್ರೇಲ್ ಗಣರಾಜ್ಯ ಸ್ಥಾಪನೆಯಾದ ಮೇಲೆ ಅದು ತನ್ನ ರಾಷ್ಟ್ರದ ಗಡಿರೇಖೆಗಳನ್ನು 1967ರ ಯುದ್ಧದ ಮೂಲಕ ವಿಸ್ತರಿಸಿಕೊಂಡಿತು.

ಒಟ್ಟಾರೆ ಜಗತ್ತಿನಲ್ಲಿ ಈಗ 14 ಮಿಲಿಯನ್ ಜ್ಯೂಗಳಿದ್ದಾರೆ. ಅವರಲ್ಲಿ 3,250,000 ಜನ ಇಸ್ರೇಲ್‌ನಲ್ಲೂ, 6 ಮಿಲಿಯನ್‌ನಷ್ಟು ಜನ ಅಮೇರಿಕ ಸಂಯುಕ್ತ ಸಂಸ್ಥಾನದಲ್ಲೂ, 800,000 ಮಂದಿ ಕೆನಡಾದಲ್ಲೂ, 2, 00,000 ಜನ ರಷ್ಯಾದಲ್ಲೂ, 700,000 ಜನ ಫ್ರಾನ್ಸ್‌ನಲ್ಲೂ, 425,000 ಜನ ಬ್ರಿಟನ್‌ನಲ್ಲೂ ನೆಲೆಸಿದ್ದಾರೆ.

## ೩. ರಿಪಬ್ಲಿಕ್ ಆಫ್ ಇಸ್ರೇಲ್

ಇಸ್ರೇಲ್ ಪಶ್ಚಿಮ ದಕ್ಷಿಣ ಏಷಿಯಾದ ಒಂದು ಭಾಗ. 14 ಮೇ 1948ರಲ್ಲಿ ಇದು ಸ್ವತಂತ್ರ ಗಣರಾಜ್ಯವಾಗಿ ಘೋಷಿತವಾಯಿತು. ಬ್ರಿಟಿಷ್ ಪ್ಯಾಲಸ್ಟೇನ್ ಹೈಕಮಿಷನರ್, ಜ್ಯೂಗಳಿಗೆ ಇಸ್ರೇಲನ್ನು ಒಪ್ಪಿಸಿ ಹೋದಮೇಲೆ, ಈಜಿಪ್ಟ್, ಜೋರ್ಡಾನ್, ಇರಾಕ್, ಸಿರಿಯಾ ಮತ್ತು ಲೆಬನಾನ್ ಈ ಎಲ್ಲ ಅರಬ್ ರಾಜ್ಯಗಳೂ ಇಸ್ರೇಲ್ ಮೇಲೆ ಒಟ್ಟಿಗೇ ಕದನ ಸಾರಿದವು. ಬ್ರಿಟಿಷರು ಜ್ಯೂಗಳಿಗೆ ತೆರವು ಮಾಡಿ ಕೊಟ್ಟು ಹೋದ ಪ್ಯಾಲಿಸ್ಟೇನ್ ಭಾಗದಲ್ಲಿ ಜ್ಯೂಗಳಿಗಿಂತ ಅಧಿಕ ಸಂಖ್ಯೆಯಲ್ಲಿ ಅರಬ್ಬರು ಇದ್ದುದರಿಂದ, ಈ ದೇಶ ಜ್ಯೂಗಳಿಗಿಂತ ಹೆಚ್ಚಾಗಿ ತಮಗೆ ಸೇರಿದ್ದು ಎಂದು ಅರಬ್ಬರು ಸಹಜವಾಗಿಯೇ ಭಾವಿಸಿದರು. ಜೋರ್ಡಾನಿನ ಅರಬ್ಬರು ಜೆರೋಸಲೆಮ್ ನಗರದ ಜ್ಯೂನೆಲೆಗಳನ್ನು ವಶಪಡಿಸಿಕೊಂಡರು. ವಿಶ್ವಸಂಸ್ಥೆಯ ಮಧ್ಯಪ್ರವೇಶದಿಂದ ಕದನವಿರಾಮ ಏರ್ಪಟ್ಟಿತಾದರೂ, ಅದನ್ನು ಅರಬ್ಬರು ಮತ್ತೆ ಮುರಿದರು. 1949ರಲ್ಲಿ ಆರ್ಮಿಸ್ಟಿಕ್ ಒಪ್ಪಂದವಾಯಿತು. 'ಇಬ್ಭಾಗವಾಗಿದ್ದ ಜೆರೋಸಲೆಮ್ ನಗರ ಬಿಕ್ಕಟ್ಟಿನ ಕೇಂದ್ರವಾಗಿ ಪರಿಣಮಿಸಿತು. ಜ್ಯೂಗಳ ಪವಿತ್ರ ಸ್ಥಳಗಳು

ಜೋರ್ಡಾನಿಯನ್ ಅರಬ್ಬರ ವಶದಲ್ಲಿ ಇದ್ದುವು. ಇಸ್ರೇಲಿನಿಂದ ಅಧಿಕಪ್ರಮಾಣದಲ್ಲಿ ಅರಬ್ ನಿರಾಶ್ರಿತರು ಜೋರ್ಡಾನ್‌ಗೆ ವಲಸೆ ಬರತೊಡಗಿದ್ದು, ಅರಬ್ಬರ ಕಣ್ಣು ಕೆಂಪಾಗಲು ಕಾರಣವಾಯಿತು. 1956, 1967ರಲ್ಲಿ ಇಸ್ರೇಲ್ ಅರಬ್ ರಾಜ್ಯ ಗಳೊಂದಿಗೆ ನಡೆದ ಯುದ್ಧಗಳಲ್ಲಿ ಜಯ ಪಡೆಯಿತು. 1973ರ ಯುದ್ಧದಲ್ಲಿ ಅರಬ್ಬರ ಕೈ ಮೇಲಾಯಿತಾದರೂ, ಅಮೆರಿಕಾದ ಬೆಂಬಲದಿಂದ ಇಸ್ರೇಲ್ ಸೋಲಿನ ದವಡೆಯಿಂದ ಪಾರಾಯಿತು. ಪ್ರೆಸಿಡೆಂಟ್ ಸಾದತ್ತರ ಶಾಂತಿ ಪ್ರಯತ್ನ ಮತ್ತು ಅದರ ಫಲವಾದ ಕ್ಯಾಂಪ್ ಡೇವಿಡ್ ಒಪ್ಪಂದ (1979)ದ ಫಲವಾಗಿ ಸಿನಾಯ್ ಈಜಿಪ್ಟ್‌ಗೆ ಸಿಕ್ಕಿತು. ಇಸ್ರೇಲ್ ಗೋಲ್ಡನ್ ಹೈಟ್ಸ್ ಮತ್ತು ವೆಸ್ಟ್ ಬ್ಯಾಂಕ್‌ಗಳನ್ನು ತನ್ನ ವಶದಲ್ಲಿ ಉಳಿಸಿಕೊಂಡಿತು. 198 ರಲ್ಲಿ ಇಸ್ರೇಲ್ ದಕ್ಷಿಣ ಲೆಬನಾನ್‌ನನ್ನು ಅತಿಕ್ರಮಣದಿಂದ ವಶಪಡಿಸಿಕೊಂಡಿತು.

## ೪. ಜಿಯೋನಿಸಂ

ಇದು ಥಿಯೋಡರ್ ಹೆರ್ಜಿಲ್ ಪ್ರಾರಂಭಿಸಿದ ರಾಜಕೀಯ ಚಳವಳಿ. 1897ರಲ್ಲಿ ಆರಂಭವಾದ ಈ ಚಳವಳಿ ಜ್ಯೂಗಳಿಗೆ ಪ್ಯಾಲಿಸ್ಟೈನ್‌ನಲ್ಲಿ ಸ್ವತಂತ್ರ ರಾಷ್ಟ್ರವನ್ನು ಕಲ್ಪಿಸುವ ಉದ್ದೇಶ ಹೊಂದಿತ್ತು. 1948ರಲ್ಲಿ ಇಸ್ರೇಲ್ ಗಣರಾಜ್ಯ ಸ್ಥಾಪನೆ ಯೊಂದಿಗೆ ಈ ಗುರಿ ಸಾಧಿತವಾಯಿತು. ಜೆರೋಸಲೆಮ್ ನಗರದ ಬಳಿಯಲ್ಲಿರುವ ಬೆಟ್ಟವೊಂದರ ಹೆಸರಿನಿಂದ (ಜಿಯೊನ್) ಜಿಯೋನಿಸಂ ಸಾಧಿತವಾಗಿದೆ. ರಾಜ ಡೇವಿಡ್‌ನ ಪ್ರಾಚೀನ ಅರಮನೆಯಿದ್ದ ಸ್ಥಳವದು. ಅನಂತರ ಅದೇ ಸ್ಥಳದಲ್ಲಿ ಜ್ಯೂಗಳ ದೇವಾಲಯವೊಂದು ಸ್ಥಾಪಿತವಾಗಿದೆ.

## ೫. ಹೀಬ್ರೂ ಭಾಷೆ

ಹೀಬ್ರೂ ಇಸ್ರೇಲ್‌ನ ಅಧಿಕೃತ ಭಾಷೆ. ಸೆಮಿಟಿಕ್ ಬುಡಕಟ್ಟಿಗೆ ಸೇರಿದ್ದು. ಹೆಚ್ಚು ಕಮ್ಮಿ ಇಡೀ 'ಹಳೇ ಒಡಂಬಡಿಕೆ' ಹೀಬ್ರೂ ಭಾಷೆಯಲ್ಲಿ ಇದೆ. ಬೈಬಲ್ ಸಂಶೋಧಕರಿಗೆ ಈ ಕಾರಣವಾಗಿ ಹೀಬ್ರೂ ಭಾಷೆಯ ಆಳವಾದ ಪರಿಚಯ ಅತ್ಯಗತ್ಯ. ಆದುದರಿಂದ ಇಂದಿಗೂ ಹಳೇ ಹೀಬ್ರೂ ಭಾಷೆಯ ಅಭ್ಯಾಸ ವಿಸ್ತೃತ ಪ್ರಮಾಣದಲ್ಲಿ ನಡೆಯುತ್ತಿದೆ.

ಏಸುಕ್ರಿಸ್ತ ಹುಟ್ಟುವ ವೇಳೆಗೆ ಹೀಬ್ರೂ ಆಡುಮಾತಾಗಿ ಉಳಿದಿರಲಿಲ್ಲ. ಧಾರ್ಮಿಕ ಮತ್ತು ಪಂಡಿತವಲಯಗಳಲ್ಲಿ ಮಾತ್ರ ಅದು ಬಳಕೆಯಾಗುತ್ತಿತ್ತು. ಕ್ರಿ.ಪೂ.

400ರ ವೇಳೆಗೆ ಅರ್ರಾಮಯಿಕ್ ಭಾಷೆ, ಹೀಬ್ರೂವನ್ನು ಹಿಂದೆ ತಳ್ಳುತ್ತಾ ವ್ಯವಹಾರದ ಭಾಷೆಯಾಗಿ ರೂಪಗೊಳ್ಳತೊಡಗಿತ್ತು. ಉತ್ತರ ಸಿರಿಯಾ ಮತ್ತು ಮೆಸಪೊಟೇಮಿಯಾಗಳಲ್ಲಿ ಬಳಕೆಯಲ್ಲಿದ್ದ ಅರ್ರಾಮಯಿಕ್ ಭಾಷೆ, ವ್ಯಾಪಾರ ವ್ಯವಹಾರದಲ್ಲೂ ಬಳಕೆಯಾಗತೊಡಗಿದ ಮೇಲೆ ವಿಶೇಷ ಜನಪ್ರೀತಿಯನ್ನು ಗಳಿಸಿತೆನ್ನಬಹುದು. ಏಸು ಮಾತಾಡುತ್ತಿದ್ದುದು ಅರ್ರಾಮಯಿಕ್ ಭಾಷೆಯನ್ನೇ ವಿನಾ, ಹೀಬ್ರೂವನ್ನಲ್ಲ.

ಜ್ಯೂಗಳು ಈವತ್ತು ಇಸ್ರೇಲ್‌ನಲ್ಲಿ ಆಧುನಿಕ ಹೀಬ್ರೂವನ್ನು ರೂಢಿಗೆ ತಂದಿದ್ದಾರೆ. 19ನೇ ಶತಮಾನದಲ್ಲಿ ರೂಪಿಸಿಕೊಂಡ ಭಾಷೆಯಿದು. ಪ್ರಾಚೀನ ಚಿತ್ರಲಿಪಿಯನ್ನು ಅನುಸರಿಸಿ ಇದಕ್ಕೊಂದು ಅಕ್ಷರಮಾಲೆಯನ್ನು ರೂಪಿಸಲಾಗಿದೆ. ಉರ್ದು ಭಾಷೆಯನ್ನು ಓದುವಂತೆ, ಇದನ್ನು ಬಲದಿಂದ ಎಡಕ್ಕೆ ಬರೆದು ಓದಲಾಗುತ್ತದೆ.

## ೬. ಯಿಡ್ಡಿಷ್ ಭಾಷೆ

ಈವತ್ತು ಸುಮಾರು 6 ಮಿಲಿಯನ್ ಜ್ಯೂಗಳು ಬಳಸುತ್ತಿರುವ ಭಾಷೆ. 12ನೇ ಶತಮಾನದಿಂದ ಈಚೆಗೆ ಪ್ರವರ್ಧಮಾನಕ್ಕೆ ಬಂತು. ಜರ್ಮನ್ ಭಾಷೆ ಇದರ ಮೂಲವಾಗಿದ್ದರೂ, ಈ ಭಾಷೆಯ ಶೇ. 10ರಷ್ಟು ಪದಗಳು ಹೀಬ್ರೂ ಇಂದಲೂ ಉಳಿದ ಶೇ. 10ರಷ್ಟು ಪದಗಳು ಸ್ಲೆವ್ ಭಾಷೆಗಳಿಂದಲೂ ಆಮದಾದವು. ಕ್ರಿ. ಶ. 16ರಿಂದ ಈಚೆಗೆ ಯಿಡ್ಡಿಷ್ ಸಾಹಿತ್ಯಭಾಷೆಯಾಗಿಯೂ ರೂಪಿತವಾಯಿತು. ನೊಬೆಲ್ ಪಾರಿತೋಷಕ ಪಡೆದ ಸಿಂಗರ್‌ನಂಥ ಲೇಖಕ ಯಿಡ್ಡಿಷ್ ಭಾಷೆಯಲ್ಲಿ ತನ್ನ ಕೃತಿಗಳನ್ನು ರಚಿಸಿದ್ದಾನೆ.

## ೭. ಜೆರೋಸಲೆಮ್

ಪ್ಯಾಲಿಸ್ಟೇನ್ ಪ್ರದೇಶದಲ್ಲಿ, ಸಮುದ್ರಮಟ್ಟದಿಂದ 2,500 ಅಡಿ ಎತ್ತರದಲ್ಲಿ, ಮೆಡಿಟರೇನಿಯನ್ ಸಮುದ್ರದಿಂದ 56 ಕಿ. ಮಿ. ದೂರದಲ್ಲಿ ಇರುವ ಪ್ರಾಚೀನ ನಗರ. ಈಗಿನ ಇಸ್ರೇಲಿನ ರಾಜಧಾನಿ.

ರಾಜ ಡೇವಿಡ್ ಕ್ರಿ. ಪೂ. 1000ದಲ್ಲಿ ಜೆರೋಸಲೆಮ್‌ನ್ನು ವಶಪಡಿಸಿಕೊಂಡನೆಂಬುದು ಜ್ಯೂಗಳ ನಂಬಿಕೆ. ಅವನ ಮಗ ಸಾಲೊಮನ್ ಜೆರೋಸಲೆಮ್‌ನಲ್ಲಿ ಮೊದಲ ದೇವಾಲಯವನ್ನು ಕಟ್ಟಿದನಂತೆ. ಕ್ರಿ. ಪೂ. 520ರಲ್ಲಿ ಜ್ಯೂಗಳು ಈ ಪ್ರದೇಶಕ್ಕೆ ಹಿಂದಿರುಗಿ ಮತ್ತೆ ಜೆರೋಸಲೆಮ್‌ನಲ್ಲಿ ತಮ್ಮ ದೇವಾಲಯವನ್ನು ಕಟ್ಟಿಕೊಂಡರು.

ಕ್ರಿಸ್ತನನ್ನು ಜೆರೋಸಲೆಮ್‌ನಲ್ಲಿ ಶಿಲುಬೆಗೇರಿಸಿದ ಸಂದರ್ಭದಲ್ಲಿ, ಈ ನಗರ ರೋಮನ್ನರ ಕೈವಶದಲ್ಲಿತ್ತು. (ಸುಮಾರು 90 ವರ್ಷಗಳ ಕಾಲ ಜೆರೋಸಲೆಮ್

ರೋಮನ್ನರ ವಶದಲ್ಲಿತ್ತು.) ಕ್ರಿ. ಶ. 70ರಲ್ಲಿ, ನಾಲ್ಕು ವರ್ಷದ ಕ್ರಾಂತಿಯನ್ನು ಹೊಸಗಿಹಾಕುವ ಪ್ರಯತ್ನದಲ್ಲಿ ಭಾವಿ ಚಕ್ರಾಧಿಪತಿ ಟೈಟಸ್ ಜೆರೋಸಲೆಮ್‌ನ್ನು ಸಂಪೂರ್ಣವಾಗಿ ಹಾಳುಗೆಡವಿದ.

ಕ್ರಿ.ಶ. 135ರಲ್ಲಿ ಜೆರೋಸಲೆಮ್‌ನ್ನು ಚಕ್ರವರ್ತಿ ಹಾಡ್ರಿಯನ್ ಪುನಃ ಸ್ಥಾಪಿಸಿದ ಮೇಲೆ, ಕ್ರಿಶ್ಚಿಯನ್ ಧರ್ಮ ವಿಜೃಂಭಿಸಿತು. ಕ್ರಿ.ಶ. 638ರಲ್ಲಿ ಜೆರೋಸಲೇಮ್ ಮುಸ್ಲಿಮರ ಅಧೀನಕ್ಕೆ ಬಂತು. ಕ್ರುಸೇಡರುಗಳ ಪ್ರಯತ್ನದ ಫಲವಾಗಿ 1099 ಮತ್ತು 1187ರ ಕಾಲಾವಧಿಯಲ್ಲಿ ತಾತ್ಕಾಲಿಕವಾಗಿ ಇಲ್ಲಿ ಕ್ರಿಶ್ಚಿಯನ್ ಆಳ್ವಿಕೆ ನಡೆಯಿತು. ಮುಂದೆ ತುರ್ಕರ ಆಳ್ವಿಕೆಗೆ ಒಳಪಟ್ಟ ಜೆರೋಸಲೆಮ್‌ನಲ್ಲಿ ಕ್ರಿಶ್ಚಿಯನ್ನರಿಗೆ ತಮ್ಮ ಪವಿತ್ರ ಸ್ಥಳಗಳಲ್ಲಿ ಆರಾಧನೆ ನಡೆಸುವ ಸ್ವಾತಂತ್ರ್ಯವಿತ್ತು.

ಮೊದಲನೇ ಜಾಗತಿಕ ಸಮರದಲ್ಲಿ (1917) ಬ್ರಿಟಿಷ್ ಮತ್ತು ಆಸ್ಟ್ರಿಯನ್ ಸೇನೆ ಜೆರೋಸಲೆಮ್‌ನ್ನು ವಶಪಡಿಸಿಕೊಂಡವು. ಪ್ಯಾಲೆಸ್ಟೈನ್ ಬ್ರಿಟಿಷರ ರಕ್ಷಣೆಗೆ ಒಳಪಟ್ಟು, 1948ರ ವರೆಗೆ ಅವರ ವಶದಲ್ಲಿತ್ತು. ಜೆರೋಸಲೆಮ್ ನಗರ ಇಸ್ರೇಲ್ ಮತ್ತು ಜೋರ್ಡಾನ್‌ಗಳ ನಡುವೆ ಹಂಚಿಹೋಗಿತ್ತು. 1967ರಲ್ಲಿ ಇಸ್ರೇಲ್ ಅದನ್ನು ಪೂರ್ಣವಾಗಿ ತನ್ನ ವಶಕ್ಕೆ ತೆಗೆದುಕೊಂಡಿತು. ಜ್ಯೂಗಳು, ಕ್ರೈಸ್ತರು ಮತ್ತು ಮುಸ್ಲಿಮರು ಮೂವರಿಗೂ ಜೆರೊಸಲೇಮ್ ಪವಿತ್ರ ನಗರ. ಜ್ಯೂಗಳ ಪ್ರಾಚೀನ ದೇವಾಲಯಗಳು ಅಲ್ಲಿವೆ. ಏಸುಕ್ರಿಸ್ತನನ್ನು ಶಿಲುಬೆಗೇರಿಸಿದ ಜಾಗ (ಗೊಲ್ಗೊಥ) ಜೆರೋಸಲೇಮ್ ನಗರದ ಹೊರವಲಯದಲ್ಲಿದೆ. ಪೈಗಂಬರ್ ಜೆರೋಸಲೆಮ್‌ನಿಂದಲೇ ಸ್ವರ್ಗಾರೋಹಣ ಮಾಡಿದ್ದೆಂದು ಮುಸ್ಲಿಮರ ನಂಬಿಕೆ. ಹೀಗಾಗಿ ಧರ್ಮದ ಹೆಸರಿನಲ್ಲಿ ಆ ನಗರವನ್ನು ವಶಪಡಿಸಿಕೊಳ್ಳುವ ಯತ್ನಗಳು ಇತಿಹಾಸದುದ್ದಕ್ಕೂ ನಡೆಯುತ್ತಲೇ ಬಂದಿವೆ.

**ಎಚ್. ಎಸ್. ವೆಂಕಟೇಶಮೂರ್ತಿ**
(ಟಿಪ್ಪಣಿ ೨-೭)

## ೮. ಯೆಹೂದೀ ಮನಃಸ್ಥಿತಿ

**ಮೂಲ : ಗೋಲ್ಡಾ ಮೈರ್**

ಹಸಿವು–ಭಯ ಇವೆರಡೇ ನನಗಿರುವ ಎಳೆತನದ ನೆನಪುಗಳು, ನಾನು ರಷ್ಯಾದಲ್ಲಿ ಹುಟ್ಟಿ ಅಲ್ಲೇ ಎಂಟು ವರ್ಷದವಳಾಗುವ ವರೆಗೆ ಬೆಳೆದೆ. ಮನೆಯ ಹೊರಗಡೆ ಅತಿಯಾದ ಚಳಿಯಾದರೆ ಒಳಗೆ ಅತಿ ಶೂನ್ಯ. ಇಂದಿಗೂ ನನಗೆ ಆ ನೆನಪು ಹಸಿಯಾಗಿದೆ. ನಮ್ಮಮ್ಮ ನನ್ನ ಪಾಲಿನ ಖಿಚಡಿಯನ್ನ ನನ್ನ ತಂಗಿಗೆ ತಿನಿಸುತ್ತಿದ್ದುದನ್ನು ನಾನು ಅಡಿಗೆ ಮನೆಯಲ್ಲಿ ಕುಳಿತು ಕಣ್ಣೀರು ತುಂಬಿಕೊಂಡು ನೋಡುತ್ತಿದ್ದೆ.

ನನ್ನ ತಂಗಿ ಸ್ಕೂಲಿನಲ್ಲಿ ಹಸಿವಿನಿಂದ ನರಳುತ್ತಾ ಎಷ್ಟೋ ಸಾರಿ ಜ್ಞಾನತಪ್ಪಿ ಬಿದ್ದಿದ್ದ ಳಂತೆ. ಈ ವಿಷಯವನ್ನು ನನಗೆ ಆಗ ಯಾರೂ ತಿಳಿಸಿರಲಿಲ್ಲ.

ಅಲ್ಲೇ ಹತ್ತಿರದಲ್ಲೇ ಒಂದು ಚಿಕ್ಕಮನೆ, ಅದರ ಕೆಳಗಿನ ಭಾಗದಲ್ಲಿ ನಾವು ವಾಸ ಮಾಡುತ್ತಿದ್ದೆವು. ನಾವು ನಗರಕ್ಕೆ ಹೋದಾಗಲೆಲ್ಲ ಜನ ನಮ್ಮ ಕಡೆ ಬೆರಳು ಮಾಡಿ ತೋರಿ 'ಇವರು ಏಸುವಿನ ಹಂತಕರು' ಎನ್ನುತ್ತಿದ್ದರು. ಅದನ್ನು ಕೇಳಿ ನಾನು ಭಯದಿಂದ ನಡುಗಲಾರಂಭಿಸುತ್ತಿದ್ದೆ. ಒಂದು ದಿನ ರಾತ್ರಿ ಇದೇ ರೀತಿ ಘೋಷಣೆ ಗಳನ್ನು ಹಾಕುತ್ತಾ ಕೆಲವರು ನಮ್ಮ ಮನೆಯ ಮೇಲೆ ದಾಳಿ ಮಾಡಿದರು. ನಾವು ಯೆಹೂದ್ಯರೆಂಬ ವಿಷಯ ನನಗೆ ಆಗ ತಿಳಿಯಿತು. ಹಾಗೂ ಯೆಹೂದಿಗಳಾದುದರಿಂದ ನೆರೆ-ಹೊರೆಯ ಮಕ್ಕಳು ನನ್ನ ಜೊತೆ ಆಡುವುದಿಲ್ಲವೆಂಬ ವಿಷಯ ನನಗೆ ಅರಿ ವಾಯಿತು.

ಬಿ. ವೈ. ಲಲಿತಾಂಬ

# ಸಂಪಾದಕೀಯ

ಇಸ್ರೇಲ್ ಯೆಹೂದಿಗಳ ಮಾತೃಭೂಮಿ. ಆದರೂ ಯೆಹೂದಿಗಳು ಜಗತ್ತಿನಾದ್ಯಂತ ನೆಲೆಸಿದ್ದಾರೆ. ಇಸ್ರೇಲೀ ಯೆಹೂದಿಗಳು ಹೀಬ್ರೂ, ಯಿಡ್ಡಿಷ್ ಭಾಷೆಗಳಲ್ಲಿ ಬರೆಯುತ್ತಿದ್ದರೆ, ಬೇರೆ ಬೇರೆ ದೇಶಗಳಲ್ಲಿ ನೆಲೆಸಿರುವ ಯೆಹೂದಿಗಳು ಆಯಾ ದೇಶಭಾಷೆಗಳಲ್ಲೂ ತಮ್ಮ ಅಭಿವ್ಯಕ್ತಿಯನ್ನು ಸಾಧಿಸುತ್ತಿದ್ದಾರೆ. ಯೆಹೂದಿಗಳು ಯಾವುದೇ ಭಾಷೆಯಲ್ಲಿ ಬರೆಯಲಿ ಅದರಲ್ಲಿ ಯೆಹೂದಿತನದ ಛಾಪೊಂದು ಇರುತ್ತದೆ ಯೆಂಬುದು ಬಹುಮಟ್ಟಿನ ಸತ್ಯ. ಯೆಹೂದಿಗಳ ಜನಾಂಗಪ್ರಜ್ಞೆ ಅಷ್ಟು ತೀವ್ರವಾದುದು. ಯಿಡ್ಡಿಷ್ ಭಾಷೆಯಲ್ಲಿ ಬರೆದ ಸಿಂಗರ್, ಹೀಬ್ರೂ ಭಾಷೆಯಲ್ಲಿ ಬರೆದ ಅಗ್ನಾನ್, ಇಂಗ್ಲಿಷ್‌ನಲ್ಲಿ ಬರೆದ ಸಾಲಬೆಲೊ ನೊಬೆಲ್ ಪಾರಿತೋಷಕ ಪಡೆದ ಯೆಹೂದೀ ಲೇಖಕರು. ಅವರಂತೆಯೇ ನೊಬೆಲ್ ಬಹುಮಾನಕ್ಕೆ ಅರ್ಹತೆಯುಳ್ಳ ಇನ್ನೂ ಅನೇಕ ಸಮರ್ಥ ಯೆಹೂದೀ ಲೇಖಕರು ಇದ್ದಾರೆ. ಅಂಥ ಕೆಲವು ಲೇಖಕರನ್ನು ಸ್ಥೂಲವಾಗಿಯಾದರೂ ಕನ್ನಡಿಗರಿಗೆ ಪರಿಚಯಿಸುವುದಕ್ಕೆ ಈ ಸಂಚಿಕೆಯಲ್ಲಿ ಪ್ರಯತ್ನಿಸಲಾಗಿದೆ. ಜೊತೆಗೆ ಹೊಸ ಪೀಳಿಗೆಯ ಲೇಖಕರಿಗೂ ಸಾಕಷ್ಟು ಪ್ರಾತಿನಿಧ್ಯ ನೀಡಲಾಗಿದೆ.

ವಿಶ್ವದಾದ್ಯಂತ ನೆಲೆಸಿರುವ, ಜಗತ್ತಿನ ಬೇರೆ ಬೇರೆ ಭಾಷೆಗಳಲ್ಲಿ ಬರೆಯುವ ಎಲ್ಲ ಸಮರ್ಥ ಯೆಹೂದೀ ಲೇಖಕರನ್ನು ಒಂದು ಕಡೆ ತಂದು, ಅವರ ಕೃತಿಗಳ ಪರಿಚಯ ಮಾಡಿಕೊಡುವುದು ಕಷ್ಟಸಾಧ್ಯವಾದ ಕೆಲಸವೇ. ಅನಿಕೇತನದ ಈ ಸಂಚಿಕೆಯು ಆ ನಿಟ್ಟಿನಲ್ಲಿ ಒಂದು ನಮ್ರ ಯತ್ನವೆಂದು ಮಾತ್ರ ಭಾವಿಸಬೇಕು.

ಈ ಸಂಚಿಕೆಗೆ ಪೂರಕವಾಗಿ ಅನಿಕೇತನ ಸಂಪುಟ ಒಂದರ, 2 ಮತ್ತು 3ನೇ ಸಂಚಿಕೆಗಳನ್ನು ಓದುಗರು ಗಮನಿಸಬೇಕು. ಅದರಲ್ಲಿ ಕ್ರಮವಾಗಿ ಸಿಂಗರ್ ಮತ್ತು ಸಾಲಬೆಲೊ ಬಗ್ಗೆ ವಿಶೇಷ ಲೇಖನಗಳಿವೆ, ಅವರ ಕೃತಿಗಳ ಅನುವಾದಗಳಿವೆ, ಸ್ವತಃ ಆ ಲೇಖಕರು ನೊಬೆಲ್ ಪ್ರಶಸ್ತಿ ಪಡೆದಾಗ ನೀಡಿದ ಉಪನ್ಯಾಸಗಳ ಅನುವಾದಗಳಿವೆ.

ಅನಿಕೇತನದ ಈ ವಿಶೇಷಾಂಕವನ್ನು ಸಿದ್ಧಪಡಿಸುವಲ್ಲಿ ಕನ್ನಡದ ಹಿರಿಯ ಲೇಖಕರು ಮತ್ತು ಹೊಸಪೀಳಿಗೆಯ ಸೃಷ್ಟಿಶೀಲರು ನಮಗೆ ನೀಡಿರುವ ಸಹಕಾರವನ್ನು ಕೃತಜ್ಞತೆಯಿಂದ ನೆನೆಯುತ್ತೇವೆ. ಅನಿಕೇತನದ ಜಪಾನೀ ಮತ್ತು ಚೀನೀ ಸಾಹಿತ್ಯ ವಿಶೇಷಾಂಕಗಳಂತೆ, ಈ ಸಂಚಿಕೆಯೂ ಓದುಗರಿಗೆ ಪ್ರಿಯವಾದರೆ ಸಂಪಾದಕರ ಶ್ರಮ ಸಾರ್ಥಕ.

**ಎಚ್. ಎಸ್. ವೆಂಕಟೇಶ ಮೂರ್ತಿ**
(ಸಂಪಾದಕ ಮಂಡಲಿಯ ಪರವಾಗಿ)

## ಈ ಸಂಚಿಕೆಯ ಲೇಖಕರು

---


1. ಬಿ. ಎಸ್. ವೆಂಕಟಲಕ್ಷ್ಮಿ
522 (ಮಹಡಿ), ಸಿ.ಎಮ್.ಎಚ್. ರಸ್ತೆ,
ಇಂದಿರಾನಗರ, ಬೆಂಗಳೂರು-560038

2. ಎಚ್. ಎಸ್. ವೆಂಕಟೇಶಮೂರ್ತಿ
859, 14ನೇ ಕ್ರಾಸ್, 18ನೇ ಮೇನ್
ಬನಶಂಕರಿ 2ನೇ ಘಟ್ಟ,
ಬೆಂಗಳೂರು-560070.

3. ಕೆ. ನರಸಿಂಹಮೂರ್ತಿ
5, 27ನೇ ಕ್ರಾಸ್, ಗೀತ ಕಾಲೋನಿ
ಜಯನಗರ, 4ನೇ ಬ್ಲಾಕ್
ಬೆಂಗಳೂರು-560011

4. ಬಿ. ವೈ. ಲಲಿತಾಂಬ
811, 10ನೇ 'ಎ' ಮುಖ್ಯರಸ್ತೆ
ಮೊದಲ ಹಂತ, ಇಂದಿರಾನಗರ
ಬೆಂಗಳೂರು-560038

5. ಜಿ. ಎಸ್. ಶಿವರುದ್ರಪ್ಪ
ಚೈತ್ರ, 867, 18ನೇ ಮೇನ್
ಬನಶಂಕರಿ ಎರಡನೇ ಘಟ್ಟ
ಬೆಂಗಳೂರು-560070

6. ಬಿ. ಸಿ. ರಾಮಚಂದ್ರಶರ್ಮ
222, 39ನೇ 'ಸಿ' ಕ್ರಾಸ್
5ನೇ ಬ್ಲಾಕ್, ಜಯನಗರ
ಬೆಂಗಳೂರು-560011

7. ಗೋಪಾಲಕೃಷ್ಣ ಅಡಿಗ
60/ಎ, 6ನೇ ಕ್ರಾಸ್
7ನೇ ಬ್ಲಾಕ್ (ಪಶ್ಚಿಮ) ಜಯನಗರ
ಬೆಂಗಳೂರು–560011

8. ಎಚ್. ಎಸ್. ಶಿವಪ್ರಕಾಶ್
ಇಂಗ್ಲಿಷ್ ಅಧ್ಯಾಪಕ
ಗೃಹ ವಿಜ್ಞಾನ ಕಾಲೇಜು
ಬೆಂಗಳೂರು

9. ಎಸ್. ಸಂಧ್ಯಾ C/o ಎಚ್. ಎಸ್. ಶಿವಪ್ರಕಾಶ್
ಗೃಹ ವಿಜ್ಞಾನ ಕಾಲೇಜು
ಬೆಂಗಳೂರು

10. ಎಲ್ಸಿ. ನಾಗರಾಜು
97, ಮಹಡಿ, 5ನೇ ಕ್ರಾಸ್, ಮಲ್ಲೇಶ್ವರಂ
ಬೆಂಗಳೂರು–560005

11. ಸುಮತೀಂದ್ರ ನಾಡಿಗ
ಕನ್ನಡ ಅಧ್ಯಯನ ಕೇಂದ್ರ, ಜ್ಞಾನಭಾರತಿ
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು–560056

12. ಲಿಂಗರಾಜು
26, 9ನೇ 'ಡಿ' ಅಡ್ಡರಸ್ತೆ
ಎಸ್.ಬಿ.ಐ. ಕಾಲೋನಿ
ಜೆ. ಪಿ. ನಗರ 1ನೇ ಹಂತ
ಬೆಂಗಳೂರು–560078

13. ಎ. ಎನ್. ಲಕ್ಷ್ಮೀನಾರಾಯಣ
M–1277, ವಿವೇಕಾನಂದನಗರ
ಮೈಸೂರು–570023

14. ಶೈಲಜಾ ದೇವರಾಜ್
46, 8ನೇ ಮೇನ್, 29ನೇ ಕ್ರಾಸ್
ಮೊದಲ ಮಹಡಿ, ಇಂಡಸ್ಟ್ರಿಯಲ್ ಲೇ ಔಟ್
ಬನಶಂಕರಿ 2ನೇ ಘಟ್ಟ
ಬೆಂಗಳೂರು–560070

15. ಶ್ರೀರಾವ್ ಎಂ. ಎಸ್.
3, 4ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - 560018

16. ನರಹಳ್ಳಿ ಬಾಲಸುಬ್ರಹ್ಮಣ್ಯ
1368, 7ನೇ ಮೇನ್, ಶ್ರೀರಾಮಪುರಂ
ಬೆಂಗಳೂರು–560021

17. ಎಸ್. ದಿವಾಕರ
Kannada Editor, U S I S
American Consulate
Gemini Circle
Madras - 600006

18. ದೇಶ ಕುಲಕರ್ಣಿ (ಡಿ. ಎಲ್. ಉಪೇಂದ್ರನಾಥ್)
192, ಚಿಕ್ಕಪೇಟೆ ಹೌಸಿಂಗ್ ಸೊಸೈಟಿ ಲೇಔಟ್
ಮಾಗಡಿ ರಸ್ತೆ, ಕಾರ್ಡ್ ರಸ್ತೆ
ಬೆಂಗಳೂರು–560040

19. ರಾಘವೇಂದ್ರ ಪಾಟೀಲ
ಮಲ್ಲಾಡಿಹಳ್ಳಿ, ಚಿತ್ರದುರ್ಗ ಜಿಲ್ಲೆ

**ಸಂಪಾದಕರು :**

1. ಬಿ. ವೈ. ಲಲಿತಾಂಬ
811, 10ನೇ 'ಎ' ಮುಖ್ಯಸಸ್ತೆ
ಮೊದಲ ಹಂತ, ಇಂದಿರಾನಗರ
ಬೆಂಗಳೂರು–560038

2. ಆರ್ಶಿಯಸ್ ಸುಂದರಂ
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು–6

3. ಎಚ್. ಎಸ್. ವೆಂಕಟೇಶಮೂರ್ತಿ
859, 14ನೇ ಕ್ರಾಸ್, 18ನೇ ಮೇನ್
ಬನಶಂಕರಿ 2ನೇ ಘಟ್ಟ
ಬೆಂಗಳೂರು–560070

ಸಂ. 3-4
ಜನವರಿ 1991 - ಮಾರ್ಚ್ 1991

ಇದು ಕನ್ನಡೇತರ
ಸಾಹಿತ್ಯ ಪರಿಚಯಕ್ಕೆ ಮೀಸಲಾಗಿರುವ
ಕರ್ನಾಟಕ ಸಾಹಿತ್ಯ ಅಕಾಡೆಮಿ
ಪ್ರಕಟಿಸುತ್ತಿರುವ ತ್ರೈಮಾಸಿಕ

ಸಂಪಾದಕರು :

ಬಿ. ವೈ. ಲಲಿತಾಂಬ
ಆರ್ವಿಯಸ್. ಸುಂದರಂ
ಎಚ್. ಎಸ್. ವೆಂಕಟೇಶಮೂರ್ತಿ

---

ಚಂದಾ ಹಣವನ್ನು ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ. ನಂ. 14/3-ಅ, ನೃಪತುಂಗ ರಸ್ತೆ, ಬೆಂಗಳೂರು–560 002 ಇವರಿಗೆ ಕಳಿಸಬೇಕು.